# ಹೂ ಮನಸ್ಸಿನ ಹೋರಾಟಗಾರ

## ಹಾಗೂ ಇತರ ಲೇಖನಗಳು

ಸವಿತಾ ನಾಗಭೂಷಣ



ಲೋಹಿಯಾ ಪ್ರಕಾಶನ

ಬಳ್ಳಾರಿ

**HOO MANASSINA HORATAGARA**
**HAGU ITARA LEKHANAGALU**
by
**Savitha Nagabhushana,**
HIG-5, 'Nudi', Kallahally Extension,
Vinoba Nagara, Shivamogga - 577 204
Ph: 08182-248574
Mob: 94813 51079

Published by
**LOHIYA PRAKASHANA**
'Kshitija' Kappagallu Road
Gandhi Nagar, Bellary - 583 103
Tel: 08392 - 257412

ISBN: 978-81-87731-25-2

FIRST IMPRESSION: 2011



PAGES: 228

PRICE: Rs. 125

COVER DESIGN: SUDHAKAR DARBE

D.T.P.: SREEDHAR

PRINTED AT:
VISHWAS PRINTS
Chamarajpet, Bangalore.

**ಹೂ ಮನಸ್ಸಿನ ಹೋರಾಟಗಾರ ಮತ್ತು ಇತರ ಲೇಖನಗಳು**
**ಲೇಖಕರು: ಸವಿತಾ ನಾಗಭೂಷಣ**
ಎಚ್.ಐ.ಜಿ.-೫, 'ನುಡಿ', ಕೆ.ಎಚ್.ಬಿ. ಕಾಲೋನಿ,
ಕಲ್ಲಹಳ್ಳಿ ಬಡಾವಣೆ, ವಿನೋಬ ನಗರ
ಶಿವಮೊಗ್ಗ - ೫೭೭೨೦೪

ಪ್ರಕಾಶಕರು:
**ಲೋಹಿಯಾ ಪ್ರಕಾಶನ**
'ಕ್ಷಿತಿಜ' ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಬೆಲೆ: ರೂ. ೧೨೫

ಮುದ್ರಕರು: ವಿಶ್ವಾಸ್ ಪ್ರಿಂಟ್ಸ್, ಚಾಮರಾಜಪೇಟೆ, ಬೆಂಗಳೂರು

**ಅರ್ಪಣೆ**

ಸಮಾಜವಾದಿಗಳಿಗೆ
ಸಲಾಂ
ಹೇಳುತ್ತಾ....

# ಲೇಖಕಿಯ ನುಡಿ

ಕಳೆದ ಇಪ್ಪತ್ತೈದು ವರುಷಗಳಲ್ಲಿ ಬರೆದ ಗದ್ಯಬರಹಗಳ ಸಂಗ್ರಹವನ್ನು ಕೊಂಚ ಅಳುಕುತ್ತಲೇ ಓದುಗರ ಮುಂದಿಡುತ್ತಿದ್ದೇನೆ. ನನಗೀಗ ಐವತ್ತು! ನನ್ನ ಬರಹಗಳಿಗೆ ಇಪ್ಪತ್ತೈದು ತುಂಬಿದೆ.

ಶ್ರಾವಣ ಮಾಸದಲ್ಲಿ ಕೊಂಕಣಸ್ತರ ಮನೆಯಲ್ಲಿ ಒಂದು ಬಗೆಯ ಮೇಲೊಗರವನ್ನು ತಯಾರಿಸಿ ಉಣ್ಣುವ ಪದ್ಧತಿ ಇದೆ. 'ಗಜಬಜೆ' ಎಂದು ಅದಕ್ಕೆ ಹೆಸರು. ಬೆಂಡೆ, ತೊಂಡೆ, ಅಳಸಂದೆ, ಬಟಾಟೆ, ಮಗ್ಗೆ, ಕೀರ್ಲು (ಕಳಲೆ) ಮುಂತಾದ ತರಕಾರಿಗಳನ್ನು ಒಟ್ಟಿಗೆ ಬೇಯಿಸಿ, ಸಾತ್ವಿಕ ಮಸಾಲೆಯನ್ನು (ತೆಂಗು, ಹುರಿದ ಉದ್ದು, ಒಣ ಮೆಸಿನ ಕಾಯಿ, ಹುಣಿಸೆ ಹಣ್ಣು, ಒಗ್ಗರಣೆಗೆ ಸಾಸಿವೆ-ಕರಿಬೇವು) ಸೇರಿಸಿ ತಯಾರಿಸುವ ಸ್ವಾದಿಷ್ಟ ಪದಾರ್ಥವದು. ಕೊಂಕಣಿಗರು ಜೀವ ಬೇಕಾದರೆ ಬಿಟ್ಟಾರು, ಆದರೆ ಗಜಬಜೆ ಬಿಡುವುದಿಲ್ಲ ಎಂಬ ನಾಣ್ಣುಡಿಯೇ ಇದೆ! ನನ್ನ ಈ ಸಂಗ್ರಹವನ್ನು ಯಾಕೋ ಈ ಗಜಬಜೆಗೆ ಹೋಲಿಸುವ ಮನಸ್ಸಾಗುತಿದೆ. ಸಂಪಾದಕೀಯ ಟಿಪ್ಪಣಿ, ಮುನ್ನುಡಿ, ಬೆನ್ನುಡಿ, ಪುಸ್ತಕ ಪರಿಚಯ, ವಿಮರ್ಶೆ, ಪ್ರಶ್ನೋತ್ತರ, ವಿಶ್ಲೇಷಣೆ, ಹಾರೈಕೆ, ಶ್ರದ್ಧಾಂಜಲಿ, ಆತ್ಮಕಥನ, ಅಭಿನಂದನೆ, ಸಂದರ್ಶನ, ಕವಿಗೋಷ್ಠಿಯ ಅಧ್ಯಕ್ಷ ಭಾಷಣ, ಮಾತುಕತೆ, ಅಂಕಣ ಬರಹ, ಪತ್ರ ಹೀಗೇ ಎಲ್ಲವೂ ಇಲ್ಲಿ ಮಿಳಿತಗೊಂಡು 'ಗಜಿಬಿಜಿ'ಯಾಗಿದೆ!?

ಆಯಾ ಸಮಯ ಸಂದರ್ಭಗಳಲ್ಲಿ ಅನೇಕ ಗೆಳೆಯ / ಗೆಳತಿಯರ ಆಗ್ರಹಕ್ಕೆ ಮಣಿದು ಇವುಗಳನ್ನು ಬರೆದಿರುವೆನಾದರೂ ಬರೆದ ಮೇಲೆ 'ಪರವಾಗಿಲ್ಲ ನಾನೂ ಗದ್ಯ ಬರೆಯಬಲ್ಲೆ' ಎಂಬ ವಿಶ್ವಾಸ ಮೂಡಿ ಬರೆದುದನ್ನು ಓದಿ ಸಂತೋಷಪಟ್ಟಿದ್ದೇನೆ. ಈ ಬರವಣಿಗೆಯ ಸಂತೋಷವನ್ನು ಸಾಧ್ಯಮಾಡಿದ ಕನ್ನಡ ಸಾರಸ್ವತ ಲೋಕದ ಹಲವು ಹಿರಿಯರಿಗೆ ಮತ್ತು ಮಿತ್ರರಿಗೆ ನಾನು ಋಣಿ.

ನಾನು ಬರವಣಿಗೆ ಶುರು ಮಾಡಿದ ಆರಂಭದಿಂದಲೂ ನನ್ನ ಬರವಣಿಗೆಗೆ ದಿಕ್ಕು-ದೆಸೆ ತೋರಿದವರು ಹಿರಿಯ-ಕಿರಿಯ ಸಮಾಜವಾದಿ ಮಿತ್ರರು. ಅವರ ನಿರಂತರ ಚರ್ಚೆ, ವಾಗ್ವಾದ, ಜಗಳ, ಪ್ರತಿಭಟನೆ ಮುಂತಾದವುಗಳನ್ನು ಸಮೀಪದಿಂದ ವೀಕ್ಷಿಸಿ ಅದನ್ನು ನನ್ನದೇ ಆದ ರೀತಿಯಲ್ಲಿ ಅರಗಿಸಿಕೊಂಡು ನನಗೆ ತಿಳಿದಂತೆ ಈ ಬರಹಗಳಲ್ಲಿ ಕಾಣಿಸಿರುವೆ. ಇದರ ಯಶಸ್ಸು ಹಾಗೂ ಅಪಯಶಸ್ಸು ಏನಿದ್ದರೂ ಅವರಿಗೇ.... ಹಾಗಾಗಿ ಈ ಸಂಗ್ರಹವನ್ನು

ಪ್ರೀತಿಪೂರ್ವಕವಾಗಿ ಅವರಿಗೇ ಅರ್ಪಿಸಿರುವೆ. ಈ ಸಮಾಜವಾದಿ ಬಳಗದ ಪಟ್ಟಿ ಸಾಕಷ್ಟು ದೊಡ್ಡದಿರುವುದರಿಂದ ಅವರ ಹೆಸರುಗಳನ್ನು ಪ್ರತ್ಯೇಕವಾಗಿ ಉಲ್ಲೇಖಿಸದೆ ಎಲ್ಲರಿಗೂ ಇಲ್ಲಿ ಸಲಾಂ ಹೇಳಿಬಿಡುವೆ.

ಇಂತಹದ್ದೊಂದು ಸಂಗ್ರಹ ಹೊರತರಲು ಪ್ರೇರಣೆ ನೀಡಿದ್ದು ನನ್ನ ಪತಿ ಡಿ.ಎಸ್. ನಾಗಭೂಷಣ. ಅವರ ಒತ್ತಾಸೆಯಿಲ್ಲದಿದ್ದರೆ ಖಂಡಿತವಾಗಿಯೂ ಈ ಸಂಗ್ರಹ ಹೊರಬರುತ್ತಿರಲಿಲ್ಲ. ಇದು ಈ ರೂಪದಲ್ಲಿ ಬೆಳಕು ಕಾಣಲು ಕಾರಣರಾದವರು ಬಳ್ಳಾರಿಯ ಲೋಹಿಯಾ ಪ್ರಕಾಶನದ ಸಮಾಜವಾದಿ ಮಿತ್ರರಾದ ಶ್ರೀ ಚೆನ್ನಬಸವಣ್ಣ. ಅಂದವಾಗಿ ಅಕ್ಷರ ಮತ್ತು ಪುಟವಿನ್ಯಾಸ ಮಾಡಿರುವ ಶ್ರೀಧರ್ ಮತ್ತು ಚೆಂದದ ಮುಖಪುಟ ವಿನ್ಯಾಸ ಮಾಡಿದುವ ಸುಧಾಕರ ದರ್ಬೆ ಇವರೆಲ್ಲರಿಗೂ ಕೃತಜ್ಞತೆಗಳು.

ಇಲ್ಲಿನ ಬರಹಗಳನ್ನು ಮೊದಲು ಪ್ರಕಟಿಸಿದ ಮುಂಗಾರು, ಉದಯವಾಣಿ, *ಸಂವಾದ, ಅಗ್ನಿ, ಶಬ್ದಗುಣ, ಕನ್ನಡ ಜನ ಅಂತರಂಗ, ಕನ್ನಡ ಅಧ್ಯಯನ (ಹಂಪಿ), ಸಂಚಯ, ಒಲವು ವಿಶೇಷಾಂಕ, ಹೊನ್ನಾರು, ನಮ್ಮ ಮಾನಸ, ಅಭಿನವ ಚಾತುರ್ಮಾಸ ವಿಶೇಷ ಸಂಚಿಕೆ, ವಿಕ್ರಾಂತಕರ್ನಾಟಕ,* ಕನ್ನಡ ಪ್ರಭ ಈ ಎಲ್ಲ ಕನ್ನಡ ಪತ್ರಿಕೆಗಳನ್ನೂ ಅದರ ಸಂಪಾದಕರನ್ನೂ ಇಲ್ಲಿ ಕೃತಜ್ಞತೆಯಿಂದ ನೆನೆಯುವೆ.

ವಿಕ್ರಾಂತ ಕರ್ನಾಟಕ ಪತ್ರಿಕೆಯಲ್ಲಿ 'ಸ್ತ್ರೀಮತ' ಅಂಕಣವನ್ನು ಬರೆಯಲೂ ಕಾರಣರಾದ ವಿಕ್ರಾಂತ ಬಳಗದ ರವಿ ಕೃಷ್ಣಾರೆಡ್ಡಿ, ರವೀಂದ್ರ ರೇಷ್ಮೆ, ಬಸವರಾಜು, ಮಲ್ಲನಗೌಡ, ಕಗ್ಗೆರೆ ಪ್ರಕಾಶ್ ಹಾಗೂ ಸಹ ಅಂಕಣಕಾರ್ತಿಯರಾದ ಎಚ್. ನಾಗವೇಣಿ, ವಿನಯಾ, ಆಶಾದೇವಿ ಇವರನ್ನೂ, ಮಾತುಕತೆ/ಸಂದರ್ಶನ ಇವುಗಳ ಹಿಂದಿರುವ ವಿದ್ಯಾರಶ್ಮಿ ಪೆಲತಡ್ಕ, ಎಚ್.ಎಂ. ಶಿವಾನಂದ, ಅಕ್ಷತಾ, ಸಬಿತಾ ಬನ್ನಾಡಿ ಹಾಗೂ ಹೆಸರಿಸಲಾಗದ; ಆದರೆ ಸ್ಮರಣೆಗೆ ಸದಾ ಒದಗಿಬರುವ ಅನೇಕ ಗೆಳೆಯ ಗೆಳತಿಯರನ್ನು ಈ ಸಂದರ್ಭದಲ್ಲಿ ನೆನೆಯುವೆ.

ಇಪ್ಪತ್ತೈದು ವರುಷದ ಹಿಂದೆ ಓದು-ಬರಹ ಪ್ರಪಂಚಕ್ಕೆ ನನ್ನನ್ನು ಪ್ರಪ್ರಥಮವಾಗಿ ಪರಿಚಯಿಸಿದ ಬಾಲ್ಯದ ಗೆಳತಿ, ಅಕ್ಕ ಸುಮನಾಳನ್ನು ಈ ಸಂದರ್ಭದಲ್ಲಿ ನೆನೆಯದೆ ಇರಲಾರೆ.

ಶಿವಮೊಗ್ಗ
೨೩ ಮಾರ್ಚ್ ೨೦೧೧

**ಸವಿತಾ ನಾಗಭೂಷಣ**

# ಅನುಕ್ರಮಣಿಕೆ

## ಸ್ತ್ರೀಮತ (ಅಂಕಣ ಬರಹಗಳು)

# ಬೆವರ ಬಸಿದು, ಉಸಿರ ಕುದಿಸಿ:
# ಅಡಿಗೆ ಮನೆ ಸಾಹಿತ್ಯ ಕುರಿತ ಒಂದು ಟಿಪ್ಪಣಿ

('ಸಾಹಿತ್ಯ ಸಂವಾದ' ಪತ್ರಿಕೆಯ ಸ್ತ್ರೀ ವಿಶೇಷಾಂಕ 'ಮುಡಿ ಮಲ್ಲಿಗೆ'ಗಾಗಿ ಬರೆದ ಸಂಪಾದಕೀಯ ಟಿಪ್ಪಣಿಗಳು)

ಇತ್ತೀಚೆಗೆ ಓದಿದ ಸ್ವಾರಸ್ಯಕರವಾದ ಕಥೆಯೊಂದಿಗೆ ಈ ಸಂವಾದವನ್ನು ಶುರು ಮಾಡುವುದು ಸೂಕ್ತವೆನಿಸುತ್ತಿದೆ. ನಿಜವೊ ಸುಳ್ಳೊ ತಿಳಿಯದು. ರುಚಿಕಟ್ಟಾದ ಕಥೆಯಂತೂ ಹೌದು. ಶ್ರೀರಾಮಕೃಷ್ಣರು ದೇವರನ್ನು ಅರ್ಥಾತ್ ಭಗವತಿಯನ್ನು ಅರಿತುಕೊಂಡದ್ದು ನಾಲಗೆಯ ಮೂಲಕವೆಂದು ಈ ಕಥೆ ಹೇಳುತ್ತದೆ. ಅಂತೆಯೆ ಅವರ ಧ್ಯಾನವೆಲ್ಲಾ ಯಾವತ್ತೂ ಅಡಿಗೆ ಮನೆಯ ಕಡೆಗೆ! ಇದರಿಂದ ಇರುಸು ಮುರುಸುಗೊಂಡ ಶಾರದಾದೇವಿ 'ಹೀಗೆ ಅಡಿಗೆ ಮನೆಗೆ ಎಡತಾಕಿದರೆ ಶಿಷ್ಯರೇನು ಅಂದುಕೊಂಡಾರು? ತಿಂಡಿಪೋತ ಎಂದು ಛೇಡಿಸುವುಲ್ಲವೆ?' ಎಂದು ಆಕ್ಷೇಪಿಸಿದಾಗ 'ರುಚಿ ಅನ್ನೋದು ಇದೆಯಲ್ಲಾ ಅದೇ ದೇವರು!' ಎಂದು ನಾಲಗೆ ಚಪ್ಪರಿಸಿದರಂತೆ ರಾಮಕೃಷ್ಣರು! ಹಾಗೆಯೆ ಪಿಸುದನಿಯಲ್ಲಿ 'ಇದನ್ನು ಶಿಷ್ಯರಿಗೆ ಹೇಳಬೇಡ... ಎಲ್ಲರೂ ಮುನ್ನುಗ್ಗಿ ಬಾಣಸಿಗರಾಗಿ ದಕ್ಷಿಣೇಶ್ವರ ಪಾಕಶಾಲೆಯಾಗಿ ರೂಪಾಂತರಗೊಂಡೀತು!' ಎಂದು ಎಚ್ಚರಿಸಿದರಂತೆ. ವಚನವೇದದ ಪುಟ ಪುಟಗಳಲ್ಲೂ ಸಂದೇಶ, ಜಿಲೇಬಿ ಇತ್ಯಾದಿ ಸಿಹಿ ತಿಂಡಿಗಳ ಪ್ರಸ್ತಾಪ ಇದ್ದೇ ಇದೆ. ಕೊನೆಗೆ ರಾಮಕೃಷ್ಣರು ಗಂಟಲು ಹುಣ್ಣು ರೋಗಕ್ಕೆ ತುತ್ತಾಗಿ ಏನೂ ತಿನ್ನಲಾಗದ ಸ್ಥಿತಿ ತಲುಪಿ, ಶಿಷ್ಯರ ನಾಲಗೆಯ ಮೂಲಕ ರುಚಿ ಕಂಡುಕೊಳ್ಳುವ ಕಾಣ್ಕೆಯೂ ಇದೆ.

ಇದೆಲ್ಲಾ ಯಾಕೆ ಹೇಳಬೇಕಾಯಿತೆಂದರೆ ಅಡಿಗೆಗೆ, ಅಡಿಗೆ ಮಾಡುವವಳಿಗೆ ದೇವರನ್ನೇ ಕಾಣಿಸುವ ಶಕ್ತಿ ಇರುವುದಾದರೆ ಕಿಂಚಿತ್ ಸಾಹಿತ್ಯವನ್ನು ಉಣಬಡಿಸುವ ಸಾಮರ್ಥ್ಯವಿಲ್ಲವೆ ಎಂದು ಪ್ರಶ್ನಿಸಿಕೊಳ್ಳುವುದಕ್ಕಾಗಿ... ಈ ಸಂಚಿಕೆಯ ಮೂಲಕ ಉಣಬಡಿಸಿರುವುದು 'ಅಡಿಗೆ ಮನೆ ಸಾಹಿತ್ಯ'. ಪ್ರಥಮ ಬಾರಿಗೆ ಅಡಿಗೆ ಮಾಡಿ ಉಣಬಡಿಸಿದ ಹುಡುಗಿಯರ ಕಾತರ–ಕಳವಳ ಇಲ್ಲಿದೆ! ಅಷ್ಟಕ್ಕೂ ನಮ್ಮ ಹೆಣ್ಣು ಮಕ್ಕಳಿಗೆ ಅಡಿಗೆ ಮನೆಯಲ್ಲಿ ಸಿಗುವಷ್ಟು privacy ಇನ್ನೆಲ್ಲಿ ಸಿಕ್ಕೀತು? ಒಂದರ್ಥದಲ್ಲಿ ಇಲ್ಲಿನ ಬರಹಗಳು ಅಡಿಗೆ ಮನೆಯಲ್ಲೇ ಸಿದ್ಧವಾದವುಗಳು ಎಂದಿಟ್ಟುಕೊಳ್ಳಿ – ತರಕಾರಿ

ಹೆಚ್ಚುತ್ತಲೋ ಖಾರ ಕಿವಿಚುತ್ತಲೋ ಒಗ್ಗರಣೆ ನೀಡುತ್ತಲೋ ರೂಪುಗೊಂಡ ಕತೆ, ಕಾವ್ಯ, ವಿಮರ್ಶೆಯ ತುಣುಕುಗಳು ಇಲ್ಲಿವೆ. ಶ್ರೀರಾಮಕೃಷ್ಣರ ತಿಂಡಿಪೋತಿಕೆಯೇ ಈ ವಿಶೇಷಾಂಕದ ಹಿಂದಣ ಪ್ರೇರಣೆ! ಶ್ರೀರಾಮಕೃಷ್ಣರ ರುಚಿಯ ಕತೆ ಒತ್ತಟ್ಟಿಗಿರಲಿ, ಅವರ ಇಹ–ಪರಗಳನ್ನು ತುಂಬಿಕೊಂಡವಳೂ ಅವಳೇ. ದೇವರನ್ನು ಕಾಣಿಸುವವಳು, ಕಾಣದಂತೆ ಅಡ್ಡ ಬರುವವಳು, ತಾಯಿ, ಕಾಮಿನಿ, ಪ್ರೇಯಸಿ ಹೀಗೆ 'ಅವಳನ್ನು' ವೈಭವೀಕರಿಸುವುದರ ಮೂಲಕ ಸಮಸ್ತ ಹೆಣ್ಣುಮಕ್ಕಳ ಕುಲಕ್ಕೆ ಅಖಿಲಾಂಡ ಗೌರವ ಸಲ್ಲಿಸಿದ್ದಾರೆ. 'ಭಕ್ತಿಯೊ... ಭವಿಯೊ... ಹೆಣ್ಣುಮಕ್ಕಳ ಹತ್ತಿರ ಸುಳಿದಾಡಬೇಡ' ಎನ್ನುವವರೂ ಅವರೇ... ರಾಧೆಯ ಭಾವ ಆರೋಪಿಸಿಕೊಂಡು ಶ್ಯಾಮಸುಂದರನಿಗಾಗಿ ಪರಿತಪಿಸುವವರೂ ಅವರೇ... ಶಿಷ್ಯರು ಕೀಟಲೆ ಮಾಡಿದರೆಂದು ಭಗವತಿಯ ಹತ್ತಿರ ದೂರು ತೆಗೆದುಕೊಂಡು ಹೋಗುವವರೂ ಅವರೇ..., ಬ್ಯಾಂಕಿನಲ್ಲಿ ಹಣ ಜಮೆಗೊಂಡಾಗ ಎರಡು ಚಿನ್ನದ ಬಳೆಗಳನ್ನು ಮಾಡಿಸಿ ಶಾರದಾದೇವಿಗೆ ಕೊಟ್ಟವರೂ ಅವರೇ... ಇದ್ದಬದ್ದ ಸಿಹಿ ತಿಂಡಿಯನ್ನು ಶಾರದಾದೇವಿ ಶಿಷ್ಯರಿಗೆ ಹಂಚಿ ಖಾಲಿ ಮಾಡಿದಾಗ ನಖಶಿಖಾಂತ ಕೋಪಗೊಂಡು ಶಾರದಾದೇವಿಯ ಮೇಲೆ ಎಗರಾಡಿದವರೂ ಅವರೇ..., ಅನತಿ ಸಮಯದಲ್ಲೇ ಆಕೆ ಕಣ್ಣೀರುಗರೆದದ್ದಾದರೆ ಇಷ್ಟು ದಿನದ ಸಾಧನೆ ನೀರಿನಲ್ಲಿ ಹೋಮ ಮಾಡಿದ ಹಾಗೆ ಎಂದು ಪರಿತಪಿಸಿ ತಪ್ಪಿಗೆ ಕ್ಷಮೆಯಾಚಿಸಿದವರೂ ಅವರೇ... ಇದು ಪ್ರಕೃತಿ–ಪುರುಷ ಸಂಬಂಧವನ್ನು ಅದರ ಸಮಸ್ತ ಗೂಢತೆ–ನಿಗೂಢತೆಯೊಂದಿಗೆ ಬಿಂಬಿಸುವ ಕಥೆಯೇ ಆಗಿದೆ. ಅಂತೆಯೆ ಅಡಿಗೆ ಮನೆ ಸಾಹಿತ್ಯವನ್ನು ಅಭಿಮಾನದಿಂದ ಉಣಬಡಿಸುವಲ್ಲಿ ನೆರವಾಗಿದೆ ಈ ಗಾಥೆ.

ಸದ್ಯ ನನ್ನ ಕೊರಗೆಂದರೆ ನಿಜವಾದ ಅರ್ಥದಲ್ಲಿ ನಾವು ಅಡಿಗೆಮನೆ ಸಾಹಿತ್ಯ ನಿರ್ಮಾಣ ಮಾಡಿಲ್ಲ ಎಂಬುದೇ ಆಗಿದೆ. ಅಡಿಗೆ ಮನೆಯಿಂದ ಹೊರಗಿರುವ, ಹೊರನೋಟಕ್ಕೆ ಆರಾಮ ಜೀವಿಯಾಗಿ ಕಾಣಿಸುವ ಗಂಡಿನ ಮೇಲೆಯೇ ಮೈ–ಮನಸ್ಸುಗಳನ್ನು ಕೇಂದ್ರೀಕರಿಸಿ ಉಪ್ಪು ಹಾಕುವುದನ್ನೇ ಮರೆತ ಅಥವಾ ಹೆಚ್ಚಾಗಿ ಖಾರ ಸುರಿದು, ಸಪ್ಪೆಯೊ, ಸಿಹಿಯೊ, ಒಗರೊ, ಖಾರವೊ ದೇವರೇ ಯಾಕೆ ಹೀಗೆ? ಎಂದು ಪ್ರಶ್ನಿಸುತ್ತಲೇ ಉಪ್ಪು–ಹುಳಿ–ಖಾರ–ಸಿಹಿಗಳನ್ನು ಸಮತೋಲನಗೊಳಿಸಿಕೊಂಡು ಸಿದ್ಧಪಡಿಸಿದ ಬರಹಗಳು ಇಲ್ಲಿವೆ. ಹೊರಗೆ ಕೂತವನ ಮೇಲೆ ಕುದಿಯುವುದಕ್ಕಿಂತ, ಖುದ್ದು ಖುದ್ದು ಮೆಲ್ಲಗೆ ಮಲ್ಲಿಗೆಯ ಹಾಗೆ ಅರಳುವ ಅನ್ನದ ಸಂಭ್ರಮವನ್ನು ನಿರೂಪಿಸುವ ಇಲ್ಲಿನ ಬರಹಗಳು, ಅರಳಿಸುವುದರ/ ಅರಳುವುದರಲ್ಲೇ ಸಾರ್ಥಕ್ಯ ಇರುವುದೆಂಬ ಎಚ್ಚರವನ್ನೂ ಹೊಳೆಸುತ್ತದೆ.

ಅಡಿಗೆ ಮನೆಯೆ ನಮ್ಮ ಸೋಲಿಗೆ ಕಾರಣ ಎಂದು ಭಾವಿಸಿದ್ದ ನಾವು ಅದನ್ನು ಬಿಟ್ಟು ಹೊರ ಬರುತ್ತಿರುವ ಸಂದರ್ಭದಲ್ಲೇ ಅದರ ಮಹತ್ವವನ್ನು ಅರಿಯತೊಡಗಿದ್ದೇವೆ. ಅಡಿಗೆ ಮನೆ ಬಿಟ್ಟು ಹೊರಬರುತ್ತಿರುವ ನಾವು ಹೋಗುತ್ತಿರುವುದಾದರೂ ಎಲ್ಲಿಗೆ? ನಲ್ಲಿಯ ಮುಂದೆ, ಸೀಮೆಎಣ್ಣೆ ಡಬ್ಬ ಹಿಡಿದು ಅಂಗಡಿಯ ಮುಂದೆ, ಊಟ ಹಿಡಿದು ಮಕ್ಕಳ ಶಾಲೆಗಳ ಮುಂದೆ, ಬ್ಯೂಟಿ ಪಾರ್ಲರುಗಳ ಮುಂದೆ, ಗುಮಾಸ್ತಗಿರಿಯ ಧೂಳು

ಮೆತ್ತಿಕೊಂಡ ಬ್ಯಾಂಕು ಆಫೀಸುಗಳ ಮುಂದೆ. ಇದರಿಂದ ಪಡೆದದ್ದಕ್ಕಿಂತ ಕಳಕೊಂಡಿದ್ದೆ ಹೆಚ್ಚು ಅನ್ನಿಸುವ ಪರಿಸ್ಥಿತಿ: ಒಳಗೂ–ಹೊರಗೂ ದುಡಿತ; ಜೊತೆಗೆ ಹಿಂದೆ ಇದ್ದ ಅಲ್ಪಸ್ವಲ್ಪ ಆರಾಮದಲ್ಲೂ ಕಡಿತ... (ನಮ್ಮ ಲಕ್ಷ್ಯವೆಲ್ಲಾ ಕಮಲದೆಡೆಗೇ ಆದ್ದರಿಂದ ಸದ್ಯದ ಪರಿಸ್ಥಿತಿಯಲ್ಲಿ ಈ ಕೆಸರು ಸಹಜ ಮತ್ತು ಅನಿವಾರ್ಯವೂ ಇರಬಹುದು.) ಇದು ಬಿಡುಗಡೆ ಎಂಬ ಮರೀಚಿಕೆ ನಮ್ಮಿಂದ ಬೇಡುತ್ತಿರುವ ಕಿಂಚಿತ್ ಲಂಚವೇ ಇರಬಹುದು! ನನ್ನ ತಾಯಿಗೆ ಕಡಿಮೆ ಸ್ವಾತಂತ್ರ್ಯವೂ ಹೆಚ್ಚು ಕರ್ತವ್ಯವೂ ಇದ್ದುದನ್ನು ನಾನು ನೋಡಿದ್ದೇನೆ. ನಾನು ಹೆಚ್ಚು ಜವಾಬ್ದಾರಿಯನ್ನೂ ನಿಭಾಯಿಸುತ್ತಿದ್ದೇನೆ ಎಂದೇ ನನಗೆ ಭಾಸವಾಗಿದೆ, ಮುಂದೆ ನನ್ನ ಮಗಳು ಹೆಚ್ಚು ಸ್ವಾತಂತ್ರ್ಯವನ್ನೂ ಕಡಿಮೆ ಜವಾಬ್ದಾರಿಯನ್ನೂ ಪಡೆದೇ ತೀರುವಳು ಎಂಬ ನಿರೀಕ್ಷೆ. ಒಳಗೆ ಕತ್ತಲೆ ಎಂದು ದುಃಖಿಸಿದ್ದು ಹೊರಗೆ ಬೆಳಕು ಎಂದು ಸಂಭ್ರಮಿಸಿದ್ದು, ಒಳಗೂ–ಹೊರಗೂ ಒಂದೇ ಎಂಬ ವಿವೇಕ ಎಚ್ಚೆತ್ತಿರುವುದು, ಮನೆಗೆಲಸವೂ–ಹೊರಗೆಲಸವೂ 'ಕೆಲಸ' ಎಂಬುವುದಕ್ಕೆ, ಅದು ಒಳಗಿನದ್ದೆ ಆಗಲಿ, ಹೊರಗಿನದ್ದೆ ಆಗಲಿ ಅದಕ್ಕೆ ಸಿಗಬೇಕಾಗಿರುವ ಗೌರವ, ಮನ್ನಣೆಯ ಪ್ರಶ್ನೆಯಾಗಿ ರೂಪಾಂತರಗೊಂಡು, ನಾವು ಒಪ್ಪಿದಂತೆ ಬದುಕ ಬಯಸುವ, ನಮ್ಮ ಆಸೆ, ನಿರೀಕ್ಷೆಗಳಿಗೆ, ಮನ್ನಣೆ ಸಿಗಬೇಕೆಂಬುದೇ ಆಗಿದೆ. ವಿವಾಹ, ತಾಯ್ತನ, ಸತೀತ್ವ, ಪಾತಿವ್ರತ್ಯ ಇತ್ಯಾದಿಗಳು ಹೊರಗಿನಿಂದ ಹೇರಲ್ಪಡದೆ, ತಮ್ಮ ಆಯ್ಕೆಗೇ ಬಿಡಬೇಕಾದವುಗಳು ಎಂಬ ಧೋರಣೆಯೂ ಇದರ ಹಿನ್ನೆಲೆಯಲ್ಲಿದೆ.

'ನೀನಿದ್ದೀಯಾ ನಿನ್ನನ್ನು ತೊಡೆದು ಹಾಕಲಾರೆ' ಎಂಬ ಅರಿವೂ ಗಂಡಿಗೂ ಬರುತ್ತಾ ಇದೆ. ಒಳಗೂ–ಹೊರಗೂ ದುಡಿತದ ನಡುವೆಯೂ ಉಲ್ಲಾಸದಿಂದ ಚಿಗುರುತ್ತಿರುವ ಹೆಣ್ಣಿನ ಬಗ್ಗೆ ಹೆಚ್ಚಿನ ಗೌರವವೂ, ಕಿಂಚಿತ್ ಮಾತ್ಸರ್ಯವೂ ಉಂಟಾಗಿರಲಿಕ್ಕೆ ಸಾಕು. Caretaker ಇಲ್ಲದೆ ಅನಾಥ ಪ್ರಜ್ಞೆ ಉಂಟಾಗಿರಲಿಕ್ಕೆ ಸಾಕು. ನನ್ನದೂ ತಪ್ಪಿದೆ ಎಂದು ಭಾಸವಾಗಿರಲಿಕ್ಕೂ ಸಾಕು. ಒಂದು ಹೂದಂಡೆಗೆ, ಒಂದು ರೇಶಿಮೆಯ ಸೀರೆಗೆ ಈಗವನು ಹೆಂಡತಿಯನ್ನು ಒಲಿಸಿಕೊಳ್ಳಲಾರ. ನೀನೂ ನನ್ನಂತೆಯೆ... ನಿಜ ಹೇಳಬೇಕೆಂದರೆ, ನನಗಿಂತ ಒಂದಿಂಚು ಮೇಲು ಎಂಬ ಪ್ರೀತಿಯ ಭಾವ ಸ್ಫುರಿಸಿದಲ್ಲಿ ಮಾತ್ರ ನೆಮ್ಮದಿ ಸಿಗುವಂತಹ ಸ್ಥಿತಿ ಅವನಲ್ಲಿ ನಿರ್ಮಾಣವಾಗುತ್ತಿದೆ. ಕೊಡು–ಕೊಳ್ಳುವಿಕೆಯ ಸುಖವನ್ನು 'ನಿನಗೆ ನೀನು' 'ನನಗೆ ನಾನು' ಎಂಬುದು ನುಂಗಿ ಹಾಕುತ್ತಿದೆ. ಮೊನ್ನೆ ಮೊನ್ನೆಯ ತನಕ ಮಗುವಿನಂತೆ ಲಾಲಿಸಲ್ಪಡುತ್ತಿದ್ದ, ಪಾಲಿಸಲ್ಪಡುತ್ತಿದ್ದ ಗಂಡಿಗೆ ಈ ಬದಲಾದ ಪರಿಸ್ಥಿತಿಗೆ ಒಗ್ಗಿಕೊಳ್ಳುವುದಕ್ಕೆ 'ಅಹಂ' ಅಡ್ಡಿ ಮಾಡುತ್ತಿರುವುದು ಸಹಜವೇ. ಈ ಬದಲಾವಣೆ ಅನಿವಾರ್ಯ ಮತ್ತು ಸಹಜ ಎಂದು ಒಪ್ಪಿಕೊಳ್ಳುವುದರಲ್ಲೇ... ಅದರ ಓರೆ–ಕೋರೆಗಳನ್ನು ತೊಡೆದು ಹಾಕಿ ಪ್ರೀತಿಯಿಂದ ಅದನ್ನು ಒಗ್ಗಿಸಿಕೊಳ್ಳುವುದಕ್ಕೆ ನೆರವಾಗುವುದರಲ್ಲೇ ಸದ್ಯದ ಬಿಡುಗಡೆಯ ಆಶಯದ ಯಶಸ್ಸು ಅಡಗಿದೆ ಎಂದೆನಿಸುತ್ತದೆ. ಸಮಾನತೆ ಎನ್ನುವುದು ಎಂದಾದರೂ ಸಾಧಿಸಲ್ಪಡಬಹುದಾದ ಸ್ಥಿತಿಯೆ?! ಅದು ಏನಿದ್ದರೂ ಏತ–ದೂತದ ಆಟವೇ ಸರಿ. ಏತ–ದೂತ, ದೂತ-ಏತ ಆಗಬಹುದಷ್ಟೇ.

ಪರಸ್ಪರ ಪ್ರೀತಿಯ ಭಾವ ಮಾತ್ರ ಈ 'ನಾನು ನೀನು' ಎಂಬ ಭಾವ ಕರಗಿಸಬಲ್ಲದು. ಯಾಕೆ... ಇದು ಗುರಿಯಿಲ್ಲದ ನಡಿಗೆ, ಉತ್ತರವಿಲ್ಲದ ಪ್ರಶ್ನೆಯೆಂದೇ ಭಾಸವಾಗುತ್ತಿದೆ?

ಹೀಗೆ ಅನ್ನಿಸಲೂ ಕಾರಣವಿದೆ. ಸದ್ಯ ನಮ್ಮ ಸ್ಥಿತಿ ಹೇಗಿದೆಯೆಂದರೆ ಹುಡುಗರ ಬೆನ್ನಿಗೆ ಬಾಸುಂಡೆ ಬರುವ ಹಾಗೆ ಚೆಂಡು ಬೀಸಿ ಲಗೋರಿ ಆಡುತ್ತಿದ್ದ ಹುಡುಗಿ 'Time please' ಎಂದು ಕಿರಬೆರಳೆತ್ತಿ ಮನೆಗೆ ಧಾವಿಸಿ, ದೊಡ್ಡಕ್ಕನ ಮದುವೆಗೆ ಸಂಬಂಧಪಟ್ಟಂತೆ ಅಜ್ಜಿ, ಅಮ್ಮ, ಇತರೆ ಹೆಂಗಳೆಯರ ಮಾತುಕತೆಗೆ ಮನಸೋತು 'ಲಗೋರಿ'ಯನ್ನೂ ಮರೆತು ಅಲ್ಲೇ ಕುಳಿತುಬಿಟ್ಟ ಹಾಗೆ. ಒಂದೆಡೆ ಮದುವೆ, ಮನೆ, ಮಕ್ಕಳು, ಅಡಿಗೆ... ಈ ಚಕ್ರವ್ಯೂಹದೊಳಗೆ ಪ್ರವೇಶಿಸುವ ಹುಮ್ಮಸ್ಸು. ಆದರೆ ಅಭಿಮನ್ಯುವಿನ ಪಾಡು ಪಡಬಾರದೆಂಬ ಕಟ್ಟೆಚ್ಚರ. ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ ಎಂಬ ಸ್ಥಿತಿ. ದಡದಲ್ಲೊಂದು ಕಾಲು, ದೋಣಿಯಲ್ಲೊಂದು. ಈ ಅವ್ಯವಸ್ಥೆಯ ಖಾಯಂ ಫಲಗಳಾದ ದುಃಖ–ದುಮ್ಮಾನ, ಜಿಗುಪ್ಸೆ, ಬೇಸರ, ಆತಂಕ, ನಿರೀಕ್ಷೆ ಸದ್ಯ ನಮ್ಮನ್ನು ಎಡಬಿಡಂಗಿಗಳನ್ನಾಗಿ ಮಾಡಿದೆ.

ಒಂದು ಸಮಸ್ಯೆಯ ಪರಿಹಾರದ ಹೊಟ್ಟೆಯಲ್ಲೇ ಮತ್ತೊಂದು ಸಮಸ್ಯೆಯು ಮಿಸುಕಾಡಲು ಮೊದಲುಗೊಳ್ಳುವುದರಿಂದ ಈ ಅವಸ್ಥೆ ಎಂದಾದರೂ ಮುಗಿಯುವುದು ಎಂಬ ನಿರೀಕ್ಷೆ ಇಟ್ಟುಕೊಳ್ಳುವುದು ಎಷ್ಟು ಸಾಧು? ಸದ್ಯ ನಾನು ಪೆನ್ನು ಹಿಡಿದು ನಾಲ್ಕು ಅಕ್ಷರ ಗೀಚುತ್ತಿರುವ ಸದ್ಯದ ಪರಿಸ್ಥಿತಿ ಯಾರ ಪರಿಶ್ರಮದ್ದು? ಅದೆಷ್ಟೋ ಶತಮಾನಗಳ ಹಿಂದಣ ಹೆಣ್ಣುಮಕ್ಕಳ ಎಚ್ಚರ, ವಿವೇಕ, ಆಕಾಂಕ್ಷೆ, ಪ್ರತಿಭಟನೆಯ ಅಲೆಗಳನ್ನು ಹಿಡಿಯಬೇಕಾಗುತ್ತದೆ. ಸದ್ಯ ನಾವು ಉತ್ತು ಬಿತ್ತಿದ ಬೀಜ ಚಿಗುರಿ, ಮರವಾಗಿ ಯಾರಿಗೆ ನೆರಳು ನೀಡುತ್ತದೆಯೋ... ಯಾರು ಬಲ್ಲರು? ಅಲೆಗಳು ಚಲಿಸುತ್ತಲೇ ಇರುತ್ತವೆ. ಅವನ್ನು ಹಿಡಿಯಲು ಸಾಧ್ಯವೆ? ಪರಂಪರೆಯ ಪ್ರಜ್ಞೆ, ಅದರ ಅಗತ್ಯ, ಅದನ್ನು ಮುಂದುವರಿಸಿಕೊಂಡು ಹೋಗುವ ಆಕಾಂಕ್ಷೆ ಸದ್ಯ ಸಾಹಿತ್ಯ ರಚಿಸುತ್ತಿರುವ ನಮ್ಮ ಮಹಿಳೆಯರಲ್ಲೂ ಇದೆ ಎಂಬುದಕ್ಕೆ ಇಲ್ಲಿನ ಅನೇಕ ಬರಹಗಳು ಸಾಕ್ಷಿಯಾಗಿವೆ.

ಒಂದು ಹೆಣ್ಣು ಮಗು ಈ ಭೂಮಿಗೆ ಬಂದು ಬಿದ್ದಾಗಿನಿಂದಲೇ... ಪಿಳಿ ಪಿಳಿ ಕಣ್ಣು ಬಿಟ್ಟು ಅಚ್ಚರಿಯಿಂದ ಪ್ರಪಂಚವನ್ನು ಮೊಟ್ಟ ಮೊದಲ ಬಾರಿಗೆ ಕಂಡ ದಿನದಿಂದಲೇ 'ಸ್ತ್ರೀ ದೃಷ್ಟಿಕೋನ' ಉದಿತವಾಯಿತು ಎಂದೇ ನಂಬುವವಳು ನಾನು. 'ಸ್ತ್ರೀತ್ವ'ವೆಂಬುದು ಅಂತರ್ಗಾಮಿ ನದಿಯಾಗಿ ಹರಿಯುತ್ತಲೇ ಇದೆ. ಮದುವೆ–ಮನೆ–ಮಕ್ಕಳು–ಸಂಸಾರ ಇತ್ಯಾದಿಗಳನ್ನು ತೆಕ್ಕೆಗೆ ತೆಗೆದುಕೊಂಡು ಬರೆದ ವೈದೇಹಿ, ವೀಣಾ, ಸಾರಾ ಅವರುಗಳ ಕಥೆ ಕಾದಂಬರಿಗಳಲ್ಲಿನ ಪಾತ್ರಗಳು ಸ್ತ್ರೀ ದೃಷ್ಟಿಕೋನವನ್ನು ಅತ್ಯಂತ ಸಮರ್ಥವಾಗಿ ಅನಾವರಣಗೊಳಿಸಿಲ್ಲವೆ? ಮದುವೆ, ಮನೆ, ಮಕ್ಕಳು ಇವು ಸವಾಲುಗಳೆ? ಅಥವಾ ಸಂಭ್ರಮಗಳೆ? ಬಹುಶಃ ಸತ್ಯ ಸವಾಲು–ಸಂಭ್ರಮಗಳ ನಡುದಾರಿಯಲ್ಲಿರಬೇಕು. 'ಅಯ್ಯೋ... ಒಂದು ಕ್ಷಣ ಕೂಡ ಮಗು ನನ್ನ ಬಿಟ್ಟು ಇರೋಲ್ಲ' ಎಂದು ಅಗಾಧ ಹೆಮ್ಮೆಯಿಂದ

ತಾಯಂದಿರು ನುಡಿಯುವುದು ಸರ್ವೇ ಸಾಮಾನ್ಯ. 'ಅಪ್ಪ ಬೇಕೊ... ಅಮ್ಮ ಬೇಕೊ...' ಎಂದು ಕೀಟಲೆಯ ಪ್ರಶ್ನೆಗಳನ್ನು ಮಗುವಿಗೆಸೆದಾಗ ಅಪ್ಪನ ಮುಖ ಒಮ್ಮೆ ನೋಡಿ ಧೊಪ್ಪೆಂದು ಅಮ್ಮನ ಮಡಿಲಿಗೆ ಬೀಳುವಾಗ ರಪ್ಪೆಂದು ಮುಖಕ್ಕೆ ಹೊಡೆದಂತಾಗುವುದು ಗಂಡಿಗೆ. ಇದಕ್ಕಿಂತ ದೊಡ್ಡ ತಲ್ಲಣವಿದೆಯೆ? ಆ ಮಮಕಾರದ 'ಅಹಂ' ಬಿಟ್ಟುಕೊಡಲು ಹೆಣ್ಣು ಸಿದ್ಧವಿರುವಳೇನು?

ಇದೇ ಸಮಯಕ್ಕೆ ಪ್ರತಿಯೊಬ್ಬ ಗಂಡಿನಲ್ಲೂ ಪ್ರತಿಯೊಬ್ಬ ಹೆಣ್ಣಿನಲ್ಲೂ ತಾಯಿಯಾಗಲಿ, ತಂದೆಯಾಗಲಿ ಇಲ್ಲವೆಂದು ಹೇಗೆ ಹೇಳುವುದು? ಗರ್ಭಧಾರಣೆಯಾಗಲಿ, ಲಾಲನೆಪಾಲನೆಯಾಗಲಿ, ಸಂಭ್ರಮ–ಸವಾಲು ಎರಡೂ ಆಗದೆ ಸಹಜವಾಗಿ ಸ್ವೀಕೃತವಾಗಿರುವುದನ್ನು ಮಹಿಳೆಯರ ಬರಹಗಳಲ್ಲಿ ಕಾಣಬಹುದು. ಇನ್ನು ಕುವೆಂಪುರವರ 'ಕಾನೂರು ಹೆಗ್ಗಡತಿ', ಕಾರಂತರ 'ಮೈಮನಗಳ ಸುಳಿಯಲ್ಲಿ', ಲಂಕೇಶರ 'ಅವ್ವ' ಪದ್ಯದಲ್ಲಿ ಮಹಾದೇವರ 'ಒಡಲಾಳ'ದಲ್ಲಿ, ತೇಜಸ್ವಿಯವರ 'ಕಿರಗೂರಿ'ನಲ್ಲಿ ಆಯಾ ಹೆಣ್ಣು ಪಾತ್ರಗಳನ್ನು ಕಡೆದವರು ಆಯಾ ಲೇಖಕರ ವ್ಯಕ್ತಿತ್ವದಲ್ಲಿ ಅಭಿನ್ನವಾಗಿರುವ ಹೆಣ್ಣುಗಳೇ– ಅರ್ಥಾತ್ ತಾಯಿಯೊ, ಪ್ರೇಯಸಿಯೊ, ಚಂಚಲೆಯೊ, ಗಯ್ಯಾಳಿಯೊ... ಎಂದೇ ನನ್ನ ಭಾವನೆ. ಸಾಕವ್ವನ ಪಾತ್ರಕ್ಕೆ ನ್ಯಾಯ ದೊರೆತಿದ್ದರೆ... ಅದನ್ನು ಲೇಖಕರಲ್ಲಿದ್ದ 'ತಾಯಿ' ಚಿತ್ರಿಸಿರುವದರಿಂದ, 'ನಾನು ಹೇಮಿಗಂಡ' ಎಂದು ಸ್ವರ್ಗದ ಬಾಗಿಲು ತೆರೆಸುವ ಕುವೆಂಪು ಕಾದಂಬರಿಗಳಲ್ಲಿನ ಗಂಡು–ಹೆಣ್ಣು ಪಾತ್ರಗಳು ಇನ್ನೇನು? ನಡುವೆ ಸುಳಿವಾತ್ಮನು ಹೆಣ್ಣೂ ಅಲ್ಲ ಗಂಡೂ ಅಲ್ಲ ಅಂದಾಗ, ಆತ್ಮನೇ ಇಲ್ಲ ಎಂಬ ಬುದ್ಧನ ನಿಲುವಿಗೆ ಬದ್ಧವಾಗುವುದಾದರೆ, ಪ್ರತಿಯೋರ್ವ ಜೀವಿಯೂ ಅರ್ಧನಾರೀಶ್ವರನೆಂಬ ನಿಲುವು ಹೆಚ್ಚು ಸಮ್ಮತವಾಗುತ್ತದೆ. ಈ ನಿಟ್ಟಿನಲ್ಲಿ ಯೋಚಿಸಿದಾಗ ಮದುವೆ–ಮನೆ–ಮಕ್ಕಳು, ಹೊರಗೆಲಸ– ಮನೆಗೆಲಸ, ಸ್ತ್ರೀತ್ವ, ಪುರುಷತ್ವ, ತಾಯ್ತನ– ತಂದೆತನ ಯಾರೇ ಒಬ್ಬರ ಸ್ವತ್ತಾಗದೆ; ಅತ್ತ ಸವಾಲೂ ಆಗದೆ ಇತ್ತ ಸಂಭ್ರಮವೂ ಆಗದೆ ಕ್ವಚಿತ್ ವಾಸ್ತವವಾಗಿ ಗೋಚರವಾಗುತ್ತದೆ. ಹಾಗಾಗಿ ಹೆಣ್ಣಾಗಿ ಬರೆಯುವುದೊ... ಗಂಡಾಗಿ ಬರೆಯುವುದೊ ಇತ್ಯಾದಿ ಉಪದೇಶಗಳಿಗೆ ತಲೆಕೆಡಿಸಿಕೊಳ್ಳದೆ ಸುಮ್ಮನೆ ತಿಳಿದಂತೆ, ಇಡೀ ವ್ಯಕ್ತಿತ್ವವನ್ನು ತೊಡಗಿಸಿಕೊಂಡು ಬರೆಯುವುದೇ ಸೂಕ್ತವೆನಿಸುತ್ತದೆ.

ಈ ನಮ್ಮ ವಿಶೇಷ ಸಂಚಿಕೆಯಾಗಲಿ, ಇಲ್ಲಿನ ಬರಹಗಳಾಗಲಿ ತಂತಾನೆ ಸಂಪೂರ್ಣ ವೇನೂ ಅಲ್ಲ. ಅಕ್ಷರದ ಬಗ್ಗೆ ಪ್ರೀತಿ ತೋರಿದ ಮಹಿಳೆಯರು, ಕಲಿಕೆಯ ಸದಾವಕಾಶ ಪಡೆದುಕೊಂಡ ಮಹಿಳೆಯರು, ತಾವು ಕಂಡ–ಉಂಡ ಪಾಡು. ಚಿತ್ರಿಸಿದ ಬರಹಗಳಾಗಿವೆ. ಬಹುತೇಕ ವಿದ್ಯಾವಂತರಾದ, ಮೇಲುವರ್ಗದ, ಜಾತಿಯ ಮಹಿಳೆಯರು ಚಿತ್ರಿಸಿದ ಚಿತ್ತಾರವಿದು. ಇನ್ನೂ ಬೀಜ ರೂಪದಲ್ಲೇ ಇರುವ ಸಮಸ್ತ ಮಹಿಳೆಯರ ಸಂತಸ, ದುಃಖ ಕಾತರ, ಕಳವಳಗಳು ಲೇಖನಿಗೆ ಕಲಾತ್ಮಕವಾಗಿ ಬರಲು ಇನ್ನೂ ಹಲವು ಹತ್ತು ಸಂವತ್ಸರಗಳು ಕಳೆಯಬೇಕಾದೀತು. ಈ ಅರ್ಥದಲ್ಲಿ ಈ ಸಂಚಿಕೆ ಹಳ್ಳದೊಳಗಿನ ಒಂದು ಹನಿ ಅಷ್ಟೆ. ಓಗೊಂದು 'ಹನಿ' ಇತ್ತು ಎಂಬ ಚಾರಿತ್ರಿಕ ಸತ್ಯವನ್ನು ದಾಖಲಿಸುವುದಷ್ಟೇ

ಇದರ ಉದ್ದೇಶ. ಹಳ್ಳದ ಹಸಿ ಕೊಳೆಯದಂತೆ ಅದನ್ನು ಚಲನಶೀಲವಾಗಿಸಿ ನದಿಯಾಗಿಸುವ ಸುಳಿವುಗಳು ಈ ಸಂಚಿಕೆಯಲ್ಲಿವೆ ಎನ್ನುವುದಷ್ಟೇ ಸಮಾಧಾನದ ಸಂಗತಿ.

ಈ ಹನಿಯದ್ದು ಕೊಂಚ ನಿಧಾನ ಗತಿಯ ನಡಿಗೆ. ಇದೀಗ ನಡಿಗೆಗೆ ಮೊದಲಾಗಿರುವುದರಿಂದ, ಅಯ್ಯೋ... ನಮ್ಮನ್ನು ಅವರು ನಡೆಯಲು ಬಿಡುತ್ತಿಲ್ಲವೆಂದೂ ಅಥವಾ ನಮ್ಮ ಅಂದವನ್ನು ಅವರು ಗಮನಿಸುತ್ತಿಲ್ಲವೆಂದೊ ಅಥವಾ ಭೋರ್ಗರೆದು ದೌಡಾಯಿಸಲು ಆಗಲಿಲ್ಲ ಎಂಬುದಕ್ಕೆ ನೂರು ನೆವಗಳನ್ನು ಒಡ್ಡುತ್ತಲೋ ಘಾಸಿಗೊಳಿಸಿಕೊಳ್ಳುವ ಬದಲು ನನ್ನ ನಡಿಗೆ ನನ್ನ ಹಾಗೆ ಎಂದು ಸಹಜ ಸ್ಫೂರ್ತತೆಯಿಂದ ಸಂಯಮದಿಂದ ಗುರಿಯೆಡೆಗೆ ಹೆಜ್ಜೆ ಹಾಕುವುದೇ ಒಳಿತಲ್ಲವೆ?

ಸದ್ಯದ ಬಹುತೇಕ ಮಹಿಳಾ ಸಾಹಿತ್ಯ ಆಕಾಶದಲ್ಲಿ ಹಾರಾಡುತ್ತಿರುವ ಗಾಳಿಪಟದಂತೆಯೆ ಭಾಸವಾಗುತ್ತಿದೆ. ಅದರ ಸೂತ್ರ ಅಗೋಚರವಾಗಿ ಪುರುಷ ಸಾಹಿತ್ಯದ ಹಿಡಿತದಲ್ಲಿಯೇ ಇರುವಂತೆ ತೋರುತ್ತಿದೆ. ಅಯ್ಯೋ... ಕಿತ್ತುಕೊಂಡು ಹೋದರೆ ಎಲ್ಲಿ ತಲುಪುವೆನೊ ಎಂಬ ಕಳವಳ ಗಾಳಿಪಟಕ್ಕೆ. ಅಯ್ಯೊ... ನನ್ನ ಗಾಳಿಪಟ ಎಂಬ ಭಾವ ಸೂತ್ರಧಾರಿಯದ್ದು. ವಿಶಾಲವಾದ ನೀಲಾಕಾಶ, ಹೋಗಿಯೇ ಬಿಡೋಣ ಎಂದು ಗಾಳಿಪಟ ಧೈರ್ಯವಹಿಸಿ ಕಿತ್ತುಕೊಂಡಿದ್ದೇ ಆದರೆ ಗಾಳಿಪಟ ಯಾವುದೊ... ಮರಕ್ಕೆ ಸಿಕ್ಕಿ ಹೋಗಲೂ ಬಹುದು. ನದಿಗೆ ಬಿದ್ದು ಒದ್ದೆಯಾಗಲೂಬಹುದು. ಅಥವಾ ಗಾಳಿಪಟದ ನಿರೀಕ್ಷೆಯಲ್ಲಿರುವ ಮುದ್ದು ಮಗುವಿನ ಕೈಗೆ ಸಿಗಲೂಬಹುದು. ಅಥವಾ ಹಾಗೆಯೇ ಮೇಲೇರಿ ಏರಿ, ಏರಿ ಎಲ್ಲಿಗೊ... ಹೋಗಿ, ಹೋದ ಹಾಗೆಯೆ ಹಿಂದಿರುಗಿ ಬಂದು ಕೊನೆಗೆ 'ನನ್ನ ಗಾಳಿಪಟ' ಎಂದು ಹಲುಬುತ್ತಿರುವ ಸೂತ್ರಧಾರಿಯ ಬಳಿಗೇ ಬಂದು ಈಗ ನೀನು ಗಾಳಿಪಟವಾಗು, ಗಾಳಿಯೊಂದಿಗೆ ತೇಲಿ ಹೋಗಿ... ನೋಡು ಎಂದು ತಾನೆ ಸೂತ್ರ ಹಿಡಿಯಲೂಬಹುದು! ಗಾಳಿಪಟದ ಭಾವ, ಸೂತ್ರಧಾರಿಯ ಬೆರಳು–ಅದಲು ಬದಲಾಗಬಹುದು.

ಗಂಡು–ಹೆಣ್ಣು, ಹೆಣ್ಣು–ಗಂಡು ಎಂದು ಎಷ್ಟೇ ಕೂದಲು ಸೀಳುವಂತೆ ತರ್ಕಿಸಿದರೂ ಈ ಬೆರಳು–ಭಾವದ ಸಂಬಂಧ ಎಂದಿಗೂ ಚಿರಂತನವಾದದ್ದೇ. ನಮ್ಮ ಗುರಿ ಅವರೆಡೆಗೆ, ಅವರದ್ದು ನಮ್ಮೆಡೆಗೆ. ಕನ್ನಡದ ಮಹಿಳಾ ಸಾಹಿತ್ಯವೂ ಇದನ್ನೇ ಪರೋಕ್ಷವಾಗಿ ಬಿಂಬಿಸಿರುವುದನ್ನು ನಾವು ಕಾಣಬಹುದು. ಬದಲಾವಣೆ ಅನ್ನುವುದು ಹೂಮಾಲೆ ಇರಿಸಿಕೊಂಡು ಕಾದು ನಿಂತಾಕ್ಷಣ ಓಡೋಡಿ ಬರುವಂತಹದ್ದಲ್ಲ. ಕತ್ತಿವರಸೆ ಮಾಡಿದಾಕ್ಷಣ ಓಡಿಹೋಗುವಂತಹದ್ದೂ ಅಲ್ಲ. ಯಾವುದಕ್ಕೂ ಮಣಿಯದೆ, ಒಲಿಯದೆ ಬಂದೆ ಬರುವಂತಹದ್ದು. ಬಂದೇ ತೀರುವುದು. ಯಾವಾಗ ಬರುವುದೊ... ಹೇಗೆ ಬರುವುದೊ... ಯಾರು ಬಲ್ಲರು? ಗೆಲ್ಲುವುದಕ್ಕಿಂತ ಆ ದಿಕ್ಕಿನ ನಡಿಗೆ – ಸಂಘರ್ಷವೇ ಆಪ್ಯಾಯಮಾನವಾಗಿರುತ್ತದೆ. ಸದ್ಯ ಶೋಷಣೆ ಗೊಳಪಡುತ್ತಿರುವವಳು ಮುಂದೊಂದು ದಿನ ಶೋಷಕಿಯ ಸ್ಥಾನ ಅಲಂಕರಿಸಬೇಕಾಗಿ ಬಂದರೆ ಅದೆಂಥ ಗೆಲುವು? ಹಾಗಾದ ಘಟನೆಗಳೇ ಚರಿತ್ರೆಯಲ್ಲೂ, ವರ್ತಮಾನದಲ್ಲೂ

ಹೆಚ್ಚು. 'ಬದಲಾವಣೆ' ಆಗಬೇಕು ಎಂಬ ತುರ್ತಿನ ಜೊತೆ ಜೊತೆಯಲ್ಲೇ ಈ ಎಚ್ಚರದ ಪ್ರಶ್ನೆಯನ್ನೂ ಕೊಂಡೊಯ್ಯುವುದು ಎಂದಿಗಿಂತ ಈಗ ತುಂಬ ಅಗತ್ಯವಾಗಿದೆ.

ಈ ಸಂಚಿಕೆ ಸಂಪಾದಿಸಿದ್ದರಿಂದ ವೈಯಕ್ತಿಕವಾಗಿ ನನಗೆ ದೊಡ್ಡ ಲಾಭವೇ ಆಗಿದೆ. ಒಟ್ಟಿಗೇ ಮಹಿಳಾ ಸಾಹಿತ್ಯವನ್ನು ಓದುವುದಕ್ಕೆ, ಹಾಗೆ ಓದಿ ಬೆರಗಾಗುವುದಕ್ಕೆ ಅವಕಾಶ ಸಿಕ್ಕಿತು. ಕಥೆಯೊ, ಕಾವ್ಯವೊ, ಕಾದಂಬರಿಯೊ; ವಿಮರ್ಶೆ ಮಾತುಗಳು ಉರುಳಿದಾಗ ನಮ್ಮ ಮಹಿಳೆಯರೂ ಇಷ್ಟಿಷ್ಟು ಸಾಧನೆ ಮಾಡಿದ್ದಾರೆ ಎಂದು ಕೆಲವು ಮಹಿಳೆಯರ ಹೆಸರುಗಳು ಉಲ್ಲೇಖಗೊಳ್ಳುತ್ತವೆ. ಆದರೆ ನಿಜಾರ್ಥದಲ್ಲಿ ಅವರೇನು ಬರೆದಿದ್ದಾರೆ ಎಂದು ಸಮಗ್ರವಾಗಿ ಅಧ್ಯಯನಕ್ಕೆ ಒಳಪಟ್ಟ ಬರಹಗಳು ಕಡಿಮೆ. ಒಂದು ಅತ್ಯುತ್ತಮವಾದ ಕತೆಯೊ, ಕಾದಂಬರಿಯೊ, ಕವನವೊ, ಬಂದಾಗ ಅಥವಾ ಹೊಸ ಪುಸ್ತಕ ಬಂದಾಗ ಅದು ಪುರುಷರು ಬರೆದದ್ದಾರೆ ಅದು ಹುಟ್ಟುವ ಮೊದಲೇ ಛತ್ರಿ ಹಿಡಿಯಲು, ಚಾಮರ ಬೀಸಲು ರೆಡಿಯಾಗಿರುತ್ತಾರೆ. ಅದು ಬಂದು ತಿಂಗಳಿಗೊಪ್ಪತ್ತಿನಲ್ಲಿ ಹಲವು ಹತ್ತು ಕಡೆ ವಿಮರ್ಶೆಯೂ ಪ್ರಕಟವಾಗುತ್ತದೆ. ನಮ್ಮ ವಿಮರ್ಶಕರು ತಮ್ಮ ಮನಸ್ಸಿನಲ್ಲಿ ಮಹಿಳೆಯರ ಬರಹಗಳ ಬಗ್ಗೆ ಒಂದು ರೀತಿಯ ಅಭಿಪ್ರಾಯವನ್ನು ಹೇಗೆ ಟ್ಯೂನ್ ಮಾಡಿಕೊಂಡಿದ್ದಾರೆಂದರೆ ಹೇಗೆ ಬ್ಯಾಂಡ್ ತಿರುಗಿಸಿದರೂ ಗೊರ ಗೊರ ಶಬ್ದ ಬರುತ್ತದೆ. ಆದರೆ ಈ ಕಾಲ ಬದಲಾಗಲೇಬೇಕು. ಅದರ ಮುನ್ಸೂಚನೆಗಳನ್ನು ಇಲ್ಲಿನ ಕೆಲವು ಲೇಖನಗಳಲ್ಲೇ ಕಾಣಬಹುದಾಗಿದೆ.

ಇಷ್ಟು ಬೆನ್ನು ತಟ್ಟಿಕೊಂಡ ಮೇಲೆ ಕೊರೆಯ ಬಗ್ಗೆ ಹೇಳಲೇಬೇಕು. ಈ ಸಂಚಿಕೆಗೆ ಸೇರ್ಪಡೆಯಾಗಲೇಬೇಕು ಅಂದುಕೊಂಡಿದ್ದ 'ಹೆಣ್ಣಾಗಿ ಹುಟ್ಟಿದ ಬಳಿಕ' 'ಹೇಳದೇ ಉಳಿದದ್ದು', 'ಸೃಷ್ಟಿಕಾರ್ಯದ ಖುಷಿಯ ಬಗ್ಗೆ' ಈ ತರಹದ ವೈಯಕ್ತಿಕ ಟಿಪ್ಪಣಿಗಳ ರೂಪದಲ್ಲಿರುವ ಬರಹಗಳನ್ನು ನಮ್ಮ ಸಂವೇದನಾಶೀಲ ಲೇಖಕಿಯರಿಂದ ಪಡೆಯಲಾಗಲಿಲ್ಲ. ನಿರಾಸಕ್ತಿಯೊ, ಹಿಂಜರಿಕೆಯೊ, ಅಥವಾ ಅದನ್ನೂ ಮೀರಿದ ಕಾರಣದಿಂದಲೋ... ಲೇಖನಗಳು ದಕ್ಕಲಿಲ್ಲ. ಸಕಾಲದಲ್ಲಿ ಲೇಖನ ಒದಗಿಸಿಕೊಟ್ಟು ಉಪಕರಿಸಿದ ಎಲ್ಲ ಲೇಖಕ ಗೆಳೆಯ-ಗೆಳತಿಯರಿಗೂ ಸಂಪಾದಕಿ ಋಣಿಯಾಗಿದ್ದಾಳೆ.

'ಸ್ತ್ರೀ ವಿಶೇಷಾಂಕ' ಮಾಡುವಂತ ಸೂಚಿಸಿದ, ಆರಂಭದಿಂದಲೂ ಒತ್ತಾಸೆಯಾಗಿ ನಿಂತು, ಕರಡು ತಿದ್ದಿ, ಅರ್ಧ ಹೊರೆಯನ್ನು ಸಂತೋಷದಿಂದಲೇ ಹಂಚಿಕೊಂಡ ನಾಗಭೂಷಣ ಅವರಿಗೆ, ಆಗಾಗ್ಗೆ ಪತ್ರಿಸಿ ಹುಮ್ಮಸ್ಸು ತುಂಬಿದ ರಾಘವೇಂದ್ರ ಪಾಟೀಲ, ಜಿ.ಎಲ್. ರಾಮಪ್ಪ, ಬಿ.ಎನ್. ಶಾಂತಾ ಅವರಿಗೆ, ಈ ಸಂಚಿಕೆ ಎಷ್ಟರ ಮಟ್ಟಿಗೆ ಸಫಲವಾಗಬಹುದು ಎಂಬ ಆತಂಕ-ಖಿನ್ನತೆಯನ್ನು ಹಂಚಿಕೊಂಡ ಸ. ಉಷಾ ಅವರಿಗೆ ಸಂಪಾದಕಿ ಕೃತಜ್ಞಳಾಗಿದ್ದಾಳೆ.

(ಸಾಹಿತ್ಯ ಸಂವಾದ—ಸೆಪ್ಟಂಬರ್-ಡಿಸೆಂಬರ್ ೧೯೯೨)

●

# ನಾವು ಬೆಳೆದರೆ ಕವಿತೆಯೂ ಬೆಳೆದೀತು...

ಅಕಾಡೆಮಿಯ ಅಧ್ಯಕ್ಷರಾದ ಮಾನ್ಯ ಶಿವರುದ್ರಪ್ಪನವರೆ ಹಾಗೂ ಅಕಾಡೆಮಿಯ ಇತರ ಸದಸ್ಯರೆ, ಕಾರ್ಯಕರ್ತರೆ, ಈ ಕವಿಗೋಷ್ಠಿಯನ್ನು ಉದ್ಘಾಟಿಸಿದ ಶ್ರೀ ಶಾಂತಿನಾಥ ದೇಸಾಯಿ ಅವರೆ, ಈ ಗೋಷ್ಠಿಯಲ್ಲಿ ಪಾಲ್ಗೊಂಡಿರುವ ಕವಿಮಿತ್ರರೆ ಹಾಗೂ ಇಲ್ಲಿ ಸೇರಿರುವ ಕಾವ್ಯಾಭಿಮಾನಿಗಳೇ,

ಮೊದಲಿಗೆ ನಾನು ಕುವೆಂಪು ಅವರಿಗೆ ೮೩ ವರುಷ ತುಂಬಿದ ಮತ್ತು ಅವರಿಗೆ ರಾಷ್ಟ್ರದ ಎರಡನೆ ಅತ್ಯುನ್ನತ ನಾಗರಿಕ ಪ್ರಶಸ್ತಿಯಾದ ಪದ್ಮವಿಭೂಷಣ ಗೌರವ ಸಂದ ಸಂದರ್ಭದಲ್ಲಿ ಏರ್ಪಡಿಸಲಾಗಿರುವ ಈ ಗೋಷ್ಠಿಯ ಅಧ್ಯಕ್ಷತೆಯ ಜವಾಬ್ದಾರಿಯನ್ನು ಪ್ರೀತಿವಿಶ್ವಾಸಗಳಿಂದ ನನಗೆ ವಹಿಸಿರುವ ಅಕಾಡೆಮಿಯ ಸಂಬಂಧಪಟ್ಟ ಎಲ್ಲರಿಗೆ ನನ್ನ ಕೃತಜ್ಞತೆಗಳನ್ನು ತಿಳಿಸಬಯಸುತ್ತೇನೆ.

ಈ ಕವಿಗೋಷ್ಠಿಯ ಅಧ್ಯಕ್ಷತೆ ವಹಿಸುವ ಯೋಗ್ಯತೆ ನನಗಿದೆಯೆ ಎಂಬ ಬಗ್ಗೆ ನನಗೆ ಸಂಶಯವಿದೆ. ನಾನು ಕಳೆದ ಮೂರು–ನಾಲ್ಕು ವರ್ಷಗಳಿಂದಷ್ಟೆ ಕವಿತೆಗಳನ್ನು ಬರೆಯುತ್ತಿರುವವಳು. ನಾನು ಸಾಹಿತ್ಯದ ವಿದ್ಯಾರ್ಥಿನಿಯೂ ಅಲ್ಲ, ಸಹಜವಾದ ಹರೆಯದ ಹುಮ್ಮಸ್ಸಿನಿಂದಷ್ಟೆ ಪದ್ಯ ಬರೆಯಲಾರಂಭಿಸಿದವಳು. ಈ ದಿನದವರೆಗೆ ಕಾವ್ಯಕ್ಷೇತ್ರದಲ್ಲಿ ಯಾವ ಗಮನಾರ್ಹ ಸಾಧನೆಯನ್ನೂ ಮಾಡಿದವಳಲ್ಲ. ಆದರೂ ಈ ಸಂದರ್ಭದಲ್ಲಿ ನನಗೆ ಸಂತೋಷಕೊಟ್ಟಿರುವ ಒಂದು ಸಂಗತಿ ಎಂದರೆ, ರಾಜ್ಯಮಟ್ಟದ ಕವಿಗೋಷ್ಠಿಯೊಂದಕ್ಕೆ ಮಹಿಳೆಯನ್ನು ಅಧ್ಯಕ್ಷತೆಗಾಗಿ ಆರಿಸಿರುವುದು.

ಹಾಗೆ ನೋಡಿದರೆ ಇದು ನ್ಯಾಯೋಚಿತವಾಗಿದೆಯೆಂದೇ ನನ್ನ ಭಾವನೆ. ಇದು ನನ್ನ ಬಗ್ಗೆ ಹೇಳಿಕೊಳ್ಳುತ್ತಿರುವ ಮಾತಲ್ಲ. ಕಳೆದ ಒಂದೂವರೆ ದಶಕದ ಕಾವ್ಯವನ್ನು ನೋಡಿದಾಗ ನಮಗೆ ಹೊಸದೆಂಬಂತೆ ಎದ್ದು ಕಾಣುವುದು ನನ್ನ ಓರಗೆಯ ಹುಡುಗಿಯರು ಬರೆಯುತ್ತಿರುವ ಕಾವ್ಯವೇ. ಬಹುಶಃ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಚನ ಕಾಲದ ನಂತರ ಇಷ್ಟೊಂದು ಜನ ಮಹಿಳೆಯರು ಕಾವ್ಯಕ್ಷೇತ್ರದಲ್ಲಿ ಸಕ್ರಿಯವಾಗಿರುವುದು ಇದೇ ಮೊದಲು ಎಂದು ಕಾಣುತ್ತದೆ. ಇದನ್ನು ನಾನು ಕೇವಲ ಸಂಖ್ಯೆಯ ದೃಷ್ಟಿಯಿಂದ ಹೇಳುತ್ತಿಲ್ಲ. ನನ್ನ ಅಭಿಪ್ರಾಯದಲ್ಲಿ, ಕಳೆದ ದಶಕದ ಕನ್ನಡ ಕಾವ್ಯದಲ್ಲಿ ತಮ್ಮ ವೈಶಿಷ್ಟ್ಯತೆಯನ್ನು ಮೆರೆದಿರುವವರು ಮಹಿಳೆಯರೆ ಎಂದರೆ ಪುರುಷರು ಕೋಪಿಸಿಕೊಳ್ಳುವುದಿಲ್ಲ ಎಂದು ಭಾವಿಸುತ್ತೇನೆ. ನಾನು

ಈ ಮಾತುಗಳನ್ನು ಕಳೆದೊಂದು ದಶಕದಲ್ಲಿ ರಚಿತವಾದ ಒಟ್ಟು ಕನ್ನಡ ಕಾವ್ಯಕ್ಕೆ ಅನ್ವಯಿಸಿ ಹೇಳುತ್ತಿಲ್ಲ. ಕಳೆದ ದಶಕದಲ್ಲಿ ಬರೆಯಲಾರಂಭಿಸಿದ ಹೊಸ ಕವಿಗಳಿಗಷ್ಟೆ ಸಂಬಂಧಿಸಿದಂತೆ ಹೇಳುತ್ತಿರುವ ಮಾತಿದು. ಹೇಮಾ ಪಟ್ಟಣಶೆಟ್ಟಿ, ಹೆಚ್.ಎಸ್. ಮುಕ್ತಾಯಕ್ಕ, ಸರಸ್ವತಿ ಗೌಡ, ವಿ.ಆರ್. ಪ್ರತಿಭಾ, ಸಿ.ಎಚ್. ಭಾಗ್ಯ, ಪ್ರೇಮಾ ಸಿರ್ಸಿ, ಬಿ.ಟಿ. ಲಲಿತಾ ನಾಯಕ್ ಮುಂತಾದವರು ಕನ್ನಡ ಕಾವ್ಯಕ್ಕೆ ಹೊಸತೊಂದು ಲಯ ಹಾಗೂ ರೂಪಗಳನ್ನು ನೀಡಿದವರು. ಅಷ್ಟೇ ಅಲ್ಲ ಹೋದ ದಶಕದಲ್ಲಿ ಬರೆಯಲಾರಂಭಿಸಿದ ಸ. ಉಷಾ, ಕಮಲ ಹೆಮ್ಮಿಗೆ, ಡಿ. ವಿಜಯ, ಶಶಿಕಲಾ ವಸ್ತ್ರದ, ಮಾಲತಿ ಪಟ್ಟಣಶೆಟ್ಟಿ, ಸುಕನ್ಯಾ ಮಾರುತಿ, ಚ. ಸರ್ವಮಂಗಳ ಮುಂತಾದ ಕವಯತ್ರಿಯರೂ ಕೂಡ ಈ ದಶಕದ ಧಾರೆಗೆ ಒಡ್ಡಿಕೊಂಡು ಇತ್ತೀಚಿನ ಕಾವ್ಯದಲ್ಲಿ ಗುಣಾತ್ಮಕವಾಗಿ ಮಹಿಳೆಯರದ್ದ ಮೇಲುಗೈ ಎಂಬಂತಹ ಸಾಧನೆಗೆ ಕಾರಣರಾಗಿದ್ದಾರೆ. ಈ ಒಂದು ವಿಶಿಷ್ಟ ಧಾರೆಯ ಒಂದು ದನಿಯಾಗಿ ಮಾತ್ರ ನಾನು ಇಲ್ಲಿ ಈ ಅಧ್ಯಕ್ಷ ಸ್ಥಾನದಲ್ಲಿ ಮಾತಾಡಬಯಸುತ್ತೇನೆ.

ಪ್ರಸ್ತುತ ಕಾಲವನ್ನು ಶಿವರುದ್ರಪ್ಪನವರು ಒಂದು ರೀತಿಯ ರಾಜಿಯ, ಒಪ್ಪಂದದ ಕಾಲ ಎಂದು ಗುರುತಿಸಿದ್ದಾರೆ. ಒಂದು ರೀತಿಯ ಸ್ತಬ್ಧತೆಯೆಂದೂ ಕರೆಯಲಾಗದ, ಪ್ರಶಾಂತತೆಯೆಂದೂ ವರ್ಣಿಸಲಾಗದ, ಅನಿಶ್ಚಿತತೆಯೆಂದೂ ಹೇಳಲಾಗದ ಒಂದು ರೀತಿಯ ಹುಡುಕಾಟ; ಸಾಹಿತ್ಯ ಮತ್ತು ಸಾಹಿತಿ ತನ್ನನ್ನೆ ಹುಡುಕಿಕೊಂಡು ಹೊರಟಂತಹ ಧ್ಯಾನದ ಕಾಲ ಇದು ಇರಬಹುದು. ಇಂತಹ ಪ್ರಫುಲ್ಲ ಕಾಲದಲ್ಲಿ ಬರೆಯಲಾರಂಭಿಸಿದ ದೊಡ್ಡ ಅನುಕೂಲ ನನ್ನ ಓರಗೆಯ ಕವಿಗಳದ್ದು. ಆದುದರಿಂದ ಕನ್ನಡ ಕಾವ್ಯಾಭಿಮಾನಿಗಳು ನನ್ನ ಓರಗೆಯ ಕವಿಗಳಿಂದ ಹೆಚ್ಚಿನ ನಿರೀಕ್ಷೆಯನ್ನು ಇಟ್ಟುಕೊಳ್ಳಬಹುದಾಗಿದೆ.

ಕೆಲವು ವರುಷಗಳ ಹಿಂದೆ, ಇಂದು ಖ್ಯಾತನಾಮರಾಗಿರುವ ವಿಮರ್ಶಕರೊಬ್ಬರು ಓರ್ವ ಕವಿಯ ಕವಿತಾ ಸಂಕಲನಕ್ಕೆ ಹಿನ್ನುಡಿಯನ್ನೋ, ಮುನ್ನುಡಿಯನ್ನೋ ಬರೆಯುತ್ತ, ದೇಶವೇ ಹತ್ತಿಕೊಂಡು ಉರಿಯುತ್ತಿರುವಾಗ ಗುಲಾಬಿ ನೋಡಿ ಸಂತಸ ಪಡುವ ಜನರನ್ನು ಛೇಡಿಸಿದ್ದರಂತೆ. ಆಗ ಹಿರಿಯ ಸಾಹಿತಿಯೊಬ್ಬರು ಗುಲಾಬಿಯ ಸೌಂದರ್ಯವನ್ನು ಸವಿಯುವ ಸಂವೇದನೆ ಇಲ್ಲದವ ದೇಶ ಹೊತ್ತಿ ಉರಿಯುವುದರ ನೋವನ್ನು ನಿಜವಾದ ಅರ್ಥದಲ್ಲಿ ಗ್ರಹಿಸಲಾರ ಎಂದು ಉತ್ತರ ಕೊಟ್ಟರಂತೆ. ಈ ಮಾತು ನನಗೆ ಬಹಳ ಮುಖ್ಯವೆನಿಸುತ್ತದೆ. ಏನೇ ಹೇಳಿದರೂ, ಸಾಮಾಜಿಕ ಜವಾಬ್ದಾರಿಯ ಬಗ್ಗೆ ಎಷ್ಟೇ ಭಾರವಾದ ಮಾತುಗಳನ್ನಾಡಿದರೂ, ಕಾವ್ಯರಚನೆ ಈ ಏಳುಬೀಳುಗಳನ್ನೆಲ್ಲ ಮೀರಿ ನಡೆಯುವ ಕ್ರಿಯೆಯೆಂದೇ ನನ್ನ ಭಾವನೆ. ಕಾವ್ಯಕ್ಕೆ ತನ್ನದೇ ಆದ ತೇಜಸ್ಸು, ಸೌಂದರ್ಯ ಮತ್ತು ಶಕ್ತಿ ಬರುವುದು ಇಂತಹ ಮೀರಿ ನಡೆಯುವ ಪ್ರವೃತ್ತಿಯಿಂದಲೇ ಎಂದು ನನ್ನ ಭಾವನೆ. ಅಂದ ಮಾತ್ರಕ್ಕೆ ಕವಿ ದೈನಂದಿನ ಆಗುಹೋಗುಗಳಿಗೆ ಸ್ಪಂದಿಸಬೇಕಿಲ್ಲ ಎಂದಲ್ಲ. ಆದರೆ ಕೇವಲ ಆಗುಹೋಗುಗಳಿಗೆ ಸ್ಪಂದಿಸುವುದಷ್ಟೆ ಕಾವ್ಯವಾಗುವುದಿಲ್ಲ. ಕಿಟಾರ್ ಎಂದು ಕಿರುಚಾಡಿದಾಕ್ಷಣ ಕಾವ್ಯವಾಗುವುದೆ ಎಂದು ಒಮ್ಮೆ ಲಂಕೇಶರು ಬಂಡಾಯ ಕವಿಯೊಬ್ಬರನ್ನು ಕೇಳಿದರಂತೆ. ಅವರ ಪ್ರಶ್ನೆಯನ್ನು

ತಮಾಷೆಯ ಮಾತೆಂದು ತಳ್ಳಿಹಾಕುಲಾಗುವುದಿಲ್ಲ ಎಂದೇ ನನ್ನ ಅನಿಸಿಕೆ. ಕಾವ್ಯ ವಸ್ತುವಿನಿಂದಷ್ಟೇ ಪರಿಣಾಮ ಬೀರುವುದಿಲ್ಲ. ವಾಸ್ತವವಾಗಿ ಕಾವ್ಯ ಪರಿಣಾಮ ಬೀರುವುದು ಅದರ ಸೌಂದರ್ಯದಿಂದ. ಆದರೆ ಆ ಸೌಂದರ್ಯ ಮೂಡುವುದೂ ಒಳಗಣ ಹೂರಣವಾದ ವಸ್ತುವಿನಿಂದಲೇ ಎಂಬ ಸಂಗತಿಯೂ ಗಮನಾರ್ಹ. ಕಾವ್ಯದ ಎಲ್ಲ ಅರ್ಥದ ಸಾರ್ಥಕ್ಯ ಇರುವುದೇ ಈ ವಸ್ತು ಮತ್ತು ಸೌಂದರ್ಯಗಳ ನಡುವಣ ಈ ನಿಗೂಢ ಸಂಬಂಧದಲ್ಲಿ ಇರಬಹುದು.

ಈ ಎಲ್ಲ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಇಂದು ಈ ಗೋಷ್ಠಿಯಲ್ಲಿ ಮಂಡಿಸಲಾದ ಕವನಗಳನ್ನು ನಾವು ಪರಿಶೀಲಿಸಬೇಕಾಗುತ್ತದೆ. ನಾವು ಇಂದು ಕೇಳಿದ ಬಹಳಷ್ಟು ಕವಿತೆಗಳಲ್ಲಿ ಭಾರವಾದ ಯೋಚನೆ ಮತ್ತು ಶಬ್ದಗಳ ಚೆಲ್ಲಾಟವಿದೆ ಎಂದೆನಿಸುತ್ತದೆ. ಇನ್ನು ಕೆಲವು ಕವಿತೆಗಳು ಸುಂದರವಾಗಿ, ಸುಕೋಮಲವಾಗಿ ಕಾಣಲು ಹವಣಿಸಿರುವುದನ್ನು ಗಮನಿಸಬಹುದು. ಯೋಚನೆ, ಶಬ್ದ ಮತ್ತು ಸೌಂದರ್ಯಗಳು ಖಂಡಿತ ಕಾವ್ಯದ ಮೂರು ಮುಖ್ಯ ಘಟಕಗಳೆ. ಆದರೆ ಕಾವ್ಯದ ಜೀವಾಳವಿರುವುದೇ ಈ ಮೂರು ಘಟಕಗಳನ್ನು ಸಂಯೋಜಿಸುವ ಕ್ರಿಯೆಯಲ್ಲಿ. ಇಂದು ಓದಲಾದ ಕವಿತೆಗಳ ಸಂಯೋಜನೆಯ ಹಿಂದೆ ಪರಂಪರೆಯ ಹಲವು ಸೆಳೆತಗಳು ಕೆಲಸ ಮಾಡಿರುವುದನ್ನು ನಾವು ಗಮನಿಸಬಹುದಾಗಿದೆ. ನವೋದಯದ ನಾದಮಯತೆಯ ಮೋಹ, ನವ್ಯದ ಶಬ್ದಶಿಲ್ಪದ ವ್ಯಸನ ಹಾಗೂ ಬಂಡಾಯದ ಭಾವಾವೇಶ ಇವೆಲ್ಲವೂ ನೆರಳುಗಳಂತೆ ಇಂದಿನ ಕವಿತೆಗಳನ್ನು ಹಿಂಬಾಲಿಸಿವೆ. ಒಂದರ್ಥದಲ್ಲಿ ನಿಜವಾಗಿಯೂ ವೈವಿಧ್ಯಮಯವಾದ ಪ್ರಯತ್ನಶೀಲತೆಯ ಪ್ರತೀಕಗಳಂತೆ ಇವೆ ಈ ಕವನಗಳು.

ಇಂದು ಹತ್ತೊಂಬತ್ತು ಕವಿಗಳ ಐವತ್ತಕ್ಕೂ ಹೆಚ್ಚು ಕವನಗಳು ಮಂಡಿತವಾಗಿದ್ದು ಪ್ರತಿಕವಿ ಅಥವಾ ಕವಿತೆಯ ಗುಣಲಕ್ಷಣ, ಸಾರ್ಥಕ್ಯಗಳ ಬಗ್ಗೆ ಮಾತಾಡುವುದು ಕಷ್ಟದ ಕೆಲಸವೆ. ಈ ಕವಿಗಳ ಓರಗೆಯವಳಾಗಿ ನಾನು ಹೇಳುವುದಿಷ್ಟೆ. ಸುದ್ದಿ ಅಥವಾ ಇತರರಿಂದ ನಿವೇದಿಸಲ್ಪಟ್ಟ ಅನುಭವ ಕಾವ್ಯವನ್ನು ಹುಟ್ಟಿಸಲಾರದು. ವಸ್ತು ಎಷ್ಟೇ ಸಾರ್ವತ್ರಿಕವಾಗಿರಲಿ, ಅದು ನಮ್ಮೊಳಗೆ ಕರಗಿ ವೈಯಕ್ತಿಕ ಸಂವೇದನೆಯಾಗಿ ಮಾರ್ಪಾಟಾದಾಗ ಮಾತ್ರ ಅದು ಕವಿತೆಯಾಗಿ ಹೊರಹೊಮ್ಮುವ ಸಾಮರ್ಥ್ಯ ಪಡೆಯುತ್ತದೆ. ಇಲ್ಲದಿದ್ದಲ್ಲಿ ನಾವೆಷ್ಟೇ ತಿಣುಕಿದರೂ, ಅಭ್ಯಾಸದ ಮೂಲಕ ಗಳಿಸಿದ ಎಷ್ಟೇ ಸೂತ್ರಗಳನ್ನು, ಕಸರತ್ತುಗಳನ್ನು ಬಳಸಿದರೂ ಅದು ಕಾವ್ಯವಾಗುವುದಿಲ್ಲ. ಅಷ್ಟೇ ಅಲ್ಲ, ಆ ವೈಯಕ್ತಿಕ ಸಂವೇದನೆ ಮತ್ತೆ ಸಾರ್ವತ್ರಿಕ ಅನುಭವವಾಗಿ ಒಡಮೂಡದಿದ್ದರೂ ಅದು ಕಾವ್ಯವಾಗುವುದಿಲ್ಲ. ಸ್ಕಾಟ್‌ನ ಸಾವು, ಮಾಂಡೇಲನ ನಗು, ಅಮೃತಮತಿಯ ಹಸಿವು, ರೂಪ್ ಕನ್ವರಳ ಅಸಹಾಯಕತೆ, ನನ್ನ-ನಿಮ್ಮ ಗೆಳೆತನ, ಪ್ರೇಮ, ಹತಾಶೆ, ನೋವು ಕಾವ್ಯವಾಗುವುದು ಹೀಗೇ. ದೊಡ್ಡದನ್ನು ಹೇಳುವ, ಹಠದ ಭಾರದಿಂದ ನಲುಗದ, ಕವಿತೆ ಕಟ್ಟುವ ಕಷ್ಟದ ಏದುಸಿರು ಕೇಳಿಸದ, ಸುಂದರವಾಗಲು ಹೆಣಗುವ ನಟನೆ ಕಾಣದ ಕವಿತೆಗಳು ಸೃಷ್ಟಿಯಾಗುವುದು ಹೀಗೇ.

ಅಂದ ಮಾತ್ರಕ್ಕೆ ಕವಿತೆ ದೊಡ್ಡದನ್ನು ಹೇಳಲಾಗದು; ಅದಕ್ಕೆ ತಕ್ಕುದಾದ ಸಂಕೀರ್ಣ ಬಂಧವನ್ನು ಕಟ್ಟಲಾಗದು ಮತ್ತು ಮಹಾ ಸೌಂದರ್ಯವನ್ನು ಮೂಡಿಸಲಾಗದು ಎಂದು ನಾನು ಹೇಳುತ್ತಿಲ್ಲ. ಆದರೆ ಒಮ್ಮೆಗೇ ನಾವು ಯುವಕವಿಗಳು ಆಕಾಶಕ್ಕೆ ನೆಗೆಯಬೇಕೆ ಎಂಬುದು ಯೋಚಿಸಬೇಕಾದ ವಿಚಾರ. ಅಂದರೆ ಕಾವ್ಯವೆಂದರೇನು ಎಂಬುದನ್ನು ಸ್ವಯಂ ಕಾವ್ಯರಚನೆಯ ಮೂಲಕ ಕಂಡುಕೊಳ್ಳಬೇಕಾದ ಸವಾಲನ್ನು, ನಾವು ನಮ್ಮ ಹಿಂದಿನವರು ಮಾಡಿಬಿಟ್ಟಿರುವ ಪ್ರಯೋಗಗಳನ್ನೇ ಮತ್ತೆ ಮತ್ತೆ ಮಾಡಿ ಸೋತು–ಗೆದ್ದು ಎದುರಿಸಬೇಕೇ ಎಂಬ ಪ್ರಶ್ನೆ ನನ್ನದು. ಹಾಗಾದರೆ ನಮ್ಮದೇ ಎನ್ನಬಹುದಾದ ಕವಿತೆ ಯಾವುದು? ಈ ತರಹದ ಪ್ರಯತ್ನಗಳ ಮೂಲಕ ನಮ್ಮದೇ ಎನ್ನಬಹುದಾದ ಕವಿತೆಗಳನ್ನು ಕಟ್ಟಲು ಸಾಧ್ಯವೇ ಎಂಬ ಹಲವಾರು ಪ್ರಶ್ನೆಗಳನ್ನು ಹಾಕಿಕೊಳ್ಳಬೇಕಾಗಿದೆ. ಈ ಪ್ರಶ್ನೆಗಳಿಗೆ ನಾನು ನನ್ನ ಅನುಭವದ ಮೂಲಕ ಕಂಡುಕೊಂಡಿರುವ ಉತ್ತರವೆಂದರೆ ನಮ್ಮ ತೆಕ್ಕೆಗೆ ಒಗ್ಗಬಲ್ಲಂತಹ ಅನುಭವವನ್ನಷ್ಟೇ, ನಮ್ಮ ಹಿಡಿತಕ್ಕೆ ಸಿಕ್ಕುವ ಭಾಷೆಯ ಲಯವನ್ನಷ್ಟೆ, ನಮಗೆ ಸಹಜವೆನ್ನಿಸುವಂತಹ ಕಾವ್ಯ ರಚಿಸುವುದು. ಕವಿ ಎಂದಾಕ್ಷಣ ಜಗತ್ತಿನ ಅನುಭವಗಳನ್ನೆಲ್ಲ ಮೈಮೇಲೆ ಎಳೆದುಕೊಳ್ಳಬೇಕಾದ್ದಿಲ್ಲ. ಇದರಿಂದ ಮುಚ್ಚಿಹೋಗುವವನು ಕವಿಯೆ ಆಗಿರುತ್ತಾನೆ ಎಂದು ನಮ್ಮ ಪರಿಮಿತಿಗಳ ಮತ್ತು ಅಪಾಯದ ಎಚ್ಚರ ಸದಾ ನಮಗಿರಬೇಕು. ನಾವೂ ಬೆಳೆಯುವುದರೊಂದಿಗೆ ನಮ್ಮ ಕವಿತೆಯೂ ಬೆಳೆಯುತ್ತದೆ. ಆವರೆಗೂ ನಾವು ಕಾಯಬೇಕಷ್ಟೇ. ಅಲ್ಲಿಯವರೆಗೆ ನಾವು ನಮ್ಮ ಬದುಕಿನ ದಿಗಂತಗಳನ್ನು ವಿಸ್ತರಿಸಿಕೊಳ್ಳುತ್ತಾ ಹೋಗಬೇಕು. ಇತರರ ಕಾವ್ಯವನ್ನು ಭಾಷೆ, ಪಂಥಗಳ ಭೇದವಿಲ್ಲದೆ ಓದುತ್ತಾ, ಆನಂದಿಸುತ್ತ, ಅರಗಿಸಿಕೊಳ್ಳುತ್ತ ಹೋಗಬೇಕು ಎಂದಷ್ಟೇ ಹೇಳಿ ನನ್ನ ಈ ಮಾತುಗಳನ್ನು ಮುಗಿಸುತ್ತೇನೆ.

(ಕರ್ನಾಟಕ ಸಾಹಿತ್ಯ ಅಕಾಡೆಮಿ ೨೫.೨.೧೯೮೮ರಲ್ಲಿ ಶಿವಮೊಗ್ಗದಲ್ಲಿ
ಆಯೋಜಿಸಿದ್ದ ಯುವಕವಿ ಸಮ್ಮೇಳನದ ಅಧ್ಯಕ್ಷ ಭಾಷಣ)

# ಕಾಡು ಲಿಲ್ಲಿ ಹೂವುಗಳು...

ಒಂದು ಹಳೆಯ ಸಂಗತಿ. ಎರಡು–ಮೂರು ವರ್ಷಗಳಿಗೊಮ್ಮೆ ಬಿಡಾರ ಎತ್ತಿಕೊಂಡು ಊರೂರು ಸುತ್ತುತ್ತಿದ್ದ ನಾವು ಆಗ ಮಡಿಕೇರಿಯಲ್ಲಿದ್ದೆವು. ಗುಡ್ಡದ ಮೇಲಿದ್ದ ನಮ್ಮ ಮನೆಯ ಮುಂದೆ ಒಂದು ಮಣ್ಣಿನ ದಿಬ್ಬವಿತ್ತು. ಅದರಾಚೆ ದೊಡ್ಡ ಹಸಿರು ಗುಡ್ಡ. ಇಳಿಜಾರಿನ ಕಣಿವೆ ಹಾಗೂ ಸಾಲು ಸಾಲು ಅಕೇಶಿಯಾ ಮರಗಳು. ಆ ಸಾಲು ಮರಗಳ ನಡುವಿನಿಂದಲೇ ಮೋಡಗಳ ಹಿಂಡು ಸಾಗುವುದನ್ನು ನೋಡಬಹುದಿತ್ತು. ಒಮ್ಮೊಮ್ಮೆ ಇಡೀ ಮರಗಳನ್ನು ಮಂಜಿನ ಮಾಯೆ ಕವಿದು ಅಚ್ಚರಿ ಹುಟ್ಟಿಸುತ್ತಿತ್ತು. ದೆವ್ವನಂಥಾ ಮಳೆ ಇಲ್ಲದೇ ಹೋದಲ್ಲಿ ಮಡಿಕೇರಿ ಸ್ವರ್ಗವೇ ಸರಿ. ನಮ್ಮ ಮನೆಯ ಮುಂದಣ ಆ ಮಣ್ಣಿನ ದಿಬ್ಬ ಸುತ್ತಲೂ ಹಸಿರಿನಿಂದ ಆವೃತವಾಗಿದ್ದರೂ ಅದರ ಹೃದಯಭಾಗ ಮಾತ್ರ ಗಾರೆಕಲ್ಲಿನ ಹಾಗೆ ನುಣುಪಾಗಿ, ಮಟ್ಟಸವಾಗಿ ಬಿಸಿಲಿಗೆ ಬಂಗಾರದ ಗಟ್ಟಿಯ ಹಾಗೆ ಥಳಥಳಿಸುತ್ತಿತ್ತು. ದಾರಿಹೋಕರು ತುಳಿದೂ ತುಳಿದೂ ಗಟ್ಟಿಯಾಗಿ ಅಲ್ಲಿ ಒಂದು ಹುಲ್ಲುಗರಿಕೆಯೂ ಹುಟ್ಟದಂತಾಗಿತ್ತು. ಅದು ಸ್ವಲ್ಪ ಉಬ್ಬಿದಂತಿದ್ದು ಜಗುಲಿಯ ಹಾಗೆ ಇದ್ದುದರಿಂದ ಆಟವಾಡುವ ಮಕ್ಕಳು, ಸುಖದುಃಖ ಹಂಚಿಕೊಳ್ಳುವ ಹೆಂಗಸರು, ಕೆಲಸವಿಲ್ಲದ ಪಡ್ಡೆ ಹುಡುಗರು, ಮಂಕು ಹಿಡಿದ ಕುಡುಕರು ಅದರ ಮೇಲೆ ವಿಶ್ರಮಿಸಿಕೊಳ್ಳುತ್ತಿದ್ದ ದೃಶ್ಯ ಸರ್ವೇಸಾಮಾನ್ಯವಾಗಿ ಕಣ್ಣಿಗೆ ಬೀಳುತ್ತಿತ್ತು.

ಈ ವಿದ್ಯಮಾನಗಳನ್ನೆಲ್ಲಾ ನೋಡುತ್ತಾ ಕಿಟಕಿಯಲ್ಲಿ ನಿಲ್ಲುವುದು ನನಗೆ ಅಭ್ಯಾಸವಾಗಿ ಹೋಗಿತ್ತು. ಒಮ್ಮೆ ಹೀಗೇ ಮಟಮಟ ಮಧ್ಯಾಹ್ನ ಕಿಟಕಿಯಲ್ಲಿ ನಿಂತಿದ್ದಾಗ ಕೇರೇ ಹಾವೊಂದು ಆ ದಿಬ್ಬದಾಚೆಯಿಂದ ತಲೆಹಾಕಿ ನಾನು ನಿಂತಿದ್ದಷ್ಟೂ ಹೊತ್ತೂ, ನಾನು ನೋಡಿದ್ದಷ್ಟೂ ಹೊತ್ತು ನನ್ನನ್ನೇ ನೋಡುತ್ತಾ ಕೊನೆಗೆ ದೃಷ್ಟಿಯುದ್ಧದಲ್ಲಿ ನನ್ನನ್ನು ಸೋಲಿಸಿ, ನಾನೇ ಅಲ್ಲಿಂದ ನಿರ್ಗಮಿಸುವಂತೆ ಮಾಡಿತ್ತು!

ಹೊಟ್ಟೆಗೆ–ಬಟ್ಟೆಗೆ ನೆಟ್ಟಗೆ ಇದ್ದ ಕವಿಗಳಿಗೆ ಇಲ್ಲದ್ದು–ಸಲ್ಲದ್ದು ಹೊಳೆಯುವಂತೆ ಆ ಗುಡ್ಡ, ಮರ, ದಿಬ್ಬ, ಮಂಜು, ಮೋಡ, ಹಸಿರು ನನ್ನಲ್ಲಿ ಏನೇನೋ ವಿಚಾರಗಳನ್ನು ಹೊಳೆಯಿಸುತ್ತಿದ್ದುದುಂಟು! ಆ ಮಣ್ಣಿನ ದಿಬ್ಬದ ಮೇಲೆ ಹಸಿರು ಹುಲ್ಲಿನ ಹೊದಿಕೆಯನ್ನು ಪ್ರಕೃತಿ ದೇವಿ ಹೊದಿಸುವಂತಾದರೆ ಎಷ್ಟು ಚೆನ್ನ! ಇದು ನನ್ನ ಹೃದಯದ ಆಶೆಯಾಗಿತ್ತು.

ಅಲ್ಲಿ ಹುಲ್ಲು ಬೆಳೆಯಗೊಡದಂತೆ ನಿಷ್ಕರುಣೆಯಿಂದ ಹಾದು ಹೋಗುವ ದಾರಿಹೋಕರು ನಿರಂತರ ಕವಿ ಶಾಪಕ್ಕೆ ಗುರಿಯಾಗಿದ್ದರು!

ಹೀಗಿರಲು.. ಬೇಸಗೆಯ ಕೊನೆಯ ದಿನಗಳಲ್ಲಿ ಧೋ ಎಂದು ಮಳೆ ಸುರಿದು ಇಡೀ ಮಡಿಕೇರಿ ಒದ್ದೆಯಾಯಿತು. ದಿನಗಳೆರಡು ಕಳೆದಿರಬೇಕು, ಎಂದಿನಂತೆ ನಾನು ಕಿಟಕಿಯಲ್ಲಿ ನಿಂತಿರಲು ದಿಬ್ಬದ ಮೇಲೆ ಕಣ್ಣು ನೆಟ್ಟಿದ್ದೆ... ಅವಕ್ಕಾದೆ. ಕಾಮನಬಿಲ್ಲಿನಂತೆ ಬಣ್ಣಬಣ್ಣದ ಹೂಗಳು ಕಿಕ್ಕಿರಿದಿದ್ದವು. ಗಾಳಿಗೆ ತಾನೇ ಬಳುಕುತ್ತಿದ್ದವು. ಹುಲ್ಲು ಹಚ್ಚ ಹಸಿರಾಗಿತ್ತು. ಮಣ್ಣಿನ ದಿಬ್ಬ ಹೂ–ದಾನಿಯಾಗಿತ್ತು! ಇದೀಗ ದಾರಿಹೋಕರು ಒಮ್ಮೆ ನಿಂತು ನೋಡಿ ದಿಬ್ಬವನ್ನು ಬಳಸಿಕೊಂಡು ಸಾಗುತ್ತಿದ್ದರು. ಇದ್ದಕ್ಕಿದ್ದ ಹಾಗೆ ಎದೆಯಾಳದಿಂದ ಉಕ್ಕಿಬಂದ ಭಾವಗಳು ಕವಿತೆಗಳಾಗಿ ಹೊಮ್ಮಿದಂತೆ ಇದ್ದವು ಆ ಹೂಗಳು. ನನ್ನ ನೆರೆಮನೆಯವರು ನನ್ನ ವಿಸ್ಮಯಕ್ಕೆ ನೀರೆರೆಯುತ್ತಾ ಅವು ಕಾಡು ಲಿಲ್ಲಿ ಹೂಗಳು; ನೆಲದಾವರೆಯೆಂದೂ ಹೇಳುತ್ತಾರೆ, ಪ್ರತಿ ವರುಷ ಮಿಂಚು–ಗುಡುಗಿನ ಮೊದಲ ಮಳೆಗೆ ಅರಳಿ ಎರಡು ದಿನ ಇದ್ದು ಮರೆಯಾಗುತ್ತವೆ ಎಂದರು.

ನನ್ನ ಅರೆಬೆಂದ ವಿಚಾರಗಳಿಗೆ ಹೂವಿನೇಟು ನೀಡಿದ್ದಳು ಪ್ರಕೃತಿ! ಆ ದಿಬ್ಬದ ಅಸ್ತಿತ್ವ–ಅರ್ಥ ನಿಧಾನವಾಗಿಯಾದರೂ ನನಗೆ ಮನವರಿಕೆಯಾಗಿತ್ತು. ಮತ್ತೆಂದೂ ನಾನು ಆ ಮಣ್ಣಿನ ದಿಬ್ಬಕ್ಕೆ ಹುಲ್ಲು ಹೊದಿಸುವ, ದಾರಿಹೋಕರನ್ನು ಶಪಿಸುವ ಯೋಚನೆ ಮಾಡಲಿಲ್ಲ. ಒಂದೆರಡು ದಿನಗಳ ಮಟ್ಟಿಗಾದರೂ ಸಮಯದ ಸಡಗರ ಹೆಚ್ಚಿಸಿದ ಆ ಹೂವಿನ ದಿಬ್ಬದ ನೆನಪು ನನ್ನೊಳಗೆ ಮತ್ತೊಂದು ಬೇಸಿಗೆಯ ತನಕ ಹಬ್ಬುತ್ತಾ ಹೋಯಿತು. ಕವಿತೆಯ ನೆಲೆ ಯಾವುದು? ನನ್ನನ್ನೇ ನಾನು ಕೇಳಿಕೊಳ್ಳುತ್ತಾ ಹೋದೆ... ಯಾವುದು ಕವಿತೆಯ ನೆಲೆ? ಸಮೃದ್ಧಿಯೋ... ಅಭಾವವೋ?, ಕರುಣೆಯೋ... ಕಾಠಿಣ್ಯವೋ? ನೆಮ್ಮದಿಯೋ... ನೋವೋ?... ಉಳ್ಳವರಿಗೆ ಒಬ್ಬರೋ... ಇಬ್ಬರೋ... ಮಕ್ಕಳು. ಇಲ್ಲದವರಿಗೆ ಹತ್ತಾರು. ತಿಳಿಗೊಳದಲಿ ಒಂದೋ ಎರಡೋ ಹಂಸ ನಲಿದಾಡುವುದು. ಕಲಕದಿದ್ದರೆ ನೀರು ಚಂದ್ರಬಿಂಬ ಕಾಣಬಹುದು. ಅದೇ ಕೆಸರುಗೊಳದಲಿ ನೂರಾರು ಕಮಲಗಳು...

ಬಸವಣ್ಣನ ವಚನಗಳ ಸರಳತೆ, ಬದ್ಧತೆ, ಅಕ್ಕನ ವಚನಗಳ ಭಾವ–ತೀವ್ರತೆ, ನೆರುಡಾನ ಕವನಗಳ ಮಾಂತ್ರಿಕತೆ, ಅಮೃತಾ ಪ್ರೀತಮಳ ಕವನಗಳ ಉನ್ಮಾದತೆ ನನಗೆ ಅಚ್ಚುಮೆಚ್ಚು. ಕನ್ನಡದ ಕುವೆಂಪು, ಬೇಂದ್ರೆ, ಕೆ.ಎಸ್.ನ., ಜಿ.ಎಸ್.ಎಸ್., ನಿಸಾರ್ ಅಹಮದ್, ಕೆ.ವಿ. ತಿರುಮಲೇಶ್, ಎಚ್.ಎಸ್.ವಿ., ಎಚ್.ಎಸ್. ಶಿವಪ್ರಕಾಶ್, ಸಿದ್ಧಲಿಂಗಯ್ಯ ಇವರ ಕವನಗಳನ್ನು ಮುಂದಿಟ್ಟುಕೊಂಡು ಕವನ ಬರೆಯಲು ತೊಡಗಿದೆ. ಬಾಗಲೋಡಿ ದೇವರಾಯ, ಲಂಕೇಶ್, ತೇಜಸ್ವಿ, ಅನಂತಮೂರ್ತಿ, ದೇವನೂರ ಮಹಾದೇವ ಇವರ ಗದ್ಯ ದಾರಿ ತೋರಿದವು.

ಈ ಎಲ್ಲ ಹಿಂದಣ ಹಿರಿಯರಿಗೆ ನಮಸ್ಕಾರ.

ನಾ ಬರುತ್ತೇನೆ ಕೇಳು (೧೯೮೭), ಚಂದ್ರನನ್ನು ಕರೆಯಿರಿ ಭೂಮಿಗೆ (೧೯೯೧) ಹಾಗೂ ಹೊಳೆಮಗಳು (೧೯೯೬)—ಇವು ನನ್ನ ಮೂರು ಕವನ ಸಂಕಲನಗಳು. ಈ ಮೂರೂ ಸಂಕಲನಗಳಿಂದ ಆಯ್ದ ನೂರೊಂದು ಕವನಗಳ ಸಂಗ್ರಹ ಈ 'ಆಕಾಶಮಲ್ಲಿಗೆ'. ತಮ್ಮ ಒಂದು ಪತ್ರ ರೂಪದ ಮುನ್ನುಡಿಯ ಮೂಲಕ ಈ ಆಯ್ದ ಕವನಗಳನ್ನು ಪರಿಚಯಿಸುತ್ತಿರುವ ನನ್ನ ಕವಿತೆಗಳ ಮಿತ್ರರಾದ ಶ್ರೀ ಲಕ್ಷ್ಮೀಶ ತೋಳ್ಪಾಡಿ, ಬೆನ್ನುಡಿಯ ಮೂಲಕ ಹರಸುತ್ತಿರುವ ಕನ್ನಡದ ಹಿರಿಯ ಕವಿ ಶ್ರೀ ಜಿ.ಎಸ್. ಶಿವರುದ್ರಪ್ಪ ಹಾಗೂ ಮೂರು ಪದಗಳಿಂದ ನನ್ನ ಈ ನೂರೊಂದು ಪದ್ಯಗಳನ್ನು ತೂಗಿರುವ ದೇವನೂರು ಮಹಾದೇವ, ಇಲ್ಲಿನ ಕವನಗಳನ್ನು ಆಯ್ದ ಡಿ.ಎಸ್. ನಾಗಭೂಷಣ, ಪ್ರಕಟಿಸುತ್ತಿರುವ ಶ್ರೀ ನೆಲಮನೆ ದೇವೇಗೌಡ ಇವರಿಗೆ ಕೃತಜ್ಞಳಾಗಿದ್ದೇನೆ.

ನನ್ನನ್ನು ತಿದ್ದಿ ಬೆಳೆಸಿದ ಹೆಸರಿಸಲಾಗದ ಅನೇಕ ಗೆಳೆಯ–ಗೆಳತಿಯರಿಗೆ, ಸಮಕಾಲೀನ ಕವಿ–ಕವಯತ್ರಿಯರಿಗೆ, ಸಹೃದಯ ಓದುಗರಿಗೆ ನಾನು ಸದಾ ಋಣಿ. ಹಾಗೇ ನನ್ನ ಈ ಮೊದಲ ಮೂರು ಕವನ ಸಂಕಲನಗಳನ್ನು ಪ್ರಕಟಿಸಿದ ಅಕ್ಷರ ಪ್ರಕಾಶನ, ಸಾಗರ; ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ ಹಾಗೂ ಪರಿಸರ ಪ್ರಕಾಶನ, ಶಿವಮೊಗ್ಗ – ಇವರಿಗೂ ಕೂಡಾ.

(೨೦೦೦ರಲ್ಲಿ ಪ್ರಕಟವಾದ ನೂರೊಂದು ಕವನಗಳ ಸಂಗ್ರಹ
'ಆಕಾಶ ಮಲ್ಲಿಗೆ'ಗೆ ಬರೆದ ಲೇಖಕಿಯ ಮಾತುಗಳು)

# ಆ ಮರ ಮತ್ತು ಕುವೆಂಪು

ನನ್ನನ್ನು ಕುವೆಂಪು ಅವರ ಬಳಿ ತಂದು ಬಿಟ್ಟವರು ಯಾರು? ಕವಿಗೆ ಕವಿ ಮಣಿವನ್! ಹೌದು ನಾನು ಕುವೆಂಪು ಅವರಿಗೆ ಮಣಿದುದ್ದರ ಹಿಂದೆ ಈಗ ಹಿಂತಿರುಗಿ ನೋಡಿದಾಗ ಒಂದು ದೀರ್ಘ ವೃತ್ತಾಂತವೇ ರೂಪುಗೊಳ್ಳುತ್ತಿರುವಂತಿದೆ–

ನನಗಾಗ ನಾಲ್ಕರ ಪ್ರಾಯ. ನನ್ನ ಅಜ್ಜಿಯ ಊರಾದ ಕಾರ್ಕಳದ ಮನೆಯ ಹಿತ್ತಲಿನಲ್ಲಿ ನನ್ನ ಗೆಳತಿಯರೊಂದಿಗೆ ಸೇರಿಕೊಂಡು ಹಲಸಿನ ಮರದ ಬುಡದಲ್ಲಿ ತೂಗುತ್ತಿದ್ದ ಮಿಡಿಗಳನ್ನೆಲ್ಲಾ ಕಿತ್ತು ರಾಶಿ ಹಾಕಿ ತರಕಾರಿ ಮಾರುವವಳ ಆಟ ಆಡುತ್ತಿದ್ದೆ. ಯಾಕೋ ಅಲ್ಲಿಗೆ ಬಂದ ತನ್ನ ತಾಯಿ ಒಂದು ಚಣ ಹೌಹಾರಿ ಏನೂ ಮಾಡಲಾಗದೆ ಅಪಾರ ಅಸಹಾಯಕತೆಯಿಂದ ಆ ಮಿಡಿಗಳ ರಾಶಿ ನೋಡಿ, ಮಿಡುಕಿ ಮಿಡಿಗೊಂದರಂತೆ ನನಗೆ ಏಟನ್ನು ನೀಡಿದರು! ನಾನು ಅಳುತ್ತಾ 'ನನಗೇನೂ ಈ ಮಿಡಿಗಳು ಬೇಕಾಗಿಲ್ಲ. ಬೇಕಾದರೆ ವಾಪಸ್ಸು ಮರಕ್ಕೇ ಅಂಟಿಸು' ಎಂದು ಮಾರುತ್ತರ ನೀಡಿದೆ. ನನ್ನೊಳಗಣ ಕವಿಯೆ ಈ ಮಾತುಗಳನ್ನು ಆಡಿಸಿರಬೇಕು! ಅದಕ್ಕೆ ಸಿಕ್ಕ ಬಹುಮಾನವೆಂದರೆ ಮತ್ತೆ ಮುಳ್ಳುಕಂಟಿಯಿಂದ ನಾಲ್ಕು ಏಟು. ನನ್ನೊಳಗಿನ ಕವಿಯೇ ನನ್ನನ್ನು ಕುವೆಂಪು ಅವರ ಬಳಿ ಕರೆತಂದ ಎಂದು ನಂಬೋಣವೇ?

ಇಲ್ಲ... ಇಲ್ಲ... ಇರಲಿಕ್ಕಿಲ್ಲ... ಹಾಗಾದರೆ?

ಇನ್ನೂ ಒಂದು ವರುಷ ಮುಂದೆ ಹೋದರೆ... ನನಗಾಗ ಐದರ ಪ್ರಾಯ. ಆಗತಾನೆ ಸ್ಪಷ್ಟವಾಗಿ ಮಾತನಾಡಲು ಪ್ರಶ್ನೆಗಳನ್ನು ಕೇಳಲು ಕಲಿತಿದ್ದ ನಾನು, ನಮ್ಮ ಮನೆಯ ಪಜಾರದಲ್ಲಿ ಎತ್ತರದಲ್ಲಿ ತೂಗು ಹಾಕಿದ್ದ ಎರಡು ಪಟಗಳನ್ನು ಕುರಿತಾಗಿ ಪ್ರತಿದಿನವೂ ನನ್ನ ಅಜ್ಜಿಯನ್ನು, ಅದು ಯಾರ ಎಂದು ಕೇಳುತ್ತಿದ್ದೆ. ಆ ಪಟದಲ್ಲಿದ್ದವರು ಯಾರು ಎಂದು ಈ ಮೊದಲು ಅಜ್ಜಿಯ ಮೂಲಕ ತಿಳಿದುಕೊಂಡಿದ್ದರೂ ಪ್ರಶ್ನೆ ಕೇಳುವುದಕ್ಕಾಗಿಯೇ ನಾನು ಕೇಳುತ್ತಿದ್ದ ಪ್ರಶ್ನೆಯದು! ನನ್ನ ಅಜ್ಜಿ ಸಾವಧಾನವಾಗಿ, ರಾಮಕೃಷ್ಣ ಪರಮಹಂಸ... ವಿವೇಕಾನಂದ... ಎನ್ನುತ್ತಿದ್ದರು. ತುಂಡು ಬಟ್ಟೆಯನ್ನುಟ್ಟು, ಹೆಗಲಮೇಲೆ ಬೈರಾಸು ಹೊದ್ದು ಸಿದ್ಧಾಸನ ಹಾಕಿ ಕುಳಿತ ಪರಮಹಂಸ, ಕೈಕಟ್ಟಿಕೊಂಡ ಭಂಗಿಯಲ್ಲಿರುವ ವಿವೇಕಾನಂದ– ಈ ಪಟಗಳು ಈ ಹೊತ್ತಿಗೂ ನನ್ನ ಕಣ್ಣಲ್ಲಿ ಇವೆ. ಅರ್ಧರಾತ್ರಿಯಲ್ಲಿ ಎದ್ದು ಚಾಂಡಾಲನ ಮನೆಯನ್ನು ಯಾರಿಗೂ ತಿಳಿಯದಂತೆ ಪ್ರವೇಶಿಸಿ, ಅವನ ಕಕ್ಕಸ್ಸು ಮನೆಯನ್ನು ಗುಡಿಸಿ,

ತಮ್ಮ ಕೇಶರಾಶಿಯಿಂದ ಆ ಸ್ಥಳವನ್ನು ಒರೆಸಿದ, ದೀನರಲ್ಲಿ ದೀನರಾಗಬೇಕೆಂದೇ ಇಚ್ಛಿಸಿದ 'ಪರಮಹಂಸ' ಮತ್ತು ಅವರ ಪಾದಗಳನ್ನು ಶಿರದಲ್ಲಿ ಧರಿಸಿದ, 'ನಾನು ಹೊಲೆಯನಾಗಿದ್ದರೆ ಇನ್ನೂ ಹೆಚ್ಚು ಸಂತೋಷ ಪಡುತ್ತಿದ್ದೆ' ಎಂದ ವಿವೇಕಾನಂದ ಈ ಗುರುಶಿಷ್ಯರ ಭಲೇ ಜೋಡಿಯೇ ನನ್ನನ್ನು ಇನಿತಿನಿತಾಗಿ ಶ್ರೀ ಕುವೆಂಪು ಅವರತ್ತ ಕರೆದೊಯ್ದಿರಬಹುದು!

ಇಲ್ಲ... ಇಲ್ಲ... ಇರಲಿಕ್ಕಿಲ್ಲ... ಹಾಗಾದರೆ?

...ಆ ಮರವೇ ನನ್ನನ್ನು ಅವರತ್ತ ಕರೆದೊಯ್ದಿರಬಹುದು. ಹೌದು ಅದೇ ಮರ... ಆಕಾಶಮಲ್ಲಿಗೆಯ ಮರ...

ನಾನು ಇಡಿಯಾಗಿ ನನ್ನ ಬಾಲ್ಯವನ್ನೂ ಹದಿಹರಯವನ್ನೂ ಕಳೆದಿದ್ದು ಬೆಟ್ಟ, ಗುಡ್ಡ ಕಾಡುಗಳಿಂದ ಆವೃತವಾಗಿದ್ದ ಶಿವಮೊಗ್ಗೆಯಲ್ಲಿ, ನಾನು ಓದುತ್ತಿದ್ದ ಶಿಶುವಿಹಾರದ ಮಗ್ಗುಲಲ್ಲೇ ಒಂದು ಎಕರೆ ವಿಸ್ತಾರದಲ್ಲಿ ಡಿ.ಸಿ. ಬಂಗಲೆಯಿತ್ತು. ಅಲ್ಲೂ ಹೆಚ್ಚು ಕಡಿಮೆಯೆಂದರೆ ನಲವತ್ತು – ಐವತ್ತು ಮರಗಳಿದ್ದವು. ಮರಗಳ ನಡುವೆ ಎಲ್ಲೋ ಮೂಲೆಯಲ್ಲಿ ಒಂದು ಬಂಗಲೆ! ನನಗೆ ಅಚ್ಚರಿಯೂ, ಅಲ್ಲಿಗೆ ಹೋಗಿ ಆಟವಾಡಬೇಕೆಂಬ ಆಸೆಯೂ ಆಗುತ್ತಿತ್ತು. ಅಲ್ಲಿದ್ದುದು ಹೆಚ್ಚು ಪಾಲು ಹುಣಿಸೇ ಮರಗಳಾದ್ದರಿಂದ ಜೊತೆ ಜೊತೆಗೆ ಭಯವೂ ಆಗುತ್ತಿತ್ತು. ಹಾಗಾಗಿ ನಂತರದ ದಿನಗಳಲ್ಲೂ ಆ ಮರಗಳ ಬಗ್ಗೆ ನನ್ನ ಕುತೂಹಲ ತಣಿಯಲಿಲ್ಲ. ಆನಂತರ ಹೈಸ್ಕೂಲು, ಕಾಲೇಜಿಗೆ ಹೋಗುವ ದಾರಿಯಲ್ಲೂ ಮರಗಳು. ಬೇಸಿಗೆಯಲ್ಲಂತೂ ಹಳದಿ, ಕೆಂಪು, ನೇರಳೆ ಬಣ್ಣದ ಹೂಗಳು. ನನಗೆ ಚೆನ್ನಾಗಿ ನೆನಪಿದೆ. ನೆಹರು ಕ್ರೀಡಾಂಗಣದ ದಕ್ಷಿಣ ದಿಕ್ಕಿಗೆ ಮುಗಿಲ ಮುಟ್ಟಿ ಬೆಳೆದು ನಿಂತಿರುವ ಆಕಾಶಮಲ್ಲಿಗೆಯ ಮರ ಇವತ್ತಿಗೂ ಹಾಗೆಯೇ ಇದೆ. ಏನಿಲ್ಲವಾದರೂ ಪ್ರತಿದಿನ ನಾನು ಆ ಮರವನ್ನು ನೋಡುತ್ತಿದ್ದೆ. ಮಲ್ಲಿಗೆಯ ಬಣ್ಣದ ಉದ್ದನೆಯ ತೊಟ್ಟಿನ ಅದರ ಹೂವುಗಳನ್ನು ಆರಿಸಿ ನಾನು ನನ್ನ ಗೆಳತಿಯರೂ ಪೀಪಿ ಮಾಡುತ್ತಿದ್ದೆವು. ಹೆಣೆದು ಮುಡಿಯುತ್ತಿದ್ದೆವು. ಗಡಿಬಿಡಿಯಲ್ಲಿ ಶಾಲೆಗೆ ಹೊರಟಿದ್ದಾದರೆ ಒಂದೆರಡು ಹೂಗಳನ್ನಾದರೂ ಆರಿಸಿ ಕೈ ಚೀಲಕ್ಕೆ ತುಂಬುತ್ತಿದ್ದೆವು.

ಕುವೆಂಪು ಬಗ್ಗೆ, ಅವರ ಬರಹಗಳ ಬಗ್ಗೆ ನನ್ನ ಆಸಕ್ತಿ, ಆಲೋಚನೆಗಳಿದ್ದಲ್ಲಿ, ಅದರ ಹುಟ್ಟು ಆ ಮರಗಳ ನಾಡಿನಲ್ಲೇ. ಅವರ ಹಾಡುಗಳನ್ನೂ ಅದರ ಜಾಡುಗಳನ್ನೂ ನಾನೇನಾದರೂ ಹಿಡಿಯಲು ಹೋಗುವುದಾದರೆ ಅದು ಆ ಮರಗಳ ನಾಡಿನಲ್ಲೇ... ಹೈಸ್ಕೂಲಿನಲ್ಲಿ ಅಂಕಗಳ ಆಸೆಯಿಂದ ಸಂಸ್ಕೃತವನ್ನು ಒಪ್ಪಿಕೊಂಡಿದ್ದರಿಂದ ಕನ್ನಡದ ಕವಿಗಳನ್ನು ಶಾಲೆಯಲ್ಲಿ/ ಕಾಲೇಜಿನಲ್ಲಿ ಓದುವ/ ಕೇಳುವ ಅವಕಾಶ ಶಾಶ್ವತವಾಗಿ ತಪ್ಪಿಹೋಯಿತು. ಆದರೂ ಒಂದೇ ಅವಕಾಶವಿತ್ತು! ಅದೆಂದರೆ ಹೈಸ್ಕೂಲಿನಲ್ಲಿ ನಿತ್ಯ ಪ್ರಾರ್ಥನೆಗೆ 'ಜಯಭಾರತ ಜನನಿಯ ತನುಜಾತೆ...' ಹಾಡುತ್ತಿದ್ದೆವು. ಮೇಳದಲ್ಲಿ ಹಾಡುವಾಗ ತುಂಬಾ ಖುಷಿ ಕೊಡುತ್ತಿದ್ದ ಹಾಡದು. 'ಜಯ ಸುಂದರ ನದಿವನಗಳ ನಾಡೆ' ಎಂದೆಲ್ಲಾ ಹಾಡುವಾಗ

ನನ್ನೂರಿನ ಬಗ್ಗೆ ತುಂಬಾ ಹೆಮ್ಮೆ ಅನಿಸುತ್ತಿತ್ತು. ಅದರ ಕರ್ತೃ ಕುವೆಂಪು ಎಂದು ಆದಾಗಲೇ ನನ್ನ ಕಿವಿಗೆ ಬಿದ್ದಿತ್ತು.

ನಾನು ಕುವೆಂಪುರವರನ್ನು ಮೊದಲನೆಯ ಸಲ ನೋಡಿದ್ದು ಎಂಟನೆಯ ಇಯತ್ತೆಯಲ್ಲಿ. ಅದೊಂದು ದಿನ ಇದ್ದಕ್ಕಿದ್ದ ಹಾಗೆ ನಮ್ಮನ್ನು ಸರತಿಯ ಸಾಲಿನಲ್ಲಿ ನಿಲ್ಲಿಸಿದರು. ನಾನಾಗ ಓದುತ್ತಿದ್ದದು ಶಿವಮೊಗ್ಗೆಯ ನ್ಯಾಷನಲ್ ಗರ್ಲ್ಸ್ ಹೈಸ್ಕೂಲಿನಲ್ಲಿ. ಪಕ್ಕದಲ್ಲೇ ಇದ್ದ ಕಮಲಾನೆಹರು ಕಾಲೇಜಿಗೆ ಎಸ್.ಪಿ. ಬಾಲಸುಬ್ರಹ್ಮಣ್ಯಂ ಬಂದಿರುವರೆಂದು ಸಾಲಿನಲ್ಲಿದ್ದವರು ತಿಳಿಸಿದರು. ಸರಿ, ನಮ್ಮೆಲ್ಲರನ್ನೂ ಪಕ್ಕದಲ್ಲೇ ಇದ್ದ ಕಮಲಾ ನೆಹರು ಕಾಲೇಜಿಗೆ ಕರೆದೊಯ್ದು ಸಾಲಾಗಿ ಕುಳ್ಳಿರಿಸಿದರು. ಕುವೆಂಪುರವರೂ, ಸುಬ್ರಹ್ಮಣ್ಯಂರವರೂ ವೇದಿಕೆಯ ಮೇಲೆ ಆಸೀನರಾಗಿದ್ದರು. ನನ್ನ ಗಮನವೆಲ್ಲ ಸುಬ್ರಹ್ಮಣ್ಯಂರವರ ಮೇಲೆ ಇದ್ದುದರಿಂದ ನಾನು ಕುವೆಂಪುರವರನ್ನು ಅಷ್ಟಾಗಿ ಗಮನಿಸಲಿಲ್ಲವೆಂದೇ ಹೇಳಬೇಕು. ಕೊನೆಗೊಮ್ಮೆ ಅಲ್ಲಿದ್ದವರು ಎಸ್.ಪಿ. ಬಾಲಸುಬ್ರಹ್ಮಣ್ಯಂ ಅಲ್ಲ, ಬರೀ ಸುಬ್ರಹ್ಮಣ್ಯಂ (ಈಗಿನ ಶಿವಮೊಗ್ಗ ಸುಬ್ಬಣ್ಣ) ಎಂದು ತಿಳಿದು ನಮ್ಮ ಉತ್ಸಾಹ ಠುಸ್ಸೆಂದಿತು. ಇಷ್ಟರ ನಡುವೆ ನಮ್ಮ ಶಾಲೆಯ ಹುಡುಗಿಯೊಬ್ಬಳಿಂದ ಗಾಯನವಾಯಿತು–

**ದೂರ... ಬಹುದೂರ...**
**ಅಲ್ಲಿಹುದೆಮ್ಮ ಊರ... ತೀರ...**

ತದನಂತರ ಶಿವಮೊಗ್ಗ ಸುಬ್ಬಣ್ಣ ಅವರಿಂದ 'ಆನಂದಮಯ ಈ ಜಗ ಹೃದಯ...'ದ ಗಾಯನ. ನನಗೆ ನನ್ನ ಶಾಲೆಯ ಹುಡುಗಿ ಚೆನ್ನಾಗಿ ಹಾಡಿದ್ದಾಳೆ ಎಂದೆನಿಸಿತ್ತು. ನಾನೂ ತಕ್ಕಮಟ್ಟಿಗೆ ಹಾಡುತ್ತಿದ್ದೆನಾದ್ದರಿಂದ ಅವಳು ಹಾಡಿದ್ದನ್ನೇ ಅನುಕರಿಸಿ 'ದೂರ... ದೂರ...' ಎಂದು ಹಾಡನ್ನು ಒಳಗೊಳಗೆ ಗುಣು ಗುಣಿಸುತ್ತಿರಲು ಕುವೆಂಪುರವರು ಸಭೆಯನ್ನು ಉದ್ದೇಶಿಸಿ ಮಾತನಾಡಿದರು. 'ಇಷ್ಟ ಬಂದ ಹಾಗೆ ಹಾಡೋದಲ್ಲ... ಭಾವ ಇರಬೇಕು, ಚಿತ್ರ ಮೂಡಬೇಕು, ಸುಬ್ಬಣ್ಣ ಹಾಡಿದರಲ್ಲ... ಹಾಗೆ...' ಅಂದರು. ಆದಿಯಲ್ಲಿ ಹಾಡಿದ ಹುಡುಗಿಗೆ ಕೊಂಚ ಕಟುವಾಗಿಯೆ ಬೈದರು! ನನಗೆ, ಆಕೆ ಚೆನ್ನಾಗಿಯೇ ಹಾಡಿದ್ದಾಳೆ, ಇವರಿಗೇಕೆ ಒಡಿಸಲಿಲ್ಲ? ಎಂಬ ಅಚ್ಚರಿ! ನಿಷ್ಕಾರಣವಾಗಿ ಹುಡುಗಿಗೆ ಬೇಕೆಂದೇ ಬೈಯುತ್ತಿದ್ದಾರೆ ಎಂಬ ಅನುಮಾನ. ನಾನು ಅವರ ನಿಲುವನ್ನು ಕಣ್ಣು ತುಂಬಿಕೊಳ್ಳುತ್ತಾ ಈ ಮುದುಕನನ್ನು ಮೆಚ್ಚಿಸುವುದು ಕಷ್ಟ ಅಂದುಕೊಂಡೆ! ಆ ಪುಟ್ಟ ಹುಡುಗಿಗೆ ಬಯ್ಯಬಾರದಿತ್ತು, ಅದೂ ಸಭೆಯಲ್ಲಿ, ಎಲ್ಲರ ಎದುರಿಗೆ ಎಂದೇ ನನ್ನ ತರ್ಕವಾಗಿತ್ತು. ಯಾಕೋ ಒಮ್ಮೆಗೆ ಕುವೆಂಪುರವರ ಬಗ್ಗೆ ಭಯವೂ ಮೂಡಿತು. ನಾವು ಕುವೆಂಪುರವರಿಗೂ, ಸುಬ್ಬಣ್ಣ ಅವರಿಗೂ ಶಾಪ ಹಾಕುತ್ತಾ (ಸುಬ್ಬಣ್ಣ ಚೆನ್ನಾಗಿ ಹಾಡಿದ್ದರಿಂದ ತಾನೇ ಹುಡುಗಿ ಬೈಗಳ ತಿಂದದ್ದು!) ಅಧ್ಯಾಪಕರ ಕಣ್ಣು ತಪ್ಪಿಸಿ ಓಡಲು ಹೊಂಚು ಹಾಕತೊಡಗಿದವು; ಸಭೆ ಮುಕ್ತಾಯವಾಗುವ ಮೊದಲೇ ಅಲ್ಲಿಂದ ಕಾಲುಕಿತ್ತಿದ್ದೆವು.

ಇದಾದ ಸ್ವಲ್ಪ ದಿನಗಳಲ್ಲೇ... ಶಾಲಾ ವಾರ್ಷಿಕೋತ್ಸವದಲ್ಲಿ ನನಗೆ ಭಾವಗೀತೆ ಸ್ಪರ್ಧೆಯಲ್ಲಿ ಕುವೆಂಪುರವರ ನನ್ನ ಮನೆ ಕವನ ಸಂಕಲನ ಬಹುಮಾನ ರೂಪದಲ್ಲಿ ಸಂದಿತು. ಆಟೋಟ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಪ್ಲಾಸ್ಟಿಕ್ ತಟ್ಟೆ, ಲೋಟ, ಡಬ್ಬ ಇತ್ಯಾದಿ... ಹಾಡು-ನೃತ್ಯ ಇತ್ಯಾದಿ ಸಾಂಸ್ಕೃತಿಕ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಪುಸ್ತಕ ರೂಪದ ಬಹುಮಾನ. ನನಗೆ ಪುಸ್ತಕ ರೂಪದ ಬಹುಮಾನ ಕೊಟ್ಟಾಗ ಅಳುವೇ ಬಂದಿತ್ತು! ನನ್ನ ಗೆಳತಿಯರ ಕೈಯಲ್ಲಿದ್ದ ಪ್ಲಾಸ್ಟಿಕ್ ಡಬ್ಬ, ತಟ್ಟೆ, ಇತ್ಯಾದಿ ನೋಡಿ... ನನಗೂ ಅಂತಾದ್ದೇ ಒಂದು ಬಹುಮಾನ ಬರಬಾರದಿತ್ತೇ ಎಂದು ಅಲವತ್ತುಕೊಂಡಿದ್ದೆ! ಇದನ್ನು ನನ್ನ ಅಜ್ಜಿಯ ಹತ್ತಿರ ತೋಡಿಕೊಂಡಾಗ ಆಕೆ ಪುಸ್ತಕದ ಮಹತ್ವ ತಿಳಿಸಿ 'ಪ್ಲಾಸ್ಟಿಕ್ ತಟ್ಟೆ ನಾಯಿಗೆ ಅನ್ನ ಹಾಕೋಕೆ ಆದೀತು, ಪುಸ್ತಕ ಜ್ಞಾನವನ್ನು ಹೆಚ್ಚಿಸುತ್ತೆ. ಎಷ್ಟು ಪದ್ಯಗಳಿವೆ ನೋಡು ಈ ಪುಸ್ತಕದಲ್ಲಿ... ಎಲ್ಲಿ ಓದಿ ಹೇಳು ನೋಡೋಣ' ಎಂದು ಸ್ವಲ್ಪ ಉತ್ಪ್ರೇಕ್ಷೆಯಿಂದಲೇ ಪುಸ್ತಕವನ್ನು ಹೊಗಳಿ ನನ್ನನ್ನು ಹುರಿದುಂಬಿಸಿದರು. ನಾನು ದಾರಿಗಾಣದೆ ಪುಸ್ತಕದ ಹಾಳೆಗಳನ್ನು ತಿರುವಿ ಅದರ ಮೊದಲ ಪದ್ಯವಾದ 'ಕನ್ನಡ'ವನ್ನು ನನಗೆ ತಿಳಿದಂತೆ ರಾಗ ಹಾಕಿ ನನ್ನ ಅಜ್ಜಿಗೆ ಹಾಡಿ ತೋರಿಸಿದೆ-

**ಕನ್ನಡ ಎನೆ ಕುಣಿದಾಡುವುದೆನ್ನದೆ,**
**ಕನ್ನಡ ಎನೆ ಕಿವಿ ನಿಮಿರುವುದು!**
**ಕಾಮನ ಬಿಲ್ಲನು ಕಾಣುವ ಕವಿಯೊಲು**
**ತೆಕ್ಕನೆ ಮನ ಮೈಮರೆಯುವುದು**

ಕೊಂಕಣಿ ಮಾತನಾಡುವ ಹುಡುಗಿಗೆ ಕುವೆಂಪುರವರು ಕನ್ನಡದ ದೀಕ್ಷೆ ಕೊಟ್ಟ ಪರಿ ಇದೆನ್ನಬಹುದೆ? ಸಂಕಲನದ ಇತರೆ ಪದ್ಯಗಳಾದ ಕಾಮನಬಿಲ್ಲು ಕಮಾನು ಕಟ್ಟಿದೆ, ನನ್ನ ಮನೆ, ಒಡವೆಗಳು, ಮೂರ್ತಿಯ ಚಂದ್ರ ನನ್ನೊಳಗೆ ಇಷ್ಟಿಷ್ಟೇ ಇಳಿದವು. ಅದೆಷ್ಟೋ ತಿಂಗಳುಗಳ ಕಾಲ ಪುಸ್ತಕ ಚಿಂದಿಯಾಗುವ ತನಕ – ನಾನು ಆ ಕವನಗಳನ್ನು ಹಾಡಿಕೊಂಡಿದ್ದುಂಟು... ಅಷ್ಟರ ತನಕ ಪಠ್ಯಪುಸ್ತಕಗಳಲ್ಲಿ ಬಿಡಿಬಿಡಿಯಾಗಿ ಪದ್ಯ ಓದಿದ್ದೆನೆ ಹೊರತು ಇಡಿಯಾಗಿ ಕವನಗಳು ಇರುವ ಪುಸ್ತಕವನ್ನು ನಾನು ನೋಡಿರಲಿಲ್ಲ. ಬರೀ ಪದ್ಯಗಳಿಗಾಗಿಯೇ ಪುಸ್ತಕ ಮಾಡುತ್ತಾರೆಯೇ? ಎಂದು ಸೋಜಿಗಗೊಂಡಿದ್ದೆ. ಗುಂಗುರು ಕೂದಲಿನ, ಬಿಳಿ ಜುಬ್ಬಾ-ಪೈಜಾಮದ, ಎತ್ತರದ ನಿಲುವಿನ, ಕೀಚಲು ದನಿಯ ಕುವೆಂಪು ನೆನಪಾದರು. 'ದೂರ... ಬಹುದೂರ...' ಹಾಡು ನೆನಪಾಯಿತು! ಒಂದು ರೀತಿಯ ಸಮ್ಮಿಶ್ರ ಭಾವ ಮೂಡಿ ಬಂತು. ಚಿತ್ರ ಮೂಡುವ ಹಾಗ, ಭಾವ ಹೊಮ್ಮುವ ಹಾಗೆ 'ನನ್ನ ಮನೆ'ಯ ಕವನಗಳನ್ನು ಹಾಡಲು ನಾನು ಪ್ರಯತ್ನ ಪಟ್ಟಿದ್ದಂತೂ ನಿಜ! ಇಷ್ಟು ಸಾಲದು ಎಂದು ನಾನು, ನನ್ನ ತಮ್ಮಂದಿರು ಸೇರಿಕೊಂಡು 'ನನ್ನ ಮನೆ' ಕವನವನ್ನು ನಮ್ಮ ಮನೆಯಲ್ಲಿ ನೃತ್ಯರೂಪದಲ್ಲಿ ಅಭಿನಯಿಸಿದೆವು. ಇದೀಗ ಮೂವತ್ತು ವರುಷಗಳ ನಂತರ ಆ ಘಟನೆಯನ್ನು ಮೆಲುಕು ಹಾಕಿದಾಗ 'ಅನುಬಂಧ' ಎಂದರೆ ಇದಲ್ಲವೆ ಎಂದು ಆಶ್ಚರ್ಯವಾಗುತ್ತದೆ!

'ನನ್ನ ಮನೆ' ಪುಸ್ತಕ ಚಿಂದಿಯಾಗಿ ನನ್ನ ನಾಲಗೆಯ ಮೇಲಿಂದ ಆ ಕವನಗಳು ಇನ್ನೇನು ಮರೆಯಾಗುತ್ತವೆ ಎನ್ನುವಷ್ಟರಲ್ಲಿಯೇ ರಕ್ತಾಕ್ಷಿಯ ಆಗಮನವಾಯಿತು. ನಾನು ಪಿ.ಯು.ಸಿ. ಯಲ್ಲಿದ್ದಾಗ ನನ್ನ ಸೀನಿಯರ್ ಒಬ್ಬಳು ಪದೇ ಪದೇ ರಕ್ತಾಕ್ಷಿಯ ಒಂದು ಭಾಗವನ್ನು ಏಕಪಾತ್ರಾಭಿನಯದಲ್ಲಿ ಅಭಿನಯಿಸುತ್ತಿದ್ದಳು. ನನ್ನಲ್ಲಿ ರಕ್ತಾಕ್ಷಿಯ ರೋಮಾಂಚನ ಇನ್ನೂ ಹಸಿಹಸಿಯಾಗಿದ್ದಾಗಲೇ ಮತ್ತೊಂದು ಘಟನೆ ಸಂಭವಿಸಿತು. ನನ್ನ ಸ್ನೇಹಿತೆಯ ಸಹೋದರನೊಬ್ಬ ಕುವೆಂಪು ಪ್ರಣೀತವಾದ 'ಮಂತ್ರಮಾಂಗಲ್ಯ'ದ ರೀತಿಯಲ್ಲಿ ಸರಳ ವಿವಾಹವಾದ್ದರಿಂದ ಕುವೆಂಪುರವರಲ್ಲಿ ಕೇವಲ ಕವಿಯನ್ನು ನೋಡುತ್ತಿದ್ದ ಕಣ್ಣುಗಳು ಬೇರೆನನ್ನೊ ಅರಸತೊಡಗಿದವು. ಇದು ಮುಂದೆ ನನ್ನ ವಿವಾಹದ ಸಂದರ್ಭದಲ್ಲೂ ಧೈರ್ಯದ ಹೆಜ್ಜೆಗಳನ್ನಿಡಲು ಪ್ರೇರೇಪಿಸಿತಷ್ಟೇ.

ಸಾಹಿತ್ಯ ಲೋಕಕ್ಕೆ ಅದೇ ತಾನೆ ಕಣ್ಣು ತೆರೆಯತೊಡಗಿದ್ದ ನನಗೆ, ನನ್ನದೊಂದು ಸಣ್ಣಕತೆಗೆ ಶಿವಮೊಗ್ಗೆಯ ಕನ್ನಡ ಸಂಘ ಆಯೋಜಿಸಿದ್ದ ಕಥಾ ಸ್ಪರ್ಧೆಯಲ್ಲಿ ಎರಡನೇ ಬಹುಮಾನ ಲಭಿಸಿ ಪುಸ್ತಕ ರೂಪಕ ಕೊಡುಗೆಯಾಗಿ ಕೈ ಸೇರಿದ್ದು ಕುವೆಂಪುರವರ ವಿಚಾರ ಕ್ರಾಂತಿಗೆ ಆಹ್ವಾನ. ನನಗಾಗ ಹದಿನೆಂಟು ವಯಸ್ಸು, ಹೊಸ ಹುಮ್ಮಸ್ಸು. 'ಅಕ್ಷರ' ಬಹುಮೂಲ್ಯ ವಸ್ತು ಎಂದು ನಾನು ತಿಳಿದಿದ್ದ ಕಾಲವದು. ಸಾಹಿತ್ಯ ದೊಡ್ಡದು ಎಂಬ ನಂಬುಗೆಯ ನನ್ನಲ್ಲಿ ಸಾಹಿತಿಯಾಗಬೇಕೆಂಬ ಆಕಾಂಕ್ಷೆ ಮೊಳೆಯುತ್ತಿದ್ದ ಕಾಲವದು. ನನ್ನ ಅಲ್ಪಮತಿಯನ್ನು ತಿಕ್ಕಿ ತೀಡಿದ ಪುಸ್ತಕ– ಅದೇ ಆ ವಿಚಾರಕ್ರಾಂತಿಗೆ ಆಹ್ವಾನ ಅಂದು ನನ್ನ ಕೈ ಸೇರದೆ ಹೋಗಿದಿದ್ದರೆ ಇಂದು ನಾನು ಏನಾಗಿರುತ್ತಿದ್ದೆನೋ ಏನೋ ಊಹಿಸಲೂ ಆಗುತ್ತಿಲ್ಲ! ಜಾತಿ–ಮತ–ತಾರತಮ್ಯ–ಸಂಪ್ರದಾಯ–ಮೌಢ್ಯ–ಒಡವೆ, ವಸ್ತು, ಶೇಂಕಾರ, ಪ್ರದರ್ಶನ – ಪರನಿಂದೆ ಇವುಗಳಲ್ಲಿ ಮುಳುಗಿ ಹೋಗದಂತೆ ರಕ್ಷಿಸಿದ್ದೇ ಕುವೆಂಪುರವರ ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ, ವಿಚಾರ ಕ್ರಾಂತಿಗೆ ಆಹ್ವಾನ ಮತ್ತು ಕಾರಂತರ ಬಾಳ್ವೆಯೇ ಬೆಳಕು ಪುಸ್ತಕಗಳು. ಇವತ್ತಿಗೂ ನಾನು ಸಂದರ್ಭ ಸಿಕ್ಕಾಗೆಲ್ಲಾ ಕಿರಿಯರಿಗೆ ಹೇಳುವುದು, ಈ ಪುಸ್ತಕಗಳನ್ನು ಓದಿ ಎಂದು. ಈ ಪುಸ್ತಕಗಳಿಂದ ಪ್ರಭಾವಿತಳಾಗಿ ನನ್ನ ಮತಿಯನ್ನು ಸಂಪೂರ್ಣವಾಗಿ ಕುವೆಂಪು–ಕಾರಂತರ ವಿಚಾರಧಾರೆಗಳಿಗೆ ಒಡ್ಡಿದೆ.

ಪಿ.ಯು.ಸಿ.ಯಲ್ಲಿ ಪಠ್ಯವಾಗಿದ್ದ ಮುಲ್ಕರಾಜ್ ಆನಂದರ The Untouchable ನನ್ನಲ್ಲಿ ವಿಪರೀತ ಹೊಯ್ದಾಟವನ್ನು ಉಂಟು ಮಾಡಿತ್ತು. ಜಾತಿಭೇದ ಮಾಡುವುದು ದೊಡ್ಡ ಪಾಪ ಎಂಬ ಭಾವನೆ ಆ ಪುಸ್ತಕ ನನ್ನಲ್ಲಿ ಮೂಡಿಸಿತ್ತು. ಆ ದಿನಗಳಲ್ಲಿ ಸಾಹಿತಿಯಾಗಬೇಕೆಂಬ ಹಂಬಲ ನನ್ನಲ್ಲಿ ಎಷ್ಟಿತ್ತೆಂದರೆ ಐದು ರೂಪಾಯಿ ತೆತ್ತು ಶ್ರೀರಾಮಾಯಣ ದರ್ಶನಂ ಖರೀದಿಸಿ ಆ ಮಹಾಕಾವ್ಯವನ್ನು ಆದಿಯಿಂದ ಅಂತ್ಯದವರೆಗೆ ಪಠಣ ಮಾಡಿದ್ದೆ! 'ಎದೆಯ ದನಿ'ಯನ್ನು ಆಲಿಸಬೇಕೆಂಬ ಕುವೆಂಪುರವರ ಮಾತು ಆ ದಿನಗಳಲ್ಲಿ ಯಾವಾಗಲೂ ನನ್ನಲ್ಲಿ ಅನುರಣಿಸುತ್ತಿತ್ತು. ಇಷ್ಟು ಸಾಲದು ಎಂದು ಆಗ ತೀರ್ಥಹಳ್ಳಿ ಸಮೀಪದ ಹುಂಚದಲ್ಲಿ ವಾಸವಾಗಿದ್ದ ನನ್ನ ಗೆಳತಿ ಶ್ರೀದೇವಿ, ಪದ್ಮಾಕ್ಷಿಯವರ ಜತೆಗೂಡಿ ತೀರ್ಥಹಳ್ಳಿ, ಕಲ್ಲುಸಾರ, ಸಿಬ್ಬಲು ಗುಡ್ಡೆ, ಮೃಗವಧೆ ಮುಂತಾದವುಗಳಿಗೆ ಭೇಟಿಯಿತ್ತು, ಅಲ್ಲಿ ತುಂಗಾ ತೀರದಲ್ಲಿ

ವಿಹರಿಸಿ ಕವಿಗಾದ ಆನಂದ – ಅನುಭೂತಿಗಳನ್ನು ನಮ್ಮದಾಗಿಸಿಕೊಳ್ಳಲು ಹೆಣಗಿದ್ದುಂಟು! ನವಿಲುಗುಡ್ಡದಿಂದ ಆರಿಸಿ ತಂದ ನವಿಲುಗರಿಗಳು ಈಗಲೂ ನನ್ನ ಬಳಿ ಇವೆ. ಹೂದಾನಿಯಲ್ಲಿ ಕುಳಿತಿರುವ ಆ ಗರಿಗಳು ಗಾಳಿಗೆ ಇಂತಿಷ್ಟೇ ಮೆಲ್ಲಗೆ ತೂಗಿ ನವಿಲುಗುಡ್ಡದ ನೆನಪಿಗೆ ಜೀವ ತುಂಬುವುದುಂಟು. 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂದರೆ ಬಹುಶಃ ಇದೇ ಇರಬೇಕು!

> **ನೂರು ದೇವರನೆಲ್ಲ ನೂಕಾಚೆ ದೂರ**
> **ಭಾರತಾಂಬೆಯೆ ದೇವಿ ನಮಗಿಂದು**
> **ಪೂಜಿಸುವ ಬಾರ!**

ದೇವರುಗಳ ವಿಷಯದಲ್ಲಿ ನಾನು ಭಾರಿ ಗೊಂದಲಕ್ಕೊಳಗಾದ ದಿನಗಳವು. ಆರ್ಯ ಸಮಾಜದ ಅನುಯಾಯಿಗಳಾಗಿದ್ದ ನನ್ನ ತಂದೆ ವಿಗ್ರಹಾರಾಧನೆಯ ವಿರೋಧಿಯಾಗಿದ್ದರು. ನಮ್ಮ ಮನೆಯಲ್ಲಿ ಯಾವ ದೇವರುಗಳ ವಿಗ್ರಹಗಳೂ ಇರಲಿಲ್ಲ. ಪೂಜೆಯೂ ಇಲ್ಲ. ಏನಿದ್ದರೂ ಧ್ಯಾನ–ಜಪ–ತಪ ಇತ್ಯಾದಿ. ನನ್ನ ಅಜ್ಜಿಯಂತೂ ರಮಣ–ಪರಮಹಂಸ–ವಿವೇಕಾನಂದ ಇವರುಗಳು ದೇವರಿಗಿಂತ ದೊಡ್ಡವರು ಎನ್ನುತ್ತಿದ್ದಳು. ಆಕೆ ಸಾಕಷ್ಟು ಸಾಧುಸಂತರನ್ನು ಭೇಟಿಮಾಡಿದ್ದು, ಪುಟಪರ್ತಿಯ ಸಾಯಿಬಾಬಾ ಬಗ್ಗೆ 'ಆತನಿಗೆ ಸಿದ್ಧಿಯಿದೆ, ಆದರೆ ಆತ ಯೋಗಿಯಲ್ಲ... ಪವಾಡಗಳಿಂದ ಏನೂ ಪ್ರಯೋಜನವಿಲ್ಲ... ಆತ್ಮ ಸಾಕ್ಷಾತ್ಕಾರ ಮುಖ್ಯ' ಎನ್ನುತ್ತಿದ್ದಳು. ಈ ಹಿನ್ನೆಲೆ ಇದ್ದಾಗ್ಯೂ ನಾನು ನಾಲ್ಕನೆಯ ಇಯತ್ತೆಯಲ್ಲಿದ್ದಾಗ ನನ್ನ ತಂದೆಯವರ ಗಮನಕ್ಕೆ ಬಾರದಂತೆ ರಾಮ, ಕೃಷ್ಣ, ಶಿವ, ಗಣಪತಿ, ಷಣ್ಮುಖ, ವೆಂಕಟರಮಣ, ಲಕ್ಷ್ಮೀ, ಸರಸ್ವತಿ, ಪಾರ್ವತಿ ಇತ್ಯಾದಿ ಕ್ಯಾಲೆಂಡರ್ ದೇವರುಗಳ ದಂಡನ್ನೇ ಕಲೆ ಹಾಕಿ ಅಡಿಗೆ ಮನೆಯ ಗೂಡಿನೊಳಗಿರಿಸಿದ್ದೆ. ನನ್ನ ತಂದೆ ಕೆಂಡಾಮಂಡಲವಾಗಿ ಕಾರ್ಯತಃ ಆ ದೇವ–ದೇವತೆಗಳನ್ನು ಮನೆಯಿಂದ ಹೊರಗೆ ನೂಕಿ, ನನ್ನನ್ನೂ ಹೊರಗೆ ನೂಕುವ ಎಚ್ಚರಿಕೆ ನೀಡಿದ್ದರು. ನಾನು ನನ್ನ ತಂದೆಯನ್ನು ಪರಮ ಪಾಪಿಯೆಂದು ಬೈದುಕೊಂಡು ನಮ್ಮ ಮನೆಯ 'ದೇವರಿಲ್ಲದ ಮನೆ' ಎಂದೂ, ಅದಕ್ಕೇ ನಮಗೆ ಬಡತನ–ಕಷ್ಟ–ಅನಾರೋಗ್ಯ ಇತ್ಯಾದಿಗಳು ಒದಗಿ ಬಂದಿವೆಯೆಂದೂ ನೊಂದುಕೊಂಡಿದ್ದೆ. ಬಗೆ ಹರಿಯದ ಸಮಸ್ಯೆಯಾಗಿ ನನ್ನನ್ನು ಕಾಡುತ್ತಿದ್ದ ಈ ದೇವರುಗಳ ಗೀಳು ಕುವೆಂಪುರವರ 'ನೂಕಾಚೆ ದೂರ' ಕವನದಿಂದ ತಾತ್ಕಾಲಿಕವಾಗಿ ಶಮನಗೊಂಡಿತ್ತು. ಕಾರಂತರ 'ನಮ್ಮ ಅಳತೆ ಮೀರದ ದೇವರು' ಕೂಡ ನನಗೆ ಹೊಸ ನೋಟ ನೀಡಿತ್ತು. ಇವತ್ತಿನವರೆಗೂ ಈ ದೇವರುಗಳ ಬಗ್ಗೆ ನಾನು ಸಂದೇಹವಾದಿಯೇ... ದೇವರುಗಳನ್ನು ಇಡುವುದು, ನೂಕುವುದು ನಿರಂತರವಾಗಿ ನಡೆದೇ ಇದೆ!

ಕುವೆಂಪುರವರ ಮಲೆಗಳಲ್ಲಿ ಮದುಮಗಳು ಹಾಗೂ ಕಾರಂತರು ಆ ಕಾಲದಲ್ಲೇ ಆಗಿದ್ದ ಅಂತರ್ಜಾತಿ ವಿವಾಹದ ಸಂಗತಿ, ನನ್ನನ್ನು ಜಾತಿಮೀರಿ, ಪ್ರೀತಿಸಿ ಸರಳವಾಗಿ ವಿವಾಹವಾಗಲು

ಪ್ರೇರೇಪಿಸಿತಷ್ಟೇ... ಮದುವೆಯ ನಂತರ ಸಾಹಿತ್ಯಾಸಕ್ತ ಗೆಳೆಯರ ಬಳಗ ವಿಸ್ತರಿಸಿ ಕುವೆಂಪುರವರನ್ನು ಭಿನ್ನ–ವಿಭಿನ್ನ ದೃಷ್ಟಿಕೋನದಿಂದ ನೋಡುವ ಅವಕಾಶವೂ ಲಭಿಸಿತು. ನಾಗಭೂಷಣರ ಕೆಲವು ಗೆಳೆಯರು ಒಮ್ಮೊಮ್ಮೆ ಅಸಂಗತವಾಗಿ ಕುವೆಂಪುರವರ ಕಾವ್ಯವನ್ನು ಬೇಂದ್ರೆಯವರ ಕಾವ್ಯಕ್ಕೆ ಹೋಲಿಸಿ ಗೇಲಿಮಾಡುವುದುಂಟು. ನನಗಾಗ ಶಿವಮೊಗ್ಗೆಯ ಸುತ್ತಮುತ್ತಲೂ ಇನ್ನು ದಯನೀಯ ಸ್ಥಿತಿಯಲ್ಲಾದರೂ ಉಳಿದುಕೊಂಡಿರುವ ನದಿ, ಬೆಟ್ಟ, ವನರಾಶಿ, ಪಕ್ಷಿಗೂ ಜನವನ್ನು ಗೇಲಿ ಮಾಡಿದಂತಾಗುತ್ತಿದೆ. ಕುವೆಂಪು ಕಂಡು ಬೆರಗಾದ, ಪ್ರೀತಿಸಿದ, ಆರಾಧಿಸಿದ ಕಾಡನ್ನು ಕಡಿದು ಹಾಕುತ್ತಿರುವ ಮನಸ್ಸಿನ ಒಂದು ಅಂಶವೇ ಕುವೆಂಪುರವರ ಕಾವ್ಯವನ್ನು ಗೇಲಿ ಮಾಡುವ ಮನಸ್ಸು ಎಂದೆನಿಸುತ್ತದೆ. ಕುವೆಂಪುರವರ ಸಾಹಿತ್ಯಲೋಕವನ್ನು ಪ್ರವೇಶಿಸಿದಾಗಲೆಲ್ಲ ನನಗೆ ಕಬೀರರ 'ದೋಹಾ' ವೊಂದು ಮತ್ತೆ ಮತ್ತೆ ನೆನಪಾಗುತ್ತದೆ:

**ಯಾರು ಬಹಳ ನಮ್ರವಾಗಿ ಕೆಳಕೆಳಗೆ ಇಳಿದರೋ**
**ಅವರೆಲ್ಲರೂ ಪಾರಾದರು.**
**ಉಚ್ಚ ಕುಲೀನರಾಗಿದ್ದು ಯಾರು ಅಭಿಮಾನದ ದೋಣಿ ಹತ್ತಿದರೋ**
**ಅವರು ಮುಳುಗಿದರು!**

ಕೊನೆಯದಾಗಿ–

ಕುವೆಂಪು ಯಾಕೆ ಹುಟ್ಟಿದರು? ಮಲೆಗಳಲ್ಲಿ ಮದುಮಗಳು ಬರೆಯಲಲ್ಲವೆ? ಹೌದು. ಆದರೇನು, ಮಲೆಗಳಲ್ಲಿ ಮದುಮಗಳು ಬರೆಯಲೆಂದೇ ಅವರು ಹುಟ್ಟಲಿಲ್ಲ – ಆದರೆ ಹುಟ್ಟಿದ ಮೇಲೆ ಮಲೆಗಳಲ್ಲಿ ಮದುಮಗಳು ಅವರಿಂದ ಬರೆಸಿಕೊಂಡಿತು, ಬೇರೆಯಲ್ಲ!

**ಸೃಷ್ಟಿಯೇಕೆ ಜನಿಸಿತು!**
**ಜನಿಸಿತು**
**ಕರ್ಮ ಸವೆಯಲಿಲ್ಲವೆ?**
**ಸವೆವುದು!**
**ಆದರೇನು**
**ಕರ್ಮ ಸವೆಯಲೆಂದು ಸೃಷ್ಟಿ**
**ಜನಿಸಲಿಲ್ಲ;**
**ಜನಿಸೆ ಕರ್ಮ ಸವೆವುದಷ್ಟೆ,**
**ಬೇರೆಯಲ್ಲ!**

ಮಲೆಗಳಲ್ಲಿ ಮದುಮಗಳು ಬಹುಶಃ, ಇಂದು ಮುಂದು, ಎಂದಿಗೂ ಇರುವ ಉತ್ಕೃಷ್ಟ ಕಾದಂಬರಿ. ನಾನು ರಾಮಾಯಣ, ಮಹಾಭಾರತಗಳಿಂದ ಏನು ಪಡೆದಿರುವೆನೋ ಅದನ್ನೇ ಮಲೆಗಳಲ್ಲಿ ಮದುಮಗಳು ಕಾದಂಬರಿಯಿಂದ ಪಡೆದಿರುವೆ. ಒಂದು ಚಿಕ್ಕ ಉದಾಹರಣೆಯ ಮೂಲಕ ಇದನ್ನು ವಿಷದ ಪಡಿಸುವುದಾದರೆ–

ಕಾದಂಬರಿಯಲ್ಲಿ ತಿಮ್ಮಿಯ ಪಲಾಯನಕ್ಕೆ ಸಂಬಂಧಿಸಿದ ವಿಚಾರಣೆಯ ನಂತರ ಇಜಾರದ ಸಾಬು ಸಣ್ಣ ಬೀರನಿಗೆ ಹುಣಿಸೆ ಬರಲಿನಿಂದ ಯಮಶಿಕ್ಷೆ ನೀಡುವ ಪ್ರಸಂಗವಿದೆ. ಸಣ್ಣ ಬೀರ ಶಿಕ್ಷೆಯಿಂದ ಪಾರಾಗಲು ರೋದಿಸುತ್ತಾ "ದಮ್ಮಯ್ಯ ಸಾಬ್ರೆ, ಹೊಡೀಬ್ಯಾಡಿ. ನಾ ಸಾಯ್ತೀನಿ. ನಿಮ್ಮ... ತಿನ್ತಿನಿ! ಅಪ್ಪಾ ಬಿಡಿಸೋ! ನಂಗೊತ್ತಿಲ್ಲೋ... ತಿಮ್ಮಿ ಎಲ್ಲಿ ಹೋದ್ಲು ಅಂತಾ, ಅಯ್ಯೋ, ಅಯ್ಯೋ, ಅಯ್ಯೋ" ಎಂದು ಒದ್ದಾಡಿ ಒರಲಿಕೊಂಡರೂ, ನೆತ್ತರು ಚಿಮ್ಮಿ ಅವನು ಉಟ್ಟಿದ್ದ ಪಂಚೆ ಒದ್ದೆಯಾಗಿ ಕಾಲ ಮೇಲೆ ಇಳಿದ ಉಚ್ಚೆಯಿಂದ ನೆಲ ತೊಯ್ದರೂ, ಅಂಡಿನ ರಕ್ತ ಬಟ್ಟೆ ರಕ್ತದಿಂದ ಕೆಂಪಾದರೂ, ಅವನ ತಂದೆ ದೊಡ್ಡಬೀರ ಅವನನ್ನು ಬಿಡಿಸಿಕೊಳ್ಳ ಶಕ್ತನಾಗುವುದಿಲ್ಲ. ಆಗ ಪ್ರತ್ಯಕ್ಷಳಾಗುವ ಅವನ ತಾಯಿ ಸೇಸಿ ಇಜಾರದ ಸಾಬಿಯ ಕೈಯಲ್ಲಿದ್ದ ಹುಣಿಸೆಯ ಬರಲನ್ನು ಕಸಿದೆಸೆದು ತಲೆ ಜೋಲುತ್ತಿದ್ದ ತನ್ನ ಮಗನನ್ನು ಎದೆಗಾನಿಸಿಕೊಳ್ಳುತ್ತಾಳೆ. ಆಗ,

> "ದಾಂಡಿಗನೂ ಬಲಿಷ್ಠನೂ ಕ್ರೂರಿಯೂ ಆಗಿ, ಇಂತಹ ಅನೇಕ ಧೂರ್ತಕರ್ಮಗಳಲ್ಲಿ ನುರಿತು ನಿಷ್ಣಾತನಾಗಿದ್ದ ಇಜಾರದ ಸಾಬಿಗೆ ಅದೇನಾಯಿತೋ ಏನೋ? ಇದ್ದಕ್ಕಿದ್ದಂತೆ ಸತ್ವಹೀನನಾದವನಂತೆ, ನಿರ್ಬಲನಾಗಿ... ಅವಳು ತಳ್ಳಿದೊಡನೆ ಒಂದಲ್ಲ ಎರಡು ಮಾರು ಹಿಂಜರಿದು ಸ್ತಂಭೀಭೂತನಾದಂತೆ ನಿಂತುಬಿಟ್ಟನು! ಹೊಲೆಯಳಾದರೂ, ಯಾವ ವಿಧವಾದ ವ್ಯಕ್ತಿತ್ವ ವಿಶೇಷವೂ ಲವಲೇಶವೂ ಇಲ್ಲದವಳಾದರೂ ಸಂಕಟತಪ್ತ ತಾಯ್ತನ ಎಂತಹ ಅಲ್ಪ ಸ್ತ್ರೀಯನ್ನಾದರೂ ಭೂಮಪಟ್ಟಕ್ಕೇರಿಸಿಬಿಡುತ್ತದೆಯೋ ಏನೋ ಎಂಬಂತೆ, ಅವಳ ಮಾತೃದುಃಖಜನ್ಯ ಕ್ರೋಧದ ಸಾನಿಧ್ಯಭೀಷಣೆಗೆ ಕ್ಷಣಮಾತ್ರ ಭೀತಚೇತಸನಾದನು. ಇಜಾರದ ಸಾಬಿ ಗೌಡರ ಆಜ್ಞೆಯನ್ನು ಮರೆತು ಸೇಸಿಯ ಮಾತಿಲ್ಲದ ಆಣತಿಗೆ ಒಳಗಾದವನಂತೆ ಚೇಗಬೇಗನೆ ಸಣ್ಣಬೀರನನ್ನು ಬಿಗಿದಿದ್ದ ಹಗ್ಗದ ಕಟ್ಟುಗಳನ್ನೆಲ್ಲ ಬಿಚ್ಚಿ ಹಾಕಿದನು."
>
> **(ಮಲೆಗಳಲ್ಲಿ ಮದುಮಗಳು – ಪುಟ ೩೨೬)**

ಅಸಹಾಯಕತೆ, ಆರ್ತತೆ, ಆರ್ದ್ರತೆ ಮುಪ್ಪುರಿಗೊಂಡು ಸಹೃದಯನಲ್ಲಿ ಮೇಲೆ ಸೂಚಿಸಿದ ಪ್ರಸಂಗ ಉದ್ದೀಪಿಸುವ ರಸಾವೇಶ, ಕಾಲ–ದೇಶ–ಸಂದರ್ಭ, ಸನ್ನಿವೇಶ ಬೇರೆ ಬೇರೆ ಆಗಿದ್ದಾಗ್ಯೂ – ಮಹಾಭಾರತದಲ್ಲಿ ದ್ರೌಪದಿ ಅಸಹಾಯಕಳಾಗಿ ಮಾನಸಂರಕ್ಷಣೆಗಾಗಿ ಕೃಷ್ಣನನ್ನು ನೆನೆವ, ರಾಮಾಯಣದಲ್ಲಿ ಅವಮಾನಿತಳಾದ ಸೀತೆ ಭೂ–ತಾಯಿಯನ್ನು ನೀನಾದರೂ ಬಾಯ್ದೆರೆದು ನನ್ನ ನುಂಗಬಾರದೆ ಎಂದು ಕೇಳಿಕೊಳ್ಳುವ, ಗೋವಿನ ಕತೆಯಲ್ಲಿ ಪುಣ್ಯಕೋಟಿ ಚಂಡವ್ಯಾಘ್ರನ ಬಳಿ ಒಂದು ದಿನದ ಮಟ್ಟಿಗೆ ಪ್ರಾಣಭಿಕ್ಷೆ ಬೇಡಿಕೊಳ್ಳುವಾಗಲಿನ ಆರ್ದ್ರತೆಯನ್ನು ನೆನಪಿಸುತ್ತದೆ. ಸೇಸಿ ದೈವವೇ ಆಗಿ ಅವತರಿಸಿ ಸಣ್ಣ ಬೀರನನ್ನು ಯಮಶಿಕ್ಷೆಯಿಂದ ಪಾರು ಮಾಡುತ್ತಾಳೆ.

ಮಿಲಿಯಗಟ್ಟಲೆ ವರುಷಗಳಿಂದ ಈ ನೀರು, ನೆಲ, ಆಕಾರ, ಪಶು, ಪಕ್ಷಿ, ಕ್ರಿಮಿ, ಕೀಟ, ಮನುಷ್ಯ – ಹೀಗೆ ಸಕಲ ಜಡ–ಚೇತನ ಸಂಕುಲವನ್ನು ಜತನದಿಂದ ಕಾಪಾಡಿಕೊಂಡು ಬರುತ್ತಿರುವ ಪ್ರಕೃತಿಯಲ್ಲಿ ಇಡಿಯಾಗಿ ಬೇರೂರಿರುವ 'ಪೊರೆಯುವ' ಈ ಅಂಶ ಬಿಡಿಯಾಗಿ, ಆದರೆ ಅದೇ ಕಾಲಕ್ಕೆ ಸಂಪೂರ್ಣವೂ ಆಗಿ ಸೇಸಿಯಲ್ಲಿ ಜಾಗೃತವಾಗುವ ಮೂಲಕ ಆಕೆ ಶಕ್ತಿಸ್ವರೂಪಿಣಿಯಾಗಿ ಸಣ್ಣ ಬೀರನನ್ನು ರಕ್ಷಿಸಲು ಸಾಧ್ಯವಾಯಿತೇನೋ ಎಂದೆನಿಸುತ್ತದೆ. ಸೇಸಿಯ ಅಂತಃಸತ್ವದ ಭೀಮ ಚೈತನ್ಯದ ಮುಂದೆ ಹುಲ್ಲು ಕಡ್ಡಿಯಂತೆ ನಿರ್ಬಲನಾಗುವ ಇಜಾರದ ಸಾಬಿಯ ಶರಣಾಗತಿ ಕೂಡ ಇದನ್ನು ಸಾಂಕೇತಿಕವಾಗಿ ಸೂಚಿಸುತ್ತದೆ.

ಶೃಂಗಾರ ರಸದಿಂದ (ಗುತ್ತಿಯೊಂದಿಗೆ ತಿಮ್ಮಿಯ ಪಲಾಯನ) ಚಲಿಸುವ ಈ ಪ್ರಸಂಗ 'ಕರುಣ' 'ರೌದ್ರ' 'ಭಯಾನಕ' 'ಭೀಭತ್ಸ' 'ವೀರ' ರಸಗಳಲ್ಲಿ ಸಂಚರಿಸಿ 'ಅದ್ಭುತ'ದಲ್ಲಿ ಒಂದು ಚಣ ವಿರಮಿಸಿ 'ಶಾಂತ'ವಾಗಿ ಕೊನೆಗೊಳ್ಳುವ ಬಗೆಯಂತು ಅನನ್ಯವಾಗಿದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯನ್ನು ಒಬ್ಬ ಬ್ರಾಹ್ಮಣನಾಗಿಯೋ, ಶೂದ್ರನಾಗಿಯೋ, ದಲಿತನಾಗಿಯೋ, ಪುರುಷನಾಗಿಯೋ, ಸ್ತ್ರೀಯಾಗಿಯೋ ಪ್ರವೇಶಿಸಲಾಗದು. ನಮ್ಮ ಅಲ್ಪ ಪ್ರಜ್ಞೆಯನ್ನು ಬದಿಗಿರಿಸಿ ವಿಶ್ವಮಾನವ ಪ್ರಜ್ಞೆಯಿಂದಲೇ ಏಕಕಾಲಕ್ಕೆ ಜಡವೂ, ಚೇತನವೂ ಆಗಿ – ಕಲ್ಲಿನೊಂದಿಗೆ ಕಲ್ಲಾಗಿ, ಮರದೊಂದಿಗೆ ಮರವಾಗಿ, ಕ್ರಿಮಿ, ಕೀಟ, ಪಶು, ಪಕ್ಷಿ, ಮನುಷ್ಯ, ದೈವವಾಗಿ – ಈ ಕಾದಂಬರಿಯನ್ನು ನಾವು ಪರಿಭಾವಿಸಬೇಕಾಗುತ್ತದೆ.

... ಅಂದ ಹಾಗೆ ನನಗೆ ಈಗಲೂ, ಯಾವಾಗಲೂ ನೆನಪಾಗುವುದು ಈ ಮರವೇ– ಆಕಾಶಮಲ್ಲಿಗೆಯ ಮರ. ಮುಗಿಲ ಮುಟ್ಟ ಬೆಳೆದು ನಿಂತಿರುವ ಹೆಮ್ಮರ. ಪಾತಾಳಕ್ಕೆ ಚಾಚಿರುವ ಅದರ ಬೇರುಗಳನ್ನು ನಾನು ನೋಡಿಲ್ಲ. ಅದರ ದಪ್ಪ ಕಾಂಡದೊಳಗೆ ಅಡಗಿರುವ ಅನುಭವ ಪ್ರಪಂಚದ ಅರಿವೂ ನನಗಿಲ್ಲ. ದಿಕ್ಕು ದಿಕ್ಕಿಗೆ ಚಾಚಿರುವ ಕೊಂಬೆಗಳನ್ನು ಮುಟ್ಟುವುದಂತೂ ಸಾಧ್ಯವೇ ಇಲ್ಲ. ಆದರೂ ಅದು ಚೆಲ್ಲುವ ಹೂಗಳನ್ನು ನಾನು ಆರಿಸಿದ್ದೇನೆ. ಅದರ ಪರಿಮಳವನ್ನು ಆಘ್ರಾಣಿಸಿದ್ದೇನೆ. ಅದರ ನೆರಳಿನಲ್ಲಿ ಒಂದು ಚಣವಾದರೂ ನಿಂತ ಸಂಭ್ರಮ ನನ್ನದಾಗಿದೆ.

(ಡಿ.ಎಸ್. ನಾಗಭೂಷಣ ಸಂಪಾದಿಸಿರುವ
'ಕುವೆಂಪು: ಒಂದು ಪುನರನ್ವೇಷಣೆ' ಸಂಪುಟಕ್ಕಾಗಿ
ಬರೆದ ಲೇಖನ – ೨೦೦೫)

# ಕೈಕಾಲು ಮೂಡುವುದು, ಜೀವ ಆಡುವುದು, ಯಾಕೆ ತಿಳಿಯದು

ನನಗಾಗ ಐದರ ಪ್ರಾಯ. ನನ್ನ ಅಜ್ಜಿಯ ಊರಾದ ಕಾರ್ಕಳದ ಮನೆಯ ಹಿತ್ತಿಲಿನಲ್ಲಿ ನನ್ನ ಗೆಳತಿಯೊಂದಿಗೆ ಸೇರಿಕೊಂಡು ಹಲಸಿನ ಮರದ ಬುಡದಲ್ಲಿ ತೂಗುತ್ತಿದ್ದ ಮಿಡಿಗಳನ್ನೆಲ್ಲಾ ಕಿತ್ತು ರಾಶಿ ಹಾಕಿ, ತರಕಾರಿ ಮಾರುವವಳ ಆಟ ಆಡುತ್ತಿದ್ದೆ. ಯಾಕೋ ಅಲ್ಲಿ ಬಂದ ನನ್ನ ತಾಯಿ ಒಂದು ಚಣ ಹೌಹಾರಿ ಏನೂ ಮಾಡಲಾಗದೆ ಅಪಾರ ಅಸಹಾಯಕತೆಯಿಂದ ಆ ಮಿಡಿಗಳ ರಾಶಿ ನೋಡಿ, ಮಿಡುಕಿ, ಮಿಡಿಗೊಂದರಂತೆ ಏಟನ್ನು ನನಗೆ ನೀಡಿದರು! ನಾನು ಅಳುತ್ತಾ "ನನಗೇನೂ ಈ ಮಿಡಿಗಳು ಬೇಕಾಗಿಲ್ಲ, ಬೇಕಾದರೆ ವಾಪಸ್ಸು ಮರಕ್ಕೇ ಅಂಟಿಸು" ಎಂದು ಅಮ್ಮನಿಗೆ ಹೇಳಿದ. ನನ್ನ ಮಾತಿನಿಂದ ಪಿತ್ತ ನೆತ್ತಿಗೇರಿ ನನ್ನ ತಾಯಿ ಮುಳ್ಳುಕಂಟಿಯಿಂದ ಮತ್ತೆ ನಾಲ್ಕು ಬಾರಿಸಿದರು. ಯಾವತ್ತೂ ನನ್ನ ನೆರವಿಗೆ ಬರುತ್ತಿದ್ದ ಅಜ್ಜಿಯೂ "ಸಮಾ ಆಯಿತು, ಹಾಕು ಇನ್ನೂ ನಾಲ್ಕು" ಎಂದು ಗುಟುರು ಹಾಕಿದರು. "ಒಂದೊಂದು ಮಿಡಿಯೂ ಎಷ್ಟು ದೊಡ್ಡದಾಗಿ, ಎಷ್ಟು ಸಿಹಿಯಾಗಿ, ಎಷ್ಟು ಜನ ಹಣ್ಣು ತಿನ್ನಬಹುದಿತ್ತು... ನಿನಗೇಕೆ ಈ ಕೆಟ್ಟ ಬುದ್ಧಿ ಬಂತು" ಎಂದು ಬಯ್ದರು. ನಾನು ಅದೆಷ್ಟೋ ಹೊತ್ತು ಅನಾಥವಾಗಿ ಬಿದ್ದಿದ್ದ ಹಲಸಿನ ಮಿಡಿಗಳ ಬಳಿ ಕುಳಿತು ಕಣ್ಣೀರು ಸುರಿಸುತ್ತಲೇ ಇದ್ದೆ. ಎತ್ತರದಲ್ಲಿ ತೂಗುತ್ತಿದ್ದ ದೊಡ್ಡ ದೊಡ್ಡ ಕಾಯಿಗಳನ್ನು ನೋಡುತ್ತಲೇ ನಾನು ಮಾಡಿದ್ದು ತಪ್ಪು ಎಂದೂ ಅನಿಸುತ್ತಿತ್ತು. ಈ ಗಲಾಟೆಯಲ್ಲಿ ನನ್ನ ಗೆಳತಿ ಅದ್ಯಾವಾಗಲೋ ಜಾಗ ಖಾಲಿ ಮಾಡಿದ್ದಳು. ಕತ್ತಲು ಕವಿದು, ಕೊನೆಗೆ ನನ್ನ ಅಜ್ಜಿ ಬಂದು ಕರೆದುಕೊಂಡು ಹೋಗುವ ತನಕ ಅಲ್ಲಿಯೇ ಕುಳಿತಿದ್ದೆ. ಒಂಟಿತನವನ್ನು ಜೀವನದಲ್ಲಿ ಮೊಟ್ಟಮೊದಲಿಗೆ ಎದುರುಗೊಳ್ಳುವಂತಾಗಿತ್ತು. ಎಲ್ಲರ ಸಿಟ್ಟು ಇಳಿದ ಮೇಲೆ, ಮೆಲ್ಲನೆ ಅಜ್ಜಿಯ ಕಿವಿಯಲ್ಲಿ ಪಿಸುಗುಟ್ಟಿದೆ. "ಅಲ್ಲ... ಅಷ್ಟು ದೊಡ್ಡ ಮರದಲ್ಲಿ ಅಷ್ಟು ಬುಡದಲ್ಲಿ... ನನ್ನ ಕೈಗೂ ಎಟಕುವಂತೆ ಮಿಡಿಗಳೇಕೆ ಬಿಡಬೇಕು? ನನಗೇನೋ ಬುದ್ಧಿಯಿಲ್ಲ, ನಾನು ಚಿಕ್ಕವಳು, ಮರಕ್ಕೆ ಬುದ್ಧಿ ಬೇಡವೇ? ಅಷ್ಟು ಎತ್ತರ ಬೆಳೆದಿದೆಯಲ್ಲ... ದಂಡಕ್ಕೆ..." ಎಂದೆ.

"ಸಾಕು ಮಾಡು ಕಾನೂನು, ಮಲಗು" ಎಂದರು ಅಮ್ಮ.

ಅಜ್ಜಿ ಏನೂ ಹೇಳದೆ ಸುಮ್ಮನೆ ಬೆನ್ನು ತಟ್ಟಿ ನಾಳೆ ರಾಮಫಲ ತಿನ್ನುವಿಯಂತೆ ಮಲಗಿಕೋ ಎಂದರು.

ಇವತ್ತಿಗೂ ನನಗೆ ಕೀಳುವುದೆಂದರೆ ಹಿಂಸೆ. ಹಣ್ಣು ಮರದಲ್ಲೇ ಇರಲಿ, ಹೂವು ಗಿಡದಲ್ಲೇ ಇರಲಿ ಎಂದು ಅನಿಸುವುದು.

ಆ ಮರ ಮಿಡಿ, ಕತ್ತಲು, ಒಂಟಿತನ, ಅಳು, ತಪ್ಪಿತಸ್ಥ ಭಾವನೆ ಇನ್ನೂ ನನ್ನಲ್ಲಿದೆ... ಇದೀಗ ಈಗಷ್ಟೇ ನಡೆದಿದೆ ಅನ್ನುವಂತೆ... ಯಾಕೆ??

* * *

ನನಗಾಗ ಆರು ವರುಷಗಳಿರಬಹುದು. ಶಿವಮೊಗ್ಗೆಯ, ಜಯನಗರದ ಬಾಡಿಗೆ ಮನೆಗೆ ಹೊಸದಾಗಿ ಬಂದಿದ್ದೆವು. ಪುಟ್ಟ ಹೆಂಚಿನ ಮನೆ. ಮನೆಯಲ್ಲಿ ಅಟ್ಟವಿತ್ತು. ಅದಕ್ಕೆ ಹೊಂದಿಕೊಂಡು ಮರದ ಏಣಿ. ಸುಲಭವಾಗಿ ಹತ್ತಬಹುದಿತ್ತು. ನಾನು ಹಿರಿಯರ ಕಣ್ಣುತಪ್ಪಿಸಿ ಅಟ್ಟ ಹತ್ತಿದೆ. ಅಟ್ಟದ ಮೇಲೆ ಪುಟ್ಟ ಕಿಟಕಿ. ಕಿಟಕಿಯಲ್ಲಿ ಕಣ್ಣುಹಾಕಿದೆ. ಘಮ್ಮೆನ್ನುವ ರಾತ್ರಿರಾಣಿ ಗಿಡ. ಅಬ್ಬಾ... ಎಷ್ಟು ಚಂದ, ಈ ಗಂಧ, ಸುಗಂಧ ಎಂದು ಪರಿಮಳ ಹೀರುತ್ತಾ ಧಡಧಡ ಇಳಿದು ಬಂದು, “ಅಜ್ಜಿ... ಕಿಟಕಿಯ ಬಳಿ ಚಂದದ ಗಿಡವಿದೆ. ಹೂವಿದೆ” ಅಂದೆ. ಅಜ್ಜಿ ಹೂವಿನ ವಾಸನೆ ಹಿಡಿದು “ರಾತ್ರಿ ರಾಣಿ” ಸರ್ಪದ ಕಾಟ ಇರಲಿಕ್ಕೂ ಸಾಕು ಅಂದರು. ಸರ್ಪದ ಹೆಸರು ಕೇಳಿ ನಾನು ನಡುಗಿದೆ. ನನ್ನ ಉತ್ಸಾಹ, ಆನಂದ ಜರ್ರೆಂದು ಅಟ್ಟದಿಂದ ಇಳಿದು ನೆಲಕ್ಕೆ ಬಿದ್ದಿತು.

ಆ ಅಟ್ಟ, ಆ ಹೂವು, ಆ ಗಂಧ, ಆ ಭಯ, ಆ ನಿರಾಶೆ ಇನ್ನೂ ನನ್ನಲ್ಲಿದೆ, ಯಾಕೆ?

* * *

ನನಗಾಗ ಎಂಟು ವರುಷಗಳಿರಬಹುದು. ನಾನು, ನನ್ನ ಗೆಳತಿ ಹೊಂಡದ ಮೀನುಗಳನ್ನು ಎಣಿಸುತ್ತಾ, ಕಬ್ಬು ಜಗಿಯುತ್ತಾ, ಶಿವಮೊಗ್ಗೆಯ ರೈಲ್ವೆ ಹಳಿಯ ಪಕ್ಕ ತಾಗಿದಂತೆ ಹರಿದುಹೋಗುತ್ತಿದ್ದ ಹಳ್ಳವನ್ನೇ ಅನುಸರಿಸುತ್ತಾ ಅದೆಷ್ಟೋ ದೂರ ಸಾಗಿದ್ದೆವು. ಒಂದು ಮೈಲು ಸವೆದಿರಬಹುದು. ತೋಟದ ಗುಂಡಿಯೊಂದರಲ್ಲಿ ನಾಲ್ಕಾರು ಜನ ಜಾಲಾಡುತ್ತಿದ್ದರು. ಕೊನೆಗೆ ಜುಟ್ಟು ಹಿಡಿದು ನಾಲ್ಕು ವರುಷದ ಮಗುವಿನ ಹೆಣ ಹೊರತೆಗೆದರು. ತೋಟದ ತುಂಬಾ ಮಗುವಿನ ತಾಯಿಯ ರೋದನ ಅನುರಣಿಸುತ್ತಿತ್ತು.

ರೈಲು, ಹಳ್ಳ, ಮೀನು, ಕಬ್ಬಿನ ಸಿಹಿ ಎಲ್ಲವನ್ನೂ ಆ ಅಳು ನುಂಗಿಹಾಕಿತ್ತು. ಅನಿರೀಕ್ಷಿತವಾಗಿ ಸಾವಿನ ಪರಿಚಯವಾಗಿತ್ತು.

ಆ ಹಳ್ಳಿ, ಆ ಮಗುವಿನ ಹೆಣ, ಆ ರೋದನ ಎಲ್ಲವೂ ಈಗಲೂ ನನ್ನಲ್ಲಿದೆ. ಯಾಕೆ?

* * *

ನನಗಾಗ ಹತ್ತು ವರುಷವಿರಬಹುದು. ನಾನೂ, ನನ್ನ ಅಕ್ಕನೂ ಶಿವಮೊಗ್ಗೆಯ ಸರ್ಕೀಟ್ ಹೌಸ್ ರಸ್ತೆಯಲ್ಲಿ ಸಾಲು ಮರಗಳಿಂದ ಅಂಟು ಕಿತ್ತು ಬಾಟಲು ತುಂಬಿಸುತ್ತಾ ಮುನ್ನಡೆದಿದ್ದೆವು. ಅಂಟು ಸಾಕಷ್ಟು ತೆಗೆದಾಗಿತ್ತು. ಮನೆಯ ದಾರಿ ದೂರವಿತ್ತು. ನನ್ನಕ್ಕ,

"ನಡೀ... ಹಗಲು ಕನಸು ಕಾಣುತ್ತಾ ಹೋಗುವ... ಮನೆ ತಲುಪಿದ ಮೇಲೆ ಪರಸ್ಪರ ಕನಸು ಹಂಚಿಕೊಳ್ಳುವ..." ಅಂದಳು. ಅವಳಿಗಾಗ ಹದಿನಾಲ್ಕು. ಕಂಡಾಪಟ್ಟೆ ಕಥೆ ಪುಸ್ತಕ ಓದುತ್ತಿದ್ದ ಅವಳು ಅದೇನು ಕಲ್ಪಿಸಿ ಹೇಳಿದಳೋ... ನಾನು ಬರಿದೇ ಹೂಂಗುಟ್ಟಿದೆ. ಹಗಲುಗನಸು ಎಂಬ ಪದವನ್ನು ಎದುರುಗೊಂಡಿದ್ದೇ... ಮೊದಲು. ಇಬ್ಬರೂ ಮಾತಿಲ್ಲದೆ ಮರಗಳನ್ನು ದಾಟಿಕೊಂಡು ಮನೆ ತಲುಪಿದೆವು. ಅವಳ ಕನಸಿನಲ್ಲಿ ತೋಟವಿತ್ತು. ಜೋಕಾಲಿಯಲ್ಲಿ ಜೀಕಿಕೊಂಡು ಬೂಂದಿ ತಿನ್ನುತ್ತಿದ್ದಳು. ಆನೆ, ಮೊಲ ಇತ್ಯಾದಿಗಳು ಕಾಣಿಸಿಕೊಂಡವು. ಬಗೆಬಗೆಯ ಹೂವುಗಳು, ಮೊದಲೇ ಹೇಳಿದ ಹಾಗೆ... ಹಗಲುಗನಸು ನನಗೆ ಹೊಸದು. ಕನಸು ಕಾಣಲಾಗಲಿಲ್ಲ ಎಂದರೆ ಅಭಿಮಾನಕ್ಕೆ ಪೆಟ್ಟು. ಅವಳ ಕನಸನ್ನೇ ಆಧರಿಸಿ ಬಣ್ಣ ಬಣ್ಣ ಕಟ್ಟಿ ನಾನೂ ರೀಲು ಬಿಟ್ಟೆ.

ಆ ಕನಸು, ಕಲ್ಪನೆ... ನೆನೆದರೆ ನಗು ಬರುವುದಾದರೂ ಈಗಲೂ ನನ್ನಲ್ಲಿದೆ, ಯಾಕೆ?

* * *

ನನಗಾಗ ಹತ್ತು ಹನ್ನೊಂದರ ಆಸುಪಾಸು. ನಾವು ನಾಲ್ವರು ಮಕ್ಕಳು. ಹೊಟ್ಟೆಗೂ ಬಟ್ಟೆಗೂ ಪರದಾಟ. ಮನೆವಾರ್ತೆ ತೂಗಿಸಲು ಅಮ್ಮ ಹೆಣಗುತ್ತಿದ್ದುದು ನನಗೆ ಅರ್ಥವಾಗುತ್ತಿತ್ತು. ತಮ್ಮ, ತಂಗಿ ಚಿಕ್ಕವರು ನಿರಾಳವಾಗಿರುತ್ತಿದ್ದರು. ನನಗೆ ಅರ್ಥವಾದರೂ ಏನೂ ಮಾಡಲಾಗದ ಅಸಹಾಯಕತೆ. ಕಳವಳ, ಅಭದ್ರತೆ ನಿವಾರಿಸಿಕೊಳ್ಳಲು ಪುಸ್ತಕಗಳನ್ನು ಅರಸಿಕೊಂಡು ಎರಡು–ಮೂರು ಮೈಲಿ ದೂರವಿದ್ದ ಗೆಳತಿಯ ಮನೆಗೆ ಹೋಗುತ್ತಿದ್ದೆ. ಆ ಗೆಳತಿ ಶ್ರೀಮಂತಳು, ವೈದ್ಯರ ಮಗಳು. ಆ ಬಂಗಲೆ, ಆ ಕಾರು, ನಾಯಿ, ತಟ್ಟೆಯಲ್ಲಿ ಜೋಡಿಸಿಟ್ಟ ಬಿಸ್ಕತ್ತುಗಳು, ಟೀ ಕೆಟಲ್, ಅವಳ ಮನೆಯ ಆಯಾ ಎಲ್ಲವೂ ನನಗೆ ಅಚ್ಚರಿಯ ಸಂಗತಿಗಳು. ಅವಳಿಗೆ ಪ್ರತ್ಯೇಕ ಕೊಠಡಿ ಬೇರೆ ಇತ್ತು. ಅಲ್ಲಿ ಕುಳಿತು ಪುಟ್ಟ ಕೆಂಚಮ್ಮ, ನಿದ್ರಾಸುಂದರಿ, ಸಿಂಡ್ರೆಲ್ಲಾ, ಪಿನೊಕಿಯೋ, ರಾಮು ಮತ್ತು ಅವರೆ ಗಿಡ ಮುಂತಾದ ಸಚಿತ್ರ ಮಾಲಿಕೆಗಳನ್ನು ಓದಿ ಮೈಮರೆಯುತ್ತಿದ್ದೆ.

ಕಷ್ಟವನ್ನು ದಾಟಬಹುದು ಎಂದು ಪುಟ್ಟಕೆಂಚಮ್ಮ, ಸಿಂಡ್ರೆಲ್ಲಾ... ಅಂದು ಭರವಸೆ ಮೂಡಿಸಿದರು.

ಅವರು ಈಗಲೂ ನನ್ನಲ್ಲಿದ್ದಾರೆ... ಯಾಕೆ?

* * *

ನನಗಾಗ ಹದಿನಾಲ್ಕರ ವಯಸ್ಸು. ಒಂದು ದಿನ ಶಾಲೆಯಿಂದ ಹಿಂದಿರುಗಿ ಬಂದಾಗ ಅಡಿಗೆ ಮನೆಯಲ್ಲಿ ಮೌನವಾಗಿ ಕೂತು ಉಣ್ಣುತ್ತಿದ್ದ ಹೆಂಗಸೊಬ್ಬಳನ್ನು ನೋಡಿದೆ. ಆಕೆ ದೂರದ ಸಂಬಂಧಿ ಎಂದು ಗೊತ್ತಾದ ಮೇಲೆ ತಿಳಿಯಿತು, ಒಂದು ಕಾಲದಲ್ಲಿ ೫೦೦ ಮುಡಿ ಅಕ್ಕಿ ಗೇಣಿ ಪಡೆಯುತ್ತಿದ್ದವಳೆಂದೂ ಈಗ ಒಂದು ಹಿಡಿ ಅನ್ನಕ್ಕೂ ಗತಿಯಿಲ್ಲವೆಂದೂ ಅಜ್ಜಿ ಅವಳ ಕರುಣಕಥೆ ಹೇಳಿದರು. ಒಂದು ವಾರ ಹೇಗೋ ಹೊಂದಿಸಿ ಒಂದು ಹೊತ್ತು

ಅವಳಿಗೆ ಊಟ ಹಾಕುವುದಕ್ಕೆ ಅಜ್ಜಿ–ಅಮ್ಮನ ನಡುವೆ ಒಪ್ಪಂದವಾಯಿತು. ಅಜ್ಜಿ, ಅಮ್ಮ ಅವರ ಊಟದ ಪಾಲಿನಲ್ಲಿ ಎರಡು ತುತ್ತು ತ್ಯಾಗ ಮಾಡಿರಲಿಕ್ಕೂ ಸಾಕು!

ಶ್ರೀಮಂತರಿಗೆ ಕಷ್ಟ ಬರಬಾರದು! ಹೇಗಿದ್ದವಳು ಹೇಗಾದಳು?! ಒಂದು ಹಿಡಿ ಅನ್ನಕ್ಕಾಗಿ ನಮ್ಮ ಮನೆಯ ಬಾಗಿಲಿಗೆ ಬರುವಂತಾಯಿತೇ? ಎಂದು ಅಜ್ಜಿ–ಅಮ್ಮ ಆಕೆಗಾಗಿ ದುಃಖಿಸುತ್ತಿದ್ದರು.

ಆ ಹೆಂಗಸಿನ ಆ ನಿರ್ಭಾವ ಮುಖ ಇವತ್ತಿಗೂ ನನ್ನಲ್ಲಿದೆ ಯಾಕೆ?

* * *

ನನಗಾಗ ಹದಿನೆಂಟರ ವಯಸ್ಸು. ಅದೇ ತಾನೆ ಕೆಲಸಕ್ಕೆ ಸೇರಿದ್ದೆ. ಒಂದು ದಿನ ಬೆಳಿಗ್ಗೆ ಕೌಂಟರಿನಲ್ಲಿ ಕುಳಿತು ಕೆಲಸ ನಿರ್ವಹಿಸುತ್ತಿದ್ದಾಗ ಪುಟ್ಟ ಹುಡುಗನೊಬ್ಬ ಬಂದು ಕೆಂಪು ಗುಲಾಬಿ ನೀಡಿದ. ಮಾರನೆಯ ದಿನ ದಾಳಿಂಬೆ ಹಣ್ಣು. ಅದರ ಮಾರನೆಯ ದಿನ 'ಈದ್'ಗೆ ಮನೆಗೆ ಬರಬೇಕೆಂಬ ಆಹ್ವಾನ. ಮರುದಿನ ಅಂಚೆಯಲ್ಲಿ ಪತ್ರ. ಆ ಪುಟ್ಟ ಹುಡುಗನ ಹಿಂದೊಬ್ಬ ದೊಡ್ಡ ಹುಡುಗನಿದ್ದ... ಆ ಮುಸ್ಲಿಂ ಹುಡುಗ ಅಚ್ಚಕನ್ನಡದಲ್ಲಿ ಬರೆದಿದ್ದ. ಆ ಪತ್ರದಲ್ಲಿ ಬಂಗಡೆ ಮೀನು, ಗುಳ್ಳ, ಸಮುದ್ರದ ಹಿನ್ನೀರು, ಅವನ ಅಕ್ಕತಂಗಿಯರ ವಿವರ! ನಾನು ಎಚ್ಚೆತ್ತುಕೊಂಡೆ. ಎಲ್ಲಾದರೂ ಈ ಸುದ್ದಿ ಸೋರಿ ಅವನಿಗೆ ದಂಡನೆಯಾದರೇನು ಗತಿ ಎಂದು ಆಲೋಚಿಸಿ "ನನಗೆ ಪತ್ರ ಬರೆಯಬೇಡ, ಒಳ್ಳೆಯ ಕೆಲಸ ಹಿಡಿದು ಸುಖವಾಗಿ ಬಾಳು, ನನಗೆ ಮದುವೆ ಗೊತ್ತಾಗಿದೆ" ಎಂದು ಸುಳ್ಳು ಸುಳ್ಳೆ ಬರೆದೆ. ಎರಡು ವರುಷ ಕಳೆದ ಮೇಲೆ ದುಬಾಯ್‌ನಿಂದ ಪತ್ರ ಬಂತು. ಅವನಿಗಲ್ಲಿ ಕೆಲಸ ಸಿಕ್ಕಿತ್ತು. ಒಮ್ಮೆ ಪಾರ್ಸಲ್ ಕೂಡ ಕಳಿಸಿದ್ದ. ಹೇರುಪಿನ್ನುಗಳು, ಸೆಂಟು, ನೈಲ್‌ಕಟರ್, ನೈಲ್ ಪಾಲಿಷ್ ಇದ್ದವು. ಅವನ ಪೆದ್ದು–ಮುಗ್ಧ ಪ್ರೇಮಕ್ಕೆ ನಾನು ವಿವಶಳಾಗಿದ್ದು ನಿಜ. ಅವನಲ್ಲಿ ಪ್ರೇಮಭಾವ ಹುಟ್ಟಿಸಿದ್ದಕ್ಕೆ... ನನ್ನ ಮೇಲೆ ನನಗೆ ಸಿಟ್ಟು ಬಂದು ಅವನಲ್ಲಿ ಕ್ಷಮೆಯ ಯಾಚಿಸಬೇಕು ಎಂದೆನಿಸಿದ್ದೂ ಉಂಟು.

ಆ ಹುಡುಗನ ನೆನಪು ಈಗಲೂ ನನ್ನಲ್ಲಿದೆ... ಯಾಕೆ?

* * *

ನನಗಾಗ ಮೂವತ್ತರ ವಯಸ್ಸು. 'ಬೆಳ್ಳಿ' ತೀರಿಕೊಂಡಳು ಎಂದು ಸುದ್ದಿ ಬಂತು. ಹೆರಿಗೆ ಮಾಡಿಸಿ, ಮೂರು–ನಾಲ್ಕು ತಿಂಗಳು ಅಲ್ಲಿಯೇ ಇದ್ದು ಬಾಣಂತಿ–ಮಗುವನ್ನು ಉಪಚರಿಸಿ ನಂತರ ಮತ್ತೊಂದು ಹೆರಿಗೆ ಮನೆ ಹುಡುಕಿಕೊಂಡು ಹೋಗುವುದನ್ನೇ ಕಾಯಕ ಮಾಡಿಕೊಂಡು ಅದರಲ್ಲೇ ಜೀವ ತೇದ ಆ ಮುದುಕಿ, ಇಳಿಗಾಲದಲ್ಲಿ ಯಾರೂ ಇಲ್ಲದೆ ನೊಂದು–ಬೆಂದು ಕೆರೆಗೆ ಹಾರಿ ಆತ್ಮಹತ್ಯೆ ಮಾಡಿಕೊಂಡಿದ್ದಳು. ನೂರು ಮಕ್ಕಳನ್ನು ಜಗತ್ತಿಗೆ ಪರಿಚಯಿಸಿದ ಮಹಾಮಾಯಿಗೆ ಒಂದು ಹಿಡಿ ಕೂಳು, ಒಂದು ಚೂರು ಸೂರು ಸಿಗಲಿಲ್ಲವೆಂದರೆ... ಬದುಕಿನ ಈ ವೈರುಧ್ಯವನ್ನು ಹೇಗೆ ವಿಶ್ಲೇಷಿಸುವುದು?

ಅವಳು ಈಗಲೂ ನನ್ನಲ್ಲಿದ್ದಾಳೆ. ಯಾಕೆ?

ನನಗೀಗ ನಲವತ್ತು... ಬಮಿಯಾನಿನ ಬೆಟ್ಟದಲ್ಲಿ ನಿಂತಿದ್ದ ಜಗತ್ತಿನ ಅತಿ ಎತ್ತರದ ಬುದ್ಧ ನೆಲಕ್ಕುರುಳಿದ ದಿನ ಮನಸ್ಸಿಗೆ ಮಂಕು ಕವಿಯಿತು. ಕಾರುಣ್ಯಮೂರ್ತಿಗೆ ಎಂಥಾ ಕೊನೆ?

ಯಾವುದೋ ದೇಶದಲ್ಲಿ ಯಾವುದೋ ಬೆಟ್ಟದಲ್ಲಿ... ಶಿಥಿಲವಾಗಿದ್ದ ಕಲ್ಲಿನ ಮೂರ್ತಿಯೊಂದು ಉರುಳಿದರೆ ನಾನೇಕೆ ಘಾಸಿಗೊಳ್ಳಬೇಕು?

ಈಗಲೂ ಆ ಬೆಟ್ಟ, ಆ ಬುದ್ಧ ನನ್ನಲ್ಲಿದ್ದಾನೆ ಯಾಕೆ?

* * *

ಇದೀಗ ನಲವತ್ತೈದರ ಹೊಸಿಲಲ್ಲಿ ನಿಂತು ನೋಡುತ್ತಿರುವೆ; ಇಷ್ಟೂ ದಿನ ಅನ್ನ ಉಣಿಸಿದ ರೈತ ಹತ್ತೋ ಇಪ್ಪತ್ತೋ ಸಾವಿರ ಸಾಲ ತೀರಿಸಲಾಗದೆ ಪ್ರತಿದಿನ ಎಂಬಂತೆ ಸಾವಿಗೆ ಶರಣಾಗುತ್ತರುವುದನ್ನೂ... ಅಧಿಕಾರಕ್ಕಾಗಿ ಮೋಸ, ಮೋಸದಿಂದ ಮತ್ತೆ ಅಧಿಕಾರ ಎಂಬ ನಾಟಕದಲ್ಲಿ ನಿರಂತರವಾಗಿ ನಮ್ಮ ರಾಜಕಾರಣಿಗಳು ಪಾತ್ರಧಾರಿಗಳಾಗಿ ನಟಿಸುತ್ತಿರುವುದನ್ನೂ... ಆ ನಾಟಕವನ್ನು ಮೌನದಿಂದ ವೀಕ್ಷಿಸುತ್ತಿರುವ ಪ್ರೇಕ್ಷಕ ವೃಂದದಲ್ಲಿ... ಹೌದು ಅದು ನಾನೇ... ಒಂದು ಕ್ಷಣ ಬದುಕಿದ್ದರೂ ಸತ್ತಂತೆ ಅನಿಸುವುದು ಯಾಕೆ?

ಹಲಸಿನ ಮಿಡಿ ಕಿತ್ತುಹಾಕಿದ್ದು ನಿನ್ನೆ ನಿನ್ನೆ ನಡೆದಂತಿದೆ... ಏನಿತ್ತೋ ಏನಿಲ್ಲವೋ... ಯಾವುದರ ಬಗ್ಗೆಯೂ ತಲೆಕೆಡಿಸಿಕೊಳ್ಳದೆ ಇದ್ದುದರಲ್ಲೇ ಕಾಲು ಚಾಚಿ ಗಾಢ ನಿದ್ರೆಗೆ ಸಂದುಹೋಗುತ್ತಿದ್ದೇವಲ್ಲಾ... ಬಣ್ಣ ಬಣ್ಣದ ಕನಸುಗಳು ಬೀಳುತ್ತಿದ್ದವಲ್ಲಾ...

ಎಲ್ಲಾ ಎಷ್ಟು ಬೇಗ ಬದಲಾಗಿದೆ... ಕ್ಷಣ ಕ್ಷಣಕ್ಕೂ ಬದಲಾಗುತ್ತಿದೆ...

ಎಲ್ಲೆಲ್ಲೂ ಗಾಜಿನ ಮನೆಗಳು ಅಣಕಿಸುತ್ತಿವೆ...

ನೋಯಿಸುವವರು, ಬೇಯಿಸುವವರು ಆಗಲೂ ಇದ್ದರು. ನಾವು ಮುಯ್ಯಿ ತೀರಿಸುವುದರಲ್ಲಿ ಕಡಿಮೆಯೇನೂ ಇರಲಿಲ್ಲ. ತಾಳು... ದೇವರು ನೋಡಿಕೊಳ್ಳುತ್ತಾನೆ ಎಂದು ತಪ್ಪು ಸರಿಗಳನ್ನು ದೇವರಿಗೆ ಒಪ್ಪಿಸಿ ಹಗುರಾಗುತ್ತಿದ್ದೆವು...

ಹೀಗೆ ಸಣ್ಣ ಸಣ್ಣ ಸಂಗತಿಗಳು... ಕಸ, ಕಡ್ಡಿ, ಎಲೆ, ಹೂವು, ಕೊಂಬೆ, ರೆಂಬೆಗಳಂತೆ ಜೀವನ ಪ್ರವಾಹದಲ್ಲಿ ತೇಲಿ ತೇಲಿ ಹೋಗುವುದು. ಮನಃಪಟಲದ ಮೇಲೆ ಮೂಡುವ ನೂರಾರು ಚಿತ್ರ–ವಿಚಿತ್ರಗಳಲ್ಲಿ ಯಾವುದೋ ಒಂದು ಬೇರ್ಪಡಿಸಲಾಗದಂತೆ ಭಿತ್ತಿಗೆ ಅಂಟಿಕೊಳ್ಳುವುದು. ಅದಕ್ಕೆ ಕೈಕಾಲು ಮೂಡುವುದು, ಜೀವ ಆಡುವುದು, ಯಾಕೆ? ಯಾಕೆ ಆಡುವುದೋ... ತಿಳಿಯದು.

(ಹಂಪಿ ಕನ್ನಡ ವಿಶ್ವವಿದ್ಯಾಲಯದ 'ಕನ್ನಡ ಅಧ್ಯಯನ' ವಿಶೇಷ ಸಂಚಿಕೆಗಾಗಿ
ಬರೆದ ಲೇಖನ – ೨೦೦೧. ಇದು 'ಸಂಚಯ'ದ
ಮಾರ್ಚ್ ೨೦೦೭ರ ಸಂಚಿಕೆಯಲ್ಲೂ ಪ್ರಕಟವಾಗಿದೆ.)

●

# ಯಾವ ಜನ್ಮದ ಮೈತ್ರಿ...

ಮಾರಿ ಕಣ್ಣಿಗೆ ಮರುಳರಾಗಿ
ನೆಚ್ಚಿ ಮೆಚ್ಚಿ ಕೂಡಿದ್ದೇವ
ಬೇರೆ ಇಲ್ಲಾ! ಇದ್ದರೆ
ಶಿವನೆ ಬಲ್ಲಾ.

ಬಹುಶಃ ಬೇಂದ್ರೆಯವರು ನಮ್ಮಂಥವರನ್ನೇ ನೋಡಿ ಪದ್ಯ ಬರೆದಿರಬೇಕು ಎಂದು ಎಷ್ಟೋ ಬಾರಿ ನಾನು ಯೋಚಿಸಿದ್ದುಂಟು! ನನ್ನ ಅನೇಕ ಗೆಳೆಯ-ಗೆಳತಿಯರು ನಿಮ್ಮಿಬ್ಬರದು ಹೇಗೆ ಮದುವೆಯಾಯಿತು ಎಂದು ಕೇಳಿದಾಗೆಲ್ಲ ಹೀಗೆ... ಆಯಿತು ಹೇಗೊ ಆಯಿತು ಎಂದು ಅರ್ಥಂಬರ್ಥ ವಿಷಯ ತಿಳಿಸಿ ನಾನು ಜಾರಿಕೊಂಡದ್ದುಂಟು. ಆದರೆ ಇವೀಗ ಇದ್ದದ್ದನ್ನು ಇದ್ದ ಹಾಗೆಯೆ ಹೇಳಲೇಬೇಕಾಗಿದೆ. ಇದೀಗ ನಾವು ಮದುವೆಯಾಗಿ ಹನ್ನೆರಡು ವರುಷಗಳೇ ಕಳೆದು ಹೋಗಿರುವುದರಿಂದ ಹೇಳಿಕೊಳ್ಳಲು ಲಜ್ಜೆ, ಭಯ, ಸಂಕೋಚವೇನೂ ಇಲ್ಲ, ಬದಲು ಹಳೆಯದನ್ನು ಮೆಲುಕು ಹಾಕಲು ಸಂತೋಷವೇ ಆಗುತ್ತಿದೆ. ದುಃಖದ ಸಂಗತಿಯೆಂದರೆ ಸಂಪಾದಕರು ಪುಟಗಳ ಮಿತಿಯೊಡ್ಡಿರುವುದು!

ನಾನು ಹುಟ್ಟಿ ಬೆಳೆದದ್ದು ಶಿವಮೊಗ್ಗೆಯಲ್ಲಿ. ನಂಬುತ್ತೀರೊ ಇಲ್ಲವೊ ಶಿವಮೊಗ್ಗೆಯ ನೀರು-ನೆಲ-ಗಾಳಿಗೇ ವಿಚಿತ್ರವಾದ ಶಕ್ತಿಯಿದೆ. ಆ ಶಕ್ತಿ ಯಾವ ಸ್ವರೂಪದ್ದು ಎಂದು ವಿವರಿಸುವುದು ಅಸಾಧ್ಯ. ಅದನ್ನು ಆ ಊರಿನಲ್ಲಿಯೇ ಇದ್ದು ಅನುಭವಿಸಿದ ಮೇಲಷ್ಟೇ ತಿಳಿಯುವಂತಾಗಿದ್ದು. ನನ್ನದು ಕೆಳ ಮಧ್ಯಮ ವರ್ಗದ ಕುಟುಂಬ. ನನ್ನ ಮನೆ ಮಾತು ಕೊಂಕಣಿ. ನನ್ನ ತಂದೆ ಅಂಚೆ ಇಲಾಖೆಯಲ್ಲಿ ಕಾರಕೂನ. ಹಾಗಾಗಿ ಹೊಟ್ಟೆ-ಬಟ್ಟೆಗಿತ್ತು, ಅದಕ್ಕಿಂತ ಹೆಚ್ಚಿಲ್ಲ. ಜಾತಿಯಿಂದ ಗೌಡ ಸಾರಸ್ವತಳಾದರೂ, ಹತ್ತಿರದ ಬಂಧುಗಳೊಂದಿಗೆ ಬಿಟ್ಟರೆ ಇತರೆ ಕೊಂಕಣಿಗರ ಜತೆ ಬೆರೆಯುತ್ತಿದ್ದದ್ದು ಕಡಿಮೆ. ಶಿವಮೊಗ್ಗೆಯ ಜಯನಗರ-ಬಸವನಗುಡಿಯಲ್ಲಿ ನಮ್ಮ ವಾಸ್ತವ್ಯವಾದ್ದರಿಂದ, ಹೆಚ್ಚು ಕಮ್ಮಿ ಬ್ರಾಹ್ಮಣ, ಲಿಂಗಾಯತ, ಗೌಡ ಸಮುದಾಯಗಳ ನಡುವೆ ನನ್ನ ಬಾಲ್ಯ ಹಾಗೂ ಯೌವ್ವನ.

ನನ್ನ ಅಜ್ಜಿ ಅವಳ ಕಾಲಕ್ಕೆ ಎರಡನೆಯ ಇಯತ್ತೆ ಕಲಿತವಳು. ಕನ್ನಡ, ಹಿಂದಿ ಓದಲು, ಬರೆಯಲು ಬಲ್ಲವಳು. ಅವಳ ಪ್ರಭಾವಳಿಯ ಅಡಿಯಲ್ಲೇ ಹೆಚ್ಚು ಕಮ್ಮಿ ನನ್ನ ಜೀವನ. ಅವಳ ಮಾತುಕತೆಯೇನಿದ್ದರೂ ಪರಮಹಂಸ, ರಮಣ ಮಹರ್ಷಿ, ವಿವೇಕಾನಂದ, ಧ್ಯಾನ,

ಜಪ–ತಪ ಇತ್ಯಾದಿ. ಆದರೆ ಲೌಕಿಕದೊಳಗೆ ಪ್ರವೇಶಿಸಿದಳೆಂದರೆ ಹರಟೆಯಲ್ಲಿ ಅವಳನ್ನು ಮೀರಿಸುವವರಿಲ್ಲ. ನನ್ನ ತಾಯಿಗೆ ಮಾತು ಕಮ್ಮಿ. ಹಾಗಾಗಿ ನನ್ನ ದೊಡ್ಡಮ್ಮನ (ತಂದೆಯ ಅಣ್ಣನ ಹೆಂಡತಿ) ಪ್ರವೇಶವಾಯಿತೆಂದರೆ ನಮಗೆ ರುಚಿಕಟ್ಟಾದ ಮಾತಿನ ಭೋಜನ. ಆ ಮತುಕತೆಗಳೇನಿದ್ದರೂ ನನ್ನ ಅಜ್ಜಿ ತೊರೆದು ಬಂದ ಊರಿನ ಸುದ್ದಿ, ಮದುವೆ–ಮುಂಜಿ–ಬಾಣಂತನ–ಹುಟ್ಟು–ಸಾವು–ನೋವು– ಇತ್ಯಾದಿ ಕುರಿತದ್ದು. ಮದುವೆಯ ಸುದ್ದಿ ಬಂದಾಗೆಲ್ಲ ಮೊದಲ ಪ್ರಶ್ನೆಯೆಂದರೆ: ಎಷ್ಟಂತೆ ವರದಕ್ಷಿಣೆ? ಎಷ್ಟಂತೆ ಚಿನ್ನ? (ಅದೂ ಲಕ್ಷಗಳಲ್ಲಿ–ಪವನುಗಳಲ್ಲಿ) ಆಮೇಲೆ ಪ್ರಸ್ತಾಪವಾಗುತ್ತಿದ್ದದ್ದು ಹುಡುಗನದ್ದೋ ಹುಡುಗಿಯದ್ದೋ ಬಣ್ಣ. ಒಂದರ್ಥದಲ್ಲಿ ಹಿಂದೆಯೂ–ಇಂದಿಗೂ ನನ್ನ ಸಮುದಾಯದ ಜನರಲ್ಲಿ ಹೆಚ್ಚು ಮಾನ್ಯತೆ ಪಡೆದಿರುವುದು ಚಿನ್ನ ಮತ್ತು ಬಣ್ಣ.

ನನ್ನ ತಂದೆ ತಾಯಿಯ ಬಂಧುಗಳು ಹೆಚ್ಚು ಕಡಿಮೆ ಎಲ್ಲರೂ ವ್ಯಾಪಾರಸ್ಥರಾಗಿದ್ದರಿಂದ ಅನುಕೂಲವಾಗಿಯೇ ಇದ್ದರು. ನನ್ನ ತಂದೆ ಸರ್ಕಾರಿ ನೌಕರಿಯಲ್ಲಿದ್ದದ್ದರಿಂದ ಹಾಗೂ ನಾವು ನಾಲ್ವರು ಮಕ್ಕಳಾದ್ದರಿಂದ ಒಂದು ರೀತಿಯಲ್ಲಿ ಸಂಕಷ್ಟದ ಸ್ಥಿತಿಯಲ್ಲೇ ಇದ್ದೆವು ಎಂದು ಹೇಳಬೇಕು. ಬಡತನದ ಕಾರಣ ಅನೇಕ ಬಾರಿ ಬಂಧುಗಳ ಸಮ್ಮುಖದಲ್ಲಿ ಅವಮಾನಿತರಾಗುತ್ತಿದ್ದೆವು. ಆದರೆ ಬೇರೆ ದಾರಿಯಿಲ್ಲದೆ ಅಂತಹವುಗಳನ್ನು ನುಂಗಿಕೊಳ್ಳಬೇಕಾಗುತ್ತಿತ್ತು. ಹೀಗಾಗಿ ಬಂಧುಗಳ ಮಾತುಕತೆಗಳ ನಡುವೆ ಮದುವೆಯ, ವರದಕ್ಷಿಣೆಯ ಪ್ರಸ್ತಾಪವಾದಾಗ ನನಗೆ ಅಸಹನೀಯ ವೇದನೆಯಾಗುತ್ತಿತ್ತು. ನನ್ನ ತಂದೆಗೆ ಇದನ್ನೆಲ್ಲ ಭರಿಸುವ ಶಕ್ತಿಯಿಲ್ಲವಲ್ಲ... ಅವರನ್ನು ಈ ಹೊರೆಯಿಂದ ಹೇಗೆ ಮುಕ್ತಗೊಳಿಸುವುದು ಎಂದು ಮನಸ್ಸು ಆತಂಕಗೊಳ್ಳುತ್ತಿತ್ತು. ಈ ಕಾರಣದಿಂದಲೇ ಕೇವಲ ಚಿನ್ನ ಮತ್ತು ಬಣ್ಣಕ್ಕೆ ಬೆಲೆ ಕೊಡುವ ನನ್ನ ಸಮುದಾಯದ ಬಗ್ಗೆ ನನ್ನಲ್ಲಿ ತಿರಸ್ಕಾರ ಮೂಡತೊಡಗಿತ್ತು. ಅದರ ಪರಿಣಾಮ ನನಗೆ ಬುದ್ಧಿ ತಿಳಿದಾಗಿನಿಂದ (ಸರಿಸುಮಾರು ಎಂಟನೆಯ ಇಯತ್ತೆಯಿಂದ) ನಾನು ನನ್ನ ಜಾತಿಯವರ ಮದುವೆಗೆ ಹೋಗುವುದನ್ನೇ ನಿಲ್ಲಿಸಿದೆ. ನನಗೆ ನೆನಪಿರುವ ಹಾಗೆ ನನ್ನ ಅಕ್ಕಂದಿರ ಮದುವೆ (ದೊಡ್ಡಮ್ಮನ ಮಕ್ಕಳು) ಬಿಟ್ಟರೆ, ನನ್ನ ಜಾತಿಬಾಂಧವರ ಯಾವುದೇ ಮದುವೆ–ಮುಂಜಿಯಲ್ಲಿ ನಾನು ಭಾಗವಹಿಸಲಿಲ್ಲ.

ನಾನಿನ್ನೂ ಮದುವೆಯ ವಯಸ್ಸು ಮುಟ್ಟದಿದ್ದರೂ (ನನಗಾಗ ಹದಿನೈದು–ಹದಿನಾರು) ಬಂಧುಗಳು ಮಾತನಾಡಿಕೊಳ್ಳುವಾಗ 'ನಿನ್ನಪ್ಪ ನಿನ್ನ ಮದುವೆ ಮಾಡಿದಂತೆಯೆ' ಎಂದು ವ್ಯಂಗ್ಯದಿಂದ ಆಡಿಕೊಳ್ಳುತ್ತಿದ್ದದ್ದುಂಟು ಹಾಗೂ ನನ್ನ ತಾಯಿಗೆ ಈಗಿನಿಂದಲೇ ಮಗಳಿಗೆ ವರದಕ್ಷಿಣೆ ಕೂಡಿಡಲು ಶುರು ಮಾಡಿ ಎನ್ನುತ್ತಿದ್ದದ್ದುಂಟು. ಈ ಉಪದೇಶದ ಹಿಂದಣ ಕುಹಕ-ವ್ಯಂಗ್ಯ ಅರಿತವಳಾಗಿ ಆಗಲೇ ಆ ವಯಸ್ಸಿನಲ್ಲಿಯೇ ಒಂದು ನಿರ್ಧಾರಕ್ಕೆ ಬಂದುಬಿಟ್ಟಿದ್ದೆ. ಅದೇನೆಂದರೆ, ಏನೇ ಆಗಲಿ ವರದಕ್ಷಿಣೆ ಬೇಡುವವರನ್ನು ಮದುವೆಯಾಗಲಾರೆ ಎಂದು. ಅದಕ್ಕೂ ಕಾರಣವಿತ್ತು. ನನ್ನ ನೆರೆಹೊರೆಯಲ್ಲೇ ಹವ್ಯಕ ಬ್ರಾಹ್ಮಣ ಹುಡುಗಿಯೊಬ್ಬಳ ನಿರಾಡಂಬರ ಮದುವೆಯನ್ನು ನಾನು ನೋಡಿದ್ದೆನು. ನೋಡು ನೋಡುತ್ತಿದ್ದಂತೆಯೇ ಮನೆಯ

ಮುಂದೆ ಚಪ್ಪರವೆದ್ದು, ಕೆಲವೇ ಘಂಟೆಗಳಲ್ಲಿ ಮದುವೆಯೂ, ಊಟವೂ ಮುಗಿದು, ಕೇವಲ ಸಾದಾ ಸೀರೆಯುಟ್ಟು, ಅರಸಿನದ ಕೊಂಬು ಕಟ್ಟಿಕೊಂಡು ಸಂತೃಪ್ತಿಯಿಂದ ಬೀಗುತ್ತಿದ್ದ ಮದುವಣಗಿತ್ತಿಯನ್ನು ಗಂಡನ ಮನೆಗೆ ಕಳಿಸಿಕೊಟ್ಟದ್ದನ್ನು ನೋಡಿ ಸರಳತೆಯಲ್ಲಿಯೇ ಹೆಚ್ಚಿನ ಸೌಂದರ್ಯ, ಸಂತೃಪ್ತಿ ಇದೆ ಎಂಬುದನ್ನು ಮನಗಂಡಿದ್ದೆ.

ಮದುವೆಯ ಸುತ್ತಮುತ್ತ ಇಷ್ಟೆಲ್ಲಾ ಮನಸ್ಸು ಹರಿದಾಡಿದ್ದರೂ ಅದು ನನ್ನ ಜಾತಿಯ ವಲಯವನ್ನು ದಾಟಲು ಶಕ್ತವಾಗಿರಲಿಲ್ಲ. ನನ್ನ ಜಾತಿಯಲ್ಲಿಯೇ ವರದಕ್ಷಿಣೆ ಬೇಡದ ಸರಳ ಮನಸ್ಸಿನ ಹುಡುಗನನ್ನು ವರಿಸಬೇಕೆಂಬ ಇಚ್ಛೆ ನನ್ನದಾಗಿತ್ತು. ಅಷ್ಟಕ್ಕೂ ಅದರ ಬಗ್ಗೆ ಗಹನವಾಗಿ ವಿಚಾರ ಮಾಡುವುದಕ್ಕೆ ನನಗಾಗ ೧೬-೧೭ ವಯಸ್ಸು. ಓದಿನಲ್ಲಿ ಮುಂದಿದ್ದೇನಾದ್ದರಿಂದ, ಮುಂದೆ ಕೆಲಸಕ್ಕೆ ಸೇರುವ ಆಕಾಂಕ್ಷೆಯೂ ಇದ್ದದ್ದರಿಂದ ಹಾಗೂ ಕತೆ-ಕಾದಂಬರಿಗಳ ಹೊಸ ಲೋಕಕ್ಕೆ ಪ್ರವೇಶಿಸಲು ತೊಡಗಿದ್ದರಿಂದ ಕ್ರಮೇಣ ಮದುವೆ, ಮುಂಜಿ ಇತ್ಯಾದಿಗಳು ನನ್ನ ಮನೋವಲಯದಿಂದ ಹಿಂದೆ ಸರಿಯತೊಡಗಿದವು. ಅದೇ ಸಮಯಕ್ಕೆ ಸರಿಯಾಗಿ ಪಿಯುಸಿಯಲ್ಲಿ ಪಠ್ಯವಿರಿಸಿದ್ದರಿಂದ ನನಗೆ ಮುಲ್ಕರಾಜ್ ಆನಂದರ 'Untouchable' ಕೃತಿ ಓದುವ ಅವಕಾಶ ಒದಗಿಬಂದಿತು. ಜಾತಿಯ ಕರಾಳ ವಿರಾಟ್ ಸ್ವರೂಪವನ್ನು ಆ ಕೃತಿ ನನಗೆ ಕಾಣಿಸಿತೆಂದೇ ಹೇಳಬೇಕು. ಆ ಕೃತಿಯನ್ನು ಓದುತ್ತಿದ್ದಂತೆ ಕೆಳ ವರ್ಗದ ಮನುಷ್ಯರನ್ನು ಪಶುಗಳಿಗಿಂತ ಕಡೆಗಾಣಿಸುವ ಮೇಲು ಜಾತಿಯ ಬಗ್ಗೆ ವಿಪರೀತ ತಿರಸ್ಕಾರ ಉಂಟಾಗಿದ್ದಷ್ಟೇ ಅಲ್ಲ... ಇದಕ್ಕೆ ಪರಿಹಾರವೇ ಇಲ್ಲವೇ ಎಂದು ಮನಸ್ಸು ಆಲೋಚಿಸಿತು. ಆ ಕೃತಿಯನ್ನು ಓದಿದಾಗ ಅದೆಷ್ಟೋ ಬಾರಿ ನನಗೆ ಕಣ್ಣೀರು ಬಂದದ್ದುಂಟು. ಆ ಕೃತಿಯಲ್ಲಿ ಅಸ್ಪೃಶ್ಯ ಹೆಣ್ಣುಮಗಳೊಬ್ಬಳು ಅನುಭವಿಸುವ ಪಾಡು ನೋಡಿ ಆ ಸಮುದಾಯದ ಬಗ್ಗೆ ನನ್ನಲ್ಲಿ ಅಪಾರ ಸಹಾನುಭೂತಿ ಉದಿಸಿತು. ಫ್ರೀಷಿಪ್, ಸ್ಕಾಲರ್‌ಶಿಪ್‌ನಲ್ಲಿ ಹೆಚ್ಚು ಪಾಲು ಪಡೆಯುತ್ತಾರೆ ಎಂಬ ಅಸೂಯೆ ಕರಗಿ ಅದು ಅವರಿಗೆ ಅವಶ್ಯವಾಗಿ ದಕ್ಕಬೇಕಾದ್ದೇ ಎಂಬ ಮನೋಸ್ಥಿತಿ ನನ್ನಲ್ಲಿ ಉಂಟಾಯಿತು. ಹೆಚ್ಚು ಅಂಕಗಳನ್ನು ಗಳಿಸಿದ್ದರಿಂದ ಹದಿನೆಂಟನೆಯ ವಯಸ್ಸಿನಲ್ಲಿಯೇ ಅಂಚೆ ಇಲಾಖೆಯಲ್ಲಿ ಕೆಲಸ ಸಿಕ್ಕಿ ತಂದೆಗೆ ನೆರವಾಗುವ ಸಂದರ್ಭವೂ ಒದಗಿಬಂತು. ಶಿವಮೊಗ್ಗೆಯಲ್ಲಿ ರಾತ್ರಿ ಕಾಲೇಜಿನ ಸೌಲಭ್ಯವೂ ಇದ್ದದ್ದರಿಂದ ವಿದ್ಯಾಭ್ಯಾಸವೂ ನಿರಾತಂಕವಾಗಿ ಸಾಗಿತು.

ಸಣ್ಣ ಪುಟ್ಟ ಲೇಖನ, ಕವನಗಳನ್ನು ಬರೆಯುತ್ತಾ ನನ್ನದೇ ಆದ identity ಯನ್ನು ಸ್ಥಾಪಿಸಿಕೊಳ್ಳಲು ಹೆಣಗಾಡುತ್ತಿರುವ ಸಂದರ್ಭದಲ್ಲೇ ಅಂದರೆ ೧೯೮೩ ಸೆಪ್ಟೆಂಬರ್‌ನಲ್ಲಿ ಆಕಾಶವಾಣಿ ಭದ್ರಾವತಿಯಲ್ಲಿ ಕೆಲವು ಕವನಗಳನ್ನು ಸಾದರಪಡಿಸುವ ಅವಕಾಶ ಒದಗಿಬಂದಿತು. ಆಕಾಶವಾಣಿಯಿಂದ ಬಂದ ಕರೆಯೋಲೆಯಲ್ಲಿ ನಾಗಭೂಷಣ ಎಂಬ ಸಹಿ ಇದ್ದದ್ದರಿಂದ ನಾನು ಭೇಟಿ ಮಾಡಬೇಕಾದ ವ್ಯಕ್ತಿ ನಾಗಭೂಷಣ ಎಂಬುದನ್ನು ಬಿಟ್ಟರೆ ನನಗೆ ಮತ್ತೇನೂ ಮಾಹಿತಿಯಿರಲಿಲ್ಲ. ನಾನು ಆಕಾಶವಾಣಿಯ ಕಾರ್ಯಕ್ರಮಗಳ ರೆಗ್ಯುಲರ್ ಶ್ರೋತೃವಾದರೂ ಆ ಮೊದಲೇ ನಾಗಭೂಷಣ ಅವರು ಪ್ರಸ್ತುತಪಡಿಸಿದ ಅನೇಕ ಕಾರ್ಯಕ್ರಮಗಳನ್ನು

ಕೇಳಿದ್ದೆನಾದರೂ ಅಂತಹ ವಿಶೇಷ ಗಮನವನ್ನೇನೂ ಕೊಟ್ಟಿರಲಿಲ್ಲ. ಅದು ಆಕಾಶವಾಣಿಯಲ್ಲಿ ನಾನು ಸಾದರಪಡಿಸಲಿರುವ ಮೊದಲ ಕಾರ್ಯಕ್ರಮವಾಗಿದ್ದರಿಂದ ಸಹಜವಾಗಿಯೇ ಆಕಾಶವಾಣಿಯನ್ನು ನೋಡುವ, ಅಲ್ಲಿಂದ ಹೇಗೆ ಕಾರ್ಯಕ್ರಮಗಳು ಬಿತ್ತರಗೊಳ್ಳುತ್ತವೆ ಎಂಬುದನ್ನು ಅರಿಯಲು ಕುತೂಹಲವಿತ್ತು. ನಾನು ನನ್ನ ತಮ್ಮನೊಡನೆ ಆಕಾಶವಾಣಿಗೆ ಹೋಗಿ ನನ್ನ ಕವನಗಳನ್ನು ನಾಗಭೂಷಣ ಅವರ ಮುಂದಿರಿಸಿದೆ. ಅವರು ನಮ್ಮನ್ನು ಕುಳ್ಳಿರಿಸಿ ನಾನು ತಂದ ಕವನಗಳ ಮೇಲೆ ಕಣ್ಣಾಡಿಸಿ ರೆಕಾರ್ಡಿಂಗ್‌ಗೆ ಕರೆದೊಯ್ದರು. ಅಪರಿಮಿತ ಗೌರವ ಕೊಟ್ಟು ಮಾತನಾಡಿಸಿದ್ದಷ್ಟೇ ಅಲ್ಲ, ಕವನಗಳನ್ನು ಹೇಗೆ ಓದಬೇಕೆಂದೂ ತೋರಿಸಿಕೊಟ್ಟರು. ಓದಿನ ನಂತರ ಕಾಫಿ ಸತ್ಕಾರವೂ ಆಯಿತು. ಅದು ಕೇವಲ ಕೆಲವೇ ಘಂಟೆಗಳ ಭೇಟಿ. ಅಡ್ಡಾದಿಡ್ಡಿ ಬಟ್ಟೆ ತೊಟ್ಟು ಇಷ್ಟುದ್ದ ಗಡ್ಡ ಬಿಟ್ಟು ಸ್ವಲ್ಪ ಸೀರಿಯಸ್ ಆಗಿಯೇ ಇದ್ದ ಕಪ್ಪಗಿನ ಲಕ್ಷಣವಾದ ವ್ಯಕ್ತಿಯನ್ನು ನೋಡಿದ ಕೂಡಲೇ ಮೆಚ್ಚುವಂತಾದ್ದೇನೂ ಇರಲಿಲ್ಲವಾದರೂ, ಒಂದು ಕ್ಷಣ ಮನಸ್ಸು ಈತ ತುಂಬಾ 'ಸಂಭಾವಿತ' ಎಂದು ಬಗೆಯಿತು. ಅವರ ಸನ್ನಡತೆಯ ಬಗ್ಗೆ ಗೌರವವೂ ಉಂಟಾಯಿತು. ಈತನ ಕಣ್ಣುಗಳು ಎಷ್ಟು ಸುಂದರವಾಗಿವೆಯಲ್ಲ... ಎಂದೆನಿಸಿತು.

ತದನಂತರ ಆಕಾಶವಾಣಿಯಲ್ಲಿ ಕಾರ್ಯಕ್ರಮಗಳು ಬಿತ್ತರವಾದಾಗೆಲ್ಲ ಪ್ರಸ್ತುತಪಡಿಸಿದವರು ಡಿ.ಎಸ್. ನಾಗಭೂಷಣ ಎಂದು ಹೇಳಿದಾಗ ಆ ವ್ಯಕ್ತಿಯನ್ನು ಖುದ್ದಾಗಿ ನೋಡಿದ್ದೆನಾದ್ದರಿಂದ ಸಹಜವಾಗಿಯೇ ವಿಶೇಷವಾಗಿ ಅತ್ತ ನನ್ನ ಗಮನ ಹೋಗುತ್ತಿತ್ತು. ವಸ್ತುವಿನ ಮಂಡನೆಯ ನಿಖರತೆ, ಹಾಸ್ಯಮಿಶ್ರಿತ ಸಂಭಾಷಣೆ, ಮಧುರವಾದ ಧ್ವನಿಯ ಹಿಂದಣ ಗಟ್ಟಿ ವ್ಯಕ್ತಿತ್ವ ನನ್ನ ಮನಸ್ಸಿನಲ್ಲಿ ಇಷ್ಟಿಷ್ಟೇ ಇಳಿದು ಅಲ್ಲೇ ನೆಲೆಸಿತು. ಪ್ರತಿ ಶನಿವಾರ ಅವರು ನಡೆಸಿಕೊಡುತ್ತಿದ್ದ 'ನಾವು–ನೀವು' ಪತ್ರೋತ್ತರ ಕಾರ್ಯಕ್ರಮವನ್ನು ತಪ್ಪದೆ ಕೇಳುತ್ತಿದ್ದೆನಾದ್ದರಿಂದ ವಯೋಮಾನಕ್ಕೆ ಸಹಜವಾಗಿ ಆಸಕ್ತಿ ಹುಟ್ಟಿತು. ನನಗಾಗ ೨೨ ವಯಸ್ಸು. ಆ ವ್ಯಕ್ತಿಯ ಹಿನ್ನೆಲೆ ಏನು, ಅವನ ಜಾತಿ ಯಾವುದು? ಕುಲ–ಗೋತ್ರ... ಹೋಗಲಿ ವಿವಾಹಿತನೊ, ಅವಿವಾಹಿತನೊ ಏನೇನೂ ತಿಳಿಯದು. ಸುಮ್ಮನೆ ಭಾವನೆಗಳು ಎದೆಯೊಳಗೆ ಉಕ್ಕಿದವು ಅಷ್ಟೇ.

ನಾನು ತಿಳಿಗೇಡಿಯಾಗಿದ್ದರೂ ನಾನು ನಂಬಿದ ದೈವ ಹೊಣೆಯರಿತವನಾದ್ದರಿಂದ ಅವನೇ ನನ್ನ ಸಹಾಯಕ್ಕೆ ಬಂದ ಎಂದು ಹೇಳಬೇಕು. ಸರಿಸುಮಾರು ಅದೇ ಸಮಯಕ್ಕೆ ನನ್ನ ಸ್ನೇಹಿತೆಯೊಬ್ಬಳ ಮನೆಗೆ ಹೋದಾಗ ಇದ್ದಕ್ಕಿದ್ದ ಹಾಗೆ ಆಕೆ ಮಾತಿನ ನಡುವೆ ನಾಗಭೂಷಣ ಅವರ ವಿಷಯವನ್ನು ಪ್ರಸ್ತಾಪಿಸಿದಳು. ಅವಳು ಮದುವೆಯಾಗಲಿರುವ ಹುಡುಗ ನಾಗಭೂಷಣ ಅವರ ಪರಿಚಯಸ್ಥರೆಂದೂ, ಅದೇ ವಾರ ಊರಿಗೆ ಬಂದ ಸಂದರ್ಭದಲ್ಲಿ ಭದ್ರಾವತಿಗೆ ಹೋಗಿ ಭೆಟ್ಟಿಯಾಗಿ ಬಂದರೆಂದೂ ಆಕೆ ಅರುಹಿದಳು. 'ನೀವು ಅವರನ್ನು ನೋಡಿರಬೇಕಲ್ಲ? ಆಕಾಶವಾಣಿಯಲ್ಲಿ ಕಾರ್ಯಕ್ರಮ ಕೊಡಲು ಹೋದಾಗ ಭೆಟ್ಟಿಯಾಗಿರಬೇಕಲ್ಲ?' ಎಂದವಳೂ ಕೇಳಿದಳು. ಜತೆಜತೆಗೆ ನಾಗಭೂಷಣ ಅವರು ಲೇಖಕರೆಂದೂ, 'ಸೋಷಲಿಸ್ಟ್' ಎಂದೂ ತಿಳಿಸಿದಳು. ಆಕೆಗೆ ನನ್ನ ಪ್ರೇಮದ ವಿಷಯವೇನೂ

ತಿಳಿಯದು. ಹೀಗೇ casual ಆಗಿ ಆಕೆ ವಿಷಯ ಹೇಳಿದ್ದಳು. ನನಗೋ ಅನಾಯಾಸವಾಗಿ ಅಲ್ಪಸ್ವಲ್ಪ ಮಾಹಿತಿ ದೊರಕಿತು. ಅವರು ವಿವಾಹಿತರೋ, ಅವಿವಾಹಿತರೋ ಎಂದು ಕೇಳುವಷ್ಟು ಧೈರ್ಯ ನನ್ನಲ್ಲಿರಲಿಲ್ಲ. ಆದರೆ ಲೇಖಕರೆಂದು ತಿಳಿದ ಮೇಲೆ ನನ್ನ ಕುತೂಹಲ ನೂರ್ಮಡಿಯಾಯಿತು.

ನನ್ನ ನೆರೆಹೊರೆಯಲ್ಲೇ ಕೆಲವು ಇಂಗ್ಲಿಷ್ ಮೇಷ್ಟರು ವಾಸಿಸುತ್ತಿದ್ದರು. ಅವರು ಕಮ್ಯುನಿಸ್ಟರೆಂದು ಅವರ ಮನೆಯವರ ಮೂಲಕ ನನಗೆ ಮಾಹಿತಿ ಇತ್ತು. ನಿರಾಶೆ ತುಂಬಿದ ಮುಖ, ಕೊಳಕು ಗಡ್ಡ, ಗಂಭೀರ ನಡೆ – ಇವು ಅವರ ಲಕ್ಷಣಗಳಾಗಿದ್ದವು. ಅವರ ನಾಟಕಗಳನ್ನು ಅವರೇ ನಿರ್ದೇಶಿಸಿ, ಅಭಿನಯಿಸಿದ್ದನ್ನು ಅವರ ಮನೆಯವರ ಬಲವಂತಕ್ಕೆ ನಾನು ನೋಡಿದ್ದೆನು. ನಿರಾಶೆಯೇ ಮೂರ್ತಿವೆತ್ತಂತೆ ಇದ್ದ ಅವರಾಗಲಿ, ಹಿಂಸೆಗೆ ಇಂಬುಗೊಡುತ್ತಿದೆ ಎಂಬ ಕಾರಣದಿಂದ ಅವರ ಪಂಥವಾಗಲಿ ನನ್ನನ್ನ ಆಕರ್ಷಿಸಿರಲಿಲ್ಲ. ಆದರೂ ಕಮ್ಯುನಿಸಂ ಬಗ್ಗೆ ಅಷ್ಟಿಷ್ಟು ಅರಿಯಲು ಅವರ ಒಡನಾಟ ಸಹಕಾರಿಯಾಗಿತ್ತು. ಆದರೆ ನಾಗಭೂಷಣ ಅವರು 'ಸೋಷಲಿಸ್ಟ್' ಎಂದು ನನ್ನ ಗೆಳತಿ ತಿಳಿಸಿದ್ದರಿಂದ ಹಾಗೆಂದರೇನು ಎಂದು ಅರಿಯುವ ಆಸೆ ಉಂಟಾಯಿತು. ಆ ಮೊದಲು ಸೋಷಲಿಸಂ ಬಗ್ಗೆ ನಾನೇನೂ ಓದಿರಲಿಲ್ಲವಾದ್ದರಿಂದ ಯಾಕೋ ನಮ್ಮ ಬೀದಿಯ ಆಸುಪಾಸಿನಲ್ಲಿ ಸೈಕಲ್‌ನಲ್ಲಿ ಓಡಾಡುತ್ತಿದ್ದ ಗಾಂಧಿವಾದಿ ನಾಗಪ್ಪ ಶೆಟ್ಟರು ನೆನಪಾಗಿ ಅದೇ ಇರಬಹುದು ಎಂದು ಮನಸ್ಸು ತರ್ಕಿಸಿತು. ಜತೆಗೆ ತೀರ್ಥಹಳ್ಳಿ–ಸಾಗರದ ಕಡೆಯ ಒಬ್ಬಿಬ್ಬ ಪ್ರಸಿದ್ಧ ಸೋಷಲಿಸ್ಟರ ಹೆಸರುಗಳನ್ನು ಕೇಳಿ ಬಲ್ಲೆನಾದ್ದರಿಂದ ಆ ಪದ ಆ ಗಳಿಗೆಯಲ್ಲಿ ನನಗೆ ಅಪ್ಯಾಯಮಾನವಾಗಿ ತೋರಿತು. ಆ ಪಂಥದ ಬಗ್ಗೆ ಒಲವಿದ್ದವನೇ ಆದಲ್ಲಿ ಆ ಮನುಷ್ಯ ತುಂಬಾ ಆದರ್ಶವುಳ್ಳವನಾಗಿರಬೇಕು, ತುಂಬಾ ಒಳ್ಳೆಯವನೇ ಇರಬೇಕು ಎಂದು ಮನಸ್ಸು ತರ್ಕಿಸಿತು.

ಇದೇ ಸಮಯಕ್ಕೆ ಸರಿಯಾಗಿ ನನ್ನ ಕಛೇರಿಯ ವಿಳಾಸಕ್ಕೆ ಶಿವಮೊಗ್ಗೆಯಲ್ಲಿ 'ಲೋಹಿಯಾ ನೆನಪು' ಕಾರ್ಯಕ್ರಮ ಇರುವ ಮಾಹಿತಿಯಿದ್ದ ಪುಟ್ಟ invitation ಬಂದಿತು. (ಅದನ್ನು ಯಾರು ಕಳಿಸಿದರೋ... ನನಗೆ ತಿಳಿಯದು?!) ನಾನೂ ನನ್ನ ಗೆಳತಿಯೂ ಕಾರ್ಯಕ್ರಮಕ್ಕೆ ಹೋದೆವು. ಯು.ಆರ್. ಅನಂತಮೂರ್ತಿಯವರಿಂದ ಕಾರ್ಯಕ್ರಮ ಉದ್ಘಾಟನೆಯಾಯಿತು. ನಾಗಭೂಷಣ ಅವರ ಭಾಷಣವೂ ಇತ್ತು. ನಾನು ದೂರದಿಂದ ಕುಳಿತು ಕಾರ್ಯಕ್ರಮ ವೀಕ್ಷಿಸಿದೆನು. ನಾಗಭೂಷಣ ಅವರನ್ನು ಭೇಟಿ ಮಾಡಿ ಮಾತನಾಡಿಸುವಷ್ಟು ಧೈರ್ಯವಿರಲಿಲ್ಲವಾದ್ದರಿಂದ ಹಾಗೆಯೇ ಮನೆಗೆ ಮರಳಿದೆನು. ಲೋಹಿಯಾ ಬಗ್ಗೆ ಎಲ್ಲೋ ಅಲ್ಪಸ್ವಲ್ಪ ಓದಿದ್ದೆನಾದ್ದರಿಂದ ಈತ 'ಲೋಹಿಯಾವಾದಿ' ಎಂದು ಗೊತ್ತಾದಾಗ ಎಲಾ... ಎಲ್ಲ ಒಳ್ಳೆಯ ಅಂಶಗಳೇ ಸೇರ್ಪಡೆಯಾಗುತ್ತಿವೆಯಲ್ಲಾ ಎಂದೆನಿಸಿತು. ಇಷ್ಟೆಲ್ಲಾ ಮಾಹಿತಿ ಲಭ್ಯವಾಗಿದ್ದರೂ ವಿವಾಹಿತನೊ, ಅವಿವಾಹಿತನೊ ಎಂಬ ಪ್ರಶ್ನೆ ಹಾಗೆಯೇ ಇದ್ದು, ಸಮಸ್ಯೆ ಬಗೆಯರಿಯದಂತಾಗಿತ್ತು. ಕೃಷ್ಣನ ಹಾಗೆ ಕಪ್ಪಗಿದ್ದದ್ದನ್ನು ನೋಡಿ ಮನದ ಮೂಲೆಯಲ್ಲೆಲ್ಲೋ

ದಲಿತನಿದ್ದರೂ ಇರಬಹುದು ಎಂದೆನಿಸಿತ್ತು. ಈ ಮನೋಸ್ಥಿತಿಯಲ್ಲೇ ನಾನು 'ತುಷಾರ'ಕ್ಕೊಂದು ಪುಟ್ಟ ಪದ್ಯ ಬರೆದೆ:

**ಕಪ್ಪು ಹುಡುಗನಿಗೆ**

ನೀನು ನನ್ನ ಕಣ್ಣೊಳಗಣ
ಬಿಳಿ ಗೋಡೆಯೊಳಗೆ
ನೆಟ್ಟಿರುವ ಕಪ್ಪು ಗೋಲಿಯಂತೆ
ಏಕೆ ಚಿಂತೆ?

ಈ ಕವನ ಬರೆದಾಗ, ಇದು ಪ್ರಕಟವಾಗುತ್ತದೆಯೆಂದಾಗಲಿ, ಅಥವಾ ಪ್ರಕಟವಾದರೂ ನಾಗಭೂಷಣ ಅವರನ್ನು ತಲುಪಿ ಮಾರುತ್ತರ ಬರುತ್ತದೆಯೆಂದಾಗಲಿ ನಾನು ಭಾವಿಸಿರಲಿಲ್ಲ. ನಿರ್ವಾಜ್ಯ ಪ್ರೇಮವಿದ್ದೆಡೆ ದೈವ ಸಹಾಯ ಒದಗಿ ಬರುವುದಂತೆ! ನನ್ನ ವಿಷಯದಲ್ಲೂ ಹಾಗೆಯೇ ಆಯಿತು. ಅದು ಹೇಗೊ ಆ ಕವನ ನಾಗಭೂಷಣ ಅವರ ಮಿತ್ರರಾದ ಬಿದರಳ್ಳಿ ನರಸಿಂಹಮೂರ್ತಿಯವರ ಕಣ್ಣಿಗೆ ಬಿದ್ದು ನಾಗಭೂಷಣ ಅವರ ಕಿವಿ ತಲುಪಿತು. ನಾನು ಅವರ ಬಗ್ಗೆಯೇ ಬರೆದದ್ದು ಎಂದು ಹೇಗೆ ಊಹಿಸಿದರೋ... ಅಂತೂ ಸ್ವಲ್ಪ ದಿನಗಳಲ್ಲೇ ಅವರಿಂದ ನನಗೆ ಪತ್ರವೂ ಬಂತು! ಬಿದರಳ್ಳಿಯವರ ಪತ್ನಿ ಧಾರಿಣಿ ನನ್ನನ್ನ ಭೇಟ್ಟಿಯಾಗಿ ವಿಚಾರಿಸಿಕೊಂಡು ಹೋದದ್ದಷ್ಟೇ ಅಲ್ಲ, ಮುಂದಿನ ದಿನಗಳಲ್ಲಿ ಆ ದಂಪತಿಗಳು ನಮ್ಮಿಬ್ಬರ ನಡುವೆ ಸೇತುವೆಯಾದರು. ಆ ದಿನಗಳಲ್ಲಿ ಇವರ ಮಿತ್ರರಾಗಿದ್ದ ಶಿವಮೊಗ್ಗ ಮುನೀರ್ ಅವರೂ ನಮ್ಮ ಪ್ರೇಮದ ಬಳ್ಳಿಗೆ ನೀರೆರೆದು ಪೋಷಿಸಿದ್ದುಂಟು.

ತದನಂತರ ನಾನು ನನ್ನ ಈ ಗೆಳೆತನದ ವಿಷಯವನ್ನು ಸಮಯ-ಸಂದರ್ಭ ನೋಡಿ ನನ್ನ ಅಜ್ಜಿಯ ಬಳಿ ಹೇಳಿಕೊಂಡೆ. ಇರುವ, ಇಲ್ಲದ ಎಲ್ಲಾ ಗುಣಗಳನ್ನು ಆರೋಪಿಸಿ ಬಣ್ಣಿಸಿದೆ. ಜಾತಿಯಿಂದ ಅಕ್ಕಸಾಲಿಗರೆಂದೂ, ಕಪ್ಪಗಿದ್ದರೂ ಲಕ್ಷಣವಾಗಿದ್ದಾರೆಂದೂ ತಿಳಿಸಿದೆ. ನಾಗಭೂಷಣ ಅವರ ಮಿತ್ರರ ಹೆಸರು, ವಿಳಾಸಗಳನ್ನು ತಿಳಿಸಿ ಅವರೆಲ್ಲಾ ಜವಾಬ್ದಾರಿ ಹುದ್ದೆಯಲ್ಲಿರುವ ಸದ್ಗೃಹಸ್ಥರೆಂದೂ, ಹೆದರುವ ಅವಶ್ಯಕತೆ ಇಲ್ಲವೆಂದೂ ತಿಳಿಸಿದೆ. ಆತ ಒಂದೇ ಒಂದು ನಯಾ ಪೈಸೆ ಕೂಡ ತೆಗೆದುಕೊಳ್ಳದೆ ಸರಳವಾದ ಮದುವೆಗೆ ಸಿದ್ಧವಿರುವ ವ್ಯಕ್ತಿಯೆಂದೂ ತಿಳಿಸಿದೆ. ಹಾಗೆಯೇ ನನ್ನ ಅಜ್ಜಿಗೆ ಅರ್ಥವಾಗಲಾರದೆಂದು ತಿಳಿದು 'ಸೋಷಲಿಸಂ' ಎಂಬ ಪದ ಬಳಸದೆ 'ಗಾಂಧೀವಾದಿ' ಎಂದು ಹೇಳಿದೆ. ಗಾಂಧಿಯ ಬಗ್ಗೆ ಅಪಾರ ಗೌರವವಿದ್ದ ನನ್ನ ಅಜ್ಜಿ ನಾಗಭೂಷಣ ಅವರ ಬಗ್ಗೆಯೂ ಗೌರವ ತಾಳಿ ಹಾಗಾದರೆ ನಾನೇ ನಿನ್ನ ತಂದೆಯ ಬಳಿ ವಿಷಯ ಪ್ರಸ್ತಾಪಿಸುತ್ತೇನೆ ಎಂದರು. ಹೀಗೆ ನನ್ನ ಅಜ್ಜಿಯ ಮೂಲಕ ತಂದೆಯ ಬಳಿ ವಿಷಯ ಪ್ರಸ್ತಾಪವಾಯಿತು. ಮಾಂಸ ತಿನ್ನದಿದ್ದರೆ ಸರಿ, ಕುಡುಕನಾಗಿಲ್ಲದಿದ್ದರೆ ಸರಿ, ಜಾತಿಯ ಬಗ್ಗೆ ನನ್ನದೇನೂ ತಕರಾರಿಲ್ಲ ಎಂದರವರು. ನನ್ನ ತಾಯಿಗೆ ಸ್ವಲ್ಪ ಮಟ್ಟಿಗೆ ಆಘಾತವಾಗಿರಲಿಕ್ಕೆ ಸಾಕು. ಆದರೆ ಮನೆಯಲ್ಲಿ ಯಾರ ವಿರೋಧವೂ

ಇಲ್ಲದಿರಲು ಅವರು ಸುಮ್ಮನಾಗಬೇಕಾಯಿತು. ಮದುವೆ ಸರಳವಾಗಿ 'ಮಂತ್ರ ಮಾಂಗಲ್ಯ' ರೀತಿಯಲ್ಲಿ ನಾಗಭೂಷಣ ಅವರ ಆಪ್ತ ಗೆಳೆಯರಲ್ಲೊಬ್ಬರಾದ ಭದ್ರಾವತಿಯ ಎಂ. ಚಂದ್ರಶೇಖರಯ್ಯ ಅವರ ಮನೆಯಲ್ಲಿ ನೆರವೇರಿತು. ತೇಜಸ್ವಿ ಪರಿಷ್ಕರಿಸಿ ಸಂಪಾದಿಸಿಕೊಟ್ಟಿದ್ದ 'ಮಂತ್ರ ಮಾಂಗಲ್ಯ' ಪಠ್ಯವನ್ನು ರಾಜೇಂದ್ರ ಚೆನ್ನಿ ಸಾದರಪಡಿಸಿದರು. ಚಂದ್ರಶೇಖರಯ್ಯ ಅವರ ಇಡೀ ಕುಟುಂಬವೇ ನಮ್ಮ ಮದುವೆಯನ್ನು ತಮ್ಮ ಕುಟುಂಬದ ಮದುವೆಯೇನೋ ಎಂಬಂತೆ ನಡೆಸಿಕೊಟ್ಟಿತು.

ಮದುವೆಗೆ ನನ್ನ ತಂದೆ, ತಾಯಿ, ತಮ್ಮಂದಿರು, ತಂಗಿ ಹಾಗೂ ಹತ್ತಿರದ ಕೆಲವೇ ಬಂಧುಗಳು ಹಾಗೂ ನಾಗಭೂಷಣ ಮತ್ತು ನನ್ನ ಅನೇಕ ಗೆಳೆಯ–ಗೆಳತಿಯರು ಹಾಜರಿದ್ದರು. ನಾಗಭೂಷಣ ಅವರ ಮನೆಯಲ್ಲಿ ಈ ಮದುವೆಗೆ ವಿರೋಧವಿದ್ದದ್ದರಿಂದ ಅವರ ತಂದೆ– ತಾಯಾಗಲೀ ಅಥವಾ ಅವರ ಒಡಹುಟ್ಟಿದವರಾಗಲೀ ಭಾಗವಹಿಸಲಿಲ್ಲ. ಆದರೆ ಅವರ ಚಿಕ್ಕಪ್ಪ, ಚಿಕ್ಕಮ್ಮ ಹಾಗೂ ಅವರ ಮಗ–ಸೊಸೆ (ಅವರದ್ದೂ ಅಂತರ್ಜಾತಿ ವಿವಾಹ) ಭಾಗವಹಿಸಿದ್ದರು. ಮನೆಯವರನ್ನು ತುಂಬಾ ಹಚ್ಚಿಕೊಂಡಿದ್ದ ನಾಗಭೂಷಣ ಅವರಿಗೆ ಇದೊಂದು ದೊಡ್ಡ ಆಘಾತ. ಆ ದುಃಖ ಈಗಲೂ ಅವರನ್ನು ಕಾಡುತ್ತಿರುವಂತಿದೆ. ಮುಂದಿನ ದಿನಗಳಲ್ಲಿ ಏನೋ ಆಗಿಹೋಯಿತಲ್ಲ ಎಂದು ಅವರ ಮನೆಯವರು ಒಪ್ಪಿಕೊಂಡಂತೆ ಕಾಣಿಸಿದರೂ, ಇವತ್ತಿನವರೆಗೂ ಅಸಮಧಾನವನ್ನು ಹಾಗೆಯೇ ಉಳಿಸಿಕೊಂಡಿರುವರು. ಇದೇ ಅಭಿಪ್ರಾಯವನ್ನು ನನ್ನ ಅತ್ತೆಯ ಬಗ್ಗೆಯಾಗಲಿ, ನನ್ನ ಮಾವನವರ ಬಗ್ಗೆಯಾಗಲಿ ನಾನು ವ್ಯಕ್ತಪಡಿಸಲಾರೆ, ಕನಿಷ್ಠ ವಿದ್ಯೆಯನ್ನು ಪಡೆದಿದ್ದಾಗ್ಯೂ ಅವರು ನನ್ನನ್ನು ಮಗಳಂತೇ ಕಂಡಿದ್ದಾರೆ. ಅಪಾರ ಬಡತನದ ನಡುವೆಯೂ ಆದರ್ಶರಾಗಿ ಬಾಳಿದ್ದ, ಪ್ರಾಥಮಿಕ ಶಾಲೆಯ ಮೇಸ್ಟರಾಗಿ ಬದುಕು ಸವೆಸಿದ ನನ್ನ ಮಾವನವರು ಹಿರಿಯ–ಕಿರಿಯ ಸೊಸೆಯೆಂದು ಭೇದವೆಣಿಸದೆ ಒಂದೇ ತಕ್ಕಡಿಯಲ್ಲಿ ಸಮನಾಗಿ ತೂಗಿದ್ದಾರೆ. ನಾಗಭೂಷಣ ಅವರ ಬಂಧು– ಮಿತ್ರರ ಬಳಗ ದೊಡ್ಡದು. ಆ ಬಳಗವೆಲ್ಲಾ ನನ್ನನ್ನು ಅಪಾರ ಪ್ರೀತಿಯಿಂದ ಕಂಡಿದೆ. ವಿದ್ಯೆ ಮತ್ತು ಶ್ರೀಮಂತಿಕೆಯ ಠೇಂಕಾರ ತುಂಬಿದ ಬೆರಳೆಣಿಕೆಯ ಬಂಧುಗಳು ಮಾತ್ರ ಪ್ರೇಮದ ಮೌಲ್ಯವನ್ನು ಗುರುತಿಸದೆ ಹೋದದ್ದು ಮಾತ್ರ ಇವತ್ತಿಗೂ ನಮ್ಮಿಬ್ಬರನ್ನೂ ಯೋಚನೆಗೀಡು ಮಾಡುತ್ತದೆ.

ಇನ್ನು ನನ್ನ ಬಂಧು–ಮಿತ್ರರ ವಿಷಯಕ್ಕೆ ಬಂದರೆ, ನನ್ನ ಮದುವೆಯ ಸಂದರ್ಭದಲ್ಲಿ ಓಂದೆ ಆಡಿಕೊಂಡಿರಲಿಕ್ಕೂ ಸಾಕು. ಆದರೆ ಅವರೇನು ಆಡಿಕೊಂಡಿದ್ದಾರೆ ಎಂದು ಅರಿಯುವ ಗೋಜಿಗೆ ನಾನು ಹೋಗಿಲ್ಲ. ಇಷ್ಟು ವರುಷಗಳಾದ ಮೇಲೂ ನಾವು ಚೆನ್ನಾಗಿಯೇ ಬಾಳಿ ಬದುಕುತ್ತಿರುವುದರಿಂದ ಯಾವುದೇ ಸವಕಲು ಮಾತುಗಳು ಈಗ ಚಲಾವಣೆಯಲ್ಲಿ ಇಲ್ಲ. ನನ್ನ ದೊಡ್ಡಮ್ಮನ ಮಗಳೂ ಕಳೆದ ವರುಷ ಗುಜರಾತಿ ಹುಡುಗನೊಬ್ಬನನ್ನು ಮದುವೆಯಾಗಿ ಸುಖವಾಗಿದ್ದಾಳೆ. ನನ್ನ ಮನೆಯಲ್ಲಂತೂ ಈಗ ಜಾತಿ ಒಂದು ಸಮಸ್ಯೆಯಾಗಿ ಉಳಿದಿಲ್ಲ. ನನ್ನ ತಂದೆ–ತಾಯಿ, ತಮ್ಮಂದಿರು, ತಂಗಿ ಎಲ್ಲರೂ ನನ್ನವರಿಗೆ ಚೆನ್ನಾಗಿ ಹೊಂದಿಕೊಂಡಿದ್ದಾರೆ.

ಒಂದು ರೀತಿಯಲ್ಲಿ ನಾಗಭೂಷಣ ಅವರೊಂದಿಗಿನ ನನ್ನ ಮದುವೆ ಈತನಕ ನಾನರಿಯದಿದ್ದ ಲೋಕದೊಳಗೆ ಪ್ರವೇಶ ಮಾಡಲು ಅವಕಾಶ ಮಾಡಿಕೊಟ್ಟಿತು. ಭಿನ್ನ ಹಿನ್ನೆಲೆಯ ಶೂದ್ರ ಸಮುದಾಯದೊಂದಿಗೆ ಆತ್ಮೀಯವಾಗಿ ಬೆರೆಯಲು, ಅವರನ್ನು ಅರಿಯಲು ಒಂದು ಸುಸಂದರ್ಭ ಒದಗಿಸಿಕೊಟ್ಟಿದೆ. ಇವರಲ್ಲೂ ಬಹಳಷ್ಟು ಜನ ನಮ್ಮಂತೆಯೇ ಪ್ರೀತಿಸಿ ಅಂತರ್ಜಾತೀಯ ವಿವಾಹವಾದವರು. ನಾಗಭೂಷಣರು ಜಗಳಗಂಟರೆಂದು ಪ್ರಸಿದ್ಧರಾದರೂ, ಅವರ ಜಗಳಗಂಟತನವನ್ನು ಸಹಿಸುವ ಶಕ್ತಿಯನ್ನು ಅವರೇ ಅವರ ಗೆಳೆಯರಿಗೆ ಪ್ರದಾನ ಮಾಡಿದ್ದಾರೆನ್ನಿಸುತ್ತದೆ, ಅವರ ಗೆಳೆಯರ ವಿಶಾಲ ಗುಂಪನ್ನು ನೋಡಿದಾಗ. ಇವರಲ್ಲಿ ಸಾಹಿತಿ, ಸಮಾಜವಾದಿ ಮಿತ್ರರೇ ಹೆಚ್ಚು. ಹೀಗಾಗಿ ನಾನು ಕವಯತ್ರಿಯಾಗಿ ಬೆಳೆಯಲೂ ಒಳ್ಳೆಯ ವಾತಾವರಣ ಲಭಿಸಿತು.

ಭಿನ್ನ ಸಂಸ್ಕೃತಿಯ ಹಿನ್ನೆಲೆ ಹೊಂದಿರುವ ನಮ್ಮಿಬ್ಬರ ನಡುವೆ ಎಲ್ಲ ಗಂಡ–ಹೆಂಡಿರ ನಡುವೆ ಇರುವಂತೆ ಭಿನ್ನಾಭಿಪ್ರಾಯಗಳೂ, ಪರಸ್ಪರ ದೋಷಾರೋಪಣೆಯ ಜಗಳಗಳೂ ನಡೆದಿವೆ. ಆದರೆ ಕೆಲವೇ ಘಂಟೆಗಳಲ್ಲಿ ಅದನ್ನು ಮರೆತು 'ಎಷ್ಟೊಂದು ಪ್ರೀತಿಸಿ ಮದುವೆಯಾದವರಲ್ಲವೆ ನಾವು' ಎಂದು ಅಂದುಕೊಂಡು ಅಂತಹ ಮಾತುಗಳನ್ನು ಆಡಿಯೇ ಇಲ್ಲ ಎಂಬಂತೆ ಬೆರೆತು ಒಂದಾಗಿದ್ದೇವೆ. ಈ ಹತ್ತು ವರುಷಗಳಲ್ಲಿ ನಾವಿಬ್ಬರೂ ಅನೇಕ ಒಳ್ಳೆಯ, ಕೆಟ್ಟ ಗುಣಗಳನ್ನು ಪರಸ್ಪರ ವಿನಿಮಯ ಮಾಡಿಕೊಂಡಿದ್ದೇವೆ. 'ಮಾಸ್ತಿ' ನಾಗಭೂಷಣ ಅವರ ಮೆಚ್ಚಿನ ಲೇಖಕರಾಗಿರುವುದೂ, ಕುವೆಂಪು ನನ್ನ ಮೆಚ್ಚಿನ ಲೇಖಕರಾಗಿರುವುದೂ ಏನನ್ನು ಸೂಚಿಸುತ್ತದೆಯೋ ನಾನರಿಯೆ!

ನನ್ನ ಮಟ್ಟಿಗಂತೂ ನಾನು ನಾಗಭೂಷಣ ಅವರನ್ನು ಮದುವೆಯಾಗಲು ನಿರ್ಧರಿಸಿದ್ದು ನನ್ನ ಜೀವನದ ಅಮೂಲ್ಯ ನಿರ್ಧಾರ. ನನಗೆ ಅಪಾರ ಸ್ವಾತಂತ್ರ್ಯ ಕೊಟ್ಟು ನನ್ನಲ್ಲಿ ವಿಶ್ವಾಸವಿಟ್ಟು ನಾನು ಇಂತಹ ನಿರ್ಧಾರ ತೆಗೆದುಕೊಳ್ಳಲು ಪರೋಕ್ಷವಾಗಿ ಕಾರಣರಾದ ನನ್ನ ತಂದೆ–ತಾಯಿಗೆ ನಾನು ಎನಿತು ಋಣಿಯಾಗಿದ್ದರೂ ಸಾಲದು. ನಾನು ಪುರಾಣದ ರೂಪದಲ್ಲಿ ಬರೆದಿರುವ ಈ ಕಥನವನ್ನು ಸಂಕ್ಷಿಪ್ತಗೊಳಿಸಿ, ಎರಡೇ ವಾಕ್ಯಗಳಲ್ಲಿ ಹೇಳುವುದಾದರೆ –

**ಯಾವ ಜನ್ಮದ ಮೈತ್ರಿ ಈ ಜನ್ಮದಲ್ಲಿ ಬಂದು**
**ನಮ್ಮಿಬ್ಬರನು ಮತ್ತೆ ಬಂಧಿಸಿಹುದೊ...ಕಾಣೆ...ನಾ...**

('ಮಾನವ ಮಂಟಪ'ದ ಆಶ್ರಯದಲ್ಲಿ ಮೇ ೨೨, ೧೯೯೭ರಂದು ಬೆಂಗಳೂರಿನಲ್ಲಿ ಆಯೋಜಿಸಲಾಗಿದ್ದ ಅಂತರ್ಜಾತಿ ವಿವಾಹಿತರ ಮೊದಲ ರಾಜ್ಯ ಸಮಾವೇಶದ ಸಂದರ್ಭದಲ್ಲಿ ಹೊರತರಲಾದ 'ಒಲವು' ಸ್ಮರಣ ಸಂಚಿಕೆಗಾಗಿ ಬರೆದ ಲೇಖನ.)

●

# ಪ್ರೇಮ... ಮಧುರಾಕ್ಷರ... ಪ್ರೇಮ ಅಜರಾಮರ...

ರೋಮ್ ಸಾಮ್ರಾಜ್ಯದ ಯುಲೈಲಿಸ್ ಎಂಬ ದೊರೆ ಪ್ರೀತಿ, ಪ್ರೇಮ ಮದುವೆಗಳಿಂದ ಯುವಶಕ್ತಿ ಪೋಲಾಗಿ ಸೈನ್ಯ ಬಲ ಕುಗ್ಗುತ್ತದೆ ಎಂದು ನಂಬಿ ಅವರ ರಾಜ್ಯದಲ್ಲಿ ಮದುವೆಯಾಗುವುದೇ ಅಪರಾಧವೆಂದು ಫರ್ಮಾನು ಹೊರಡಿಸಿದನಂತೆ. ಎಲ್ಲವನ್ನು ಪ್ರೇಮದಿಂದಲೇ ಗೆಲ್ಲಬಹುದು ಎಂಬ ನಂಬುಗೆಯ ವ್ಯಾಲೆಂಟೈನ್ ಎಂಬ ಸಂತ ಅವನಿಗೆ ತಿರುಗಿ ಬಿದ್ದು ಯುವಪ್ರೇಮಿಗಳಿಗೆ ಮದುವೆ ಮಾಡಿಸುತ್ತಿದ್ದ ಕಾರಣ ಯುಲೈಲಿಸ್ ವ್ಯಾಲೆಂಟೈನ್‌ನನ್ನು ಫೆಬ್ರವರಿ ಹದಿನಾಲ್ಕರಂದು ಗಲ್ಲಿಗೇರಿಸಿದನಂತೆ... ಅದುವೇ, ಆ ದಿನವೇ ಪ್ರೇಮಿಗಳ ದಿನವಾಗಿ, ವ್ಯಾಲೆಂಟೈನ್ಸ್ ಡೇ ಆಯಿತಂತೆ...

ತೊಂಭತ್ತರ ದಶಕದಲ್ಲಿ ಇದ್ದಕ್ಕಿದ್ದ ಹಾಗೆ ಪೆಪ್ಸಿ, ಪಿಜ್ಜಾದ ಜತೆಗೆ ನಮ್ಮಲ್ಲಿಗೆ ಬಂದು ಇದೀಗ ನಮ್ಮ ಯುವಜನತೆಯ ಮಾನಸದಲ್ಲಿ ಬಲವಾಗಿ ತಳವೂರುತ್ತಿರುವ ಈ ವ್ಯಾಲೆಂಟೈನ್ ಬಗ್ಗೆ ನನಗೆ ಕುತೂಹಲ ಹುಟ್ಟಿದ್ದು ತೀರಾ ಇತ್ತೀಚೆಗಷ್ಟೇ. ಅದೂ ನಮ್ಮಲ್ಲಿ ಕೆಲವರು 'ಪ್ರೇಮಿಸುವುದನ್ನು ನಮಗೆ ಪರದೇಶಿಗಳು ಹೇಳಿಕೊಡಬೇಕಾಗಿಲ್ಲ' ಎಂಬ ಆಕ್ಷೇಪ ಎತ್ತಿದಾಗಲೇ... ಇದೇ ಆಕ್ಷೇಪವನ್ನು ಮುಂದಿಟ್ಟುಕೊಂಡು ಕೆಲವು ಕಿಡಿಗೇಡಿಗಳು ದಾಂಧಲೆ ಎಬ್ಬಿಸಿ 'ಪ್ರೇಮಿಗಳ ದಿನಚಾರಣೆ'ಗೆ ಸಂಬಂಧಿಸಿದ ಗ್ರೀಟಿಂಗ್ಸ್, ಗುಲಾಬಿ ಹೂವು, ಗಿಫ್ಟ್‌ಗಳನ್ನು ಬೀದಿಪಾಲು ಮಾಡುವ ಆಚರಣೆ ಶುರುವಾದಾಗ ನಿಜವಾಗಿಯೂ ಖಿನ್ನಳಾದೆ. ಕಾಲ–ದೇಶ–ಸನ್ನಿವೇಶ ಬದಲಾಗಿರಬಹುದು ಅಷ್ಟೇ. ನಮ್ಮಲ್ಲಿಯೂ ಯುಲೈಲಿಸ್‌ನನ್ನು ಮೀರಿಸುವ ಪ್ರತಿಭೆಗಳಿವೆ! ಜಾತಿ–ಮತಗಳೇ ನೆಪವಾಗಿ ಅದೆಷ್ಟೋ ಪ್ರೇಮಿಗಳು ಪ್ರತಿದಿನ ಪ್ರೇಮ ವಿರೋಧಿಗಳ ದುಷ್ಕೃತ್ಯಗಳಿಗೆ ಈಡಾಗುತ್ತಿರುವ ವಿದ್ಯಮಾನ ನಮಗೆ ಹೊಸದೇನೂ ಅಲ್ಲ! ನಮ್ಮಲ್ಲಿ ಪ್ರೇಮ ಎಷ್ಟು ಅಗ್ಗವೆಂದರೆ... ಈ ದುಷ್ಕೃತ್ಯಗಳನ್ನು ಖಂಡಿಸುವವರು, ಅದಕ್ಕಾಗಿ ಕಂಬನಿ ಮಿಡಿಯುವವರು ಎಲ್ಲೋ... ಅಲ್ಲೋ... ಇಲ್ಲೋ... ಒಬ್ಬರು!

ನಿಜ. 'ಪ್ರೇಮ' ಎಲ್ಲರ ಜನ್ಮಸಿದ್ಧ ಹಕ್ಕು. ಅದನ್ನು ಯಾರೂ ಯಾರಿಗೂ ಹೇಳಿಕೊಡಬೇಕಾಗಿಲ್ಲ. ನೂರಾ ಹತ್ತು ಕೋಟಿ ಜನಸಂಖ್ಯೆ ದಾಟುತ್ತಿರುವ ನಾವಂತೂ ಅದಾಗಲೇ ಪ್ರೇಮದ ಹೊರೆಯಿಂದ ತತ್ತರಿಸುತ್ತಿದ್ದೇವೆ! 'ಪ್ರೇಮ'ವನ್ನು ಪರದೇಶಗಳಿಂದ ಆಮದು ಮಾಡಿಕೊಳ್ಳುವ ದುಸ್ಥಿತಿಯಲ್ಲಂತು ನಾವಿಲ್ಲ! ಆದರೆ ಅದೇ ಹೊತ್ತಿಗೆ 'ಪ್ರೇಮ' ಸ್ವದೇಶಿಯೂ ಅಲ್ಲ ವಿದೇಶಿಯೂ ಅಲ್ಲ... ಅದು ನೀರಿನಂತೆ. ಅದರ ರುಚಿ, ಬಣ್ಣ, ವಾಸನೆ

ಜಗತ್ತಿನಾದ್ಯಂತ ಒಂದೇ. ಇಡೀ ಭೂಮಂಡಲದ ಮೇಲೆ ಕವುಚಿಕೊಂಡ ಪ್ರೇಮಚಂದ್ರಮನ ಪ್ರಭೆ ಆ ತುದಿಯಿಂದ ಈ ತುದಿಯವರೆಗೆ ಒಂದೇ ಎಂದು ಈ ತಿಳಿಗೇಡಿಗಳಿಗೆ ಹೇಗೆ ತಿಳಿಯಹೇಳುವುದು? ನಮ್ಮ ಭಾರತೀಯ ಪ್ರೇಮಿಗಳ ಸಂವೇದನೆಯಲ್ಲಿ ಬೆರೆತು ಹೋಗಿರುವ ರೋಮಿಯೋ–ಜೂಲಿಯೆಟ್, ಲೈಲಾ–ಮಜನೂ ಇವರನ್ನು ವಿದೇಶಿ ಎಂದು ಪರಿಗಣಿಸುವುದು ಸಾಧುವೆ?

ಇನ್ನು ನಮ್ಮವರೇ ಆದ ಶಿವ, ಪಾರ್ವತಿ, ಕೃಷ್ಣ–ರಾಧೆ, ಅಕ್ಕಮಹಾದೇವಿ, ಶಾಕುಂತಲೆ, ಮೀರಾ ಯಾಕೆ ವ್ಯಾಲೆಂಟೈನ್‌ನಂತೆ ಪ್ರೇಮದ ಪ್ರತೀಕಗಳಾಗಿ ನಮ್ಮ ಇಂದಿನ ಯುವಜನತೆಯನ್ನು ಸೆಳೆಯುತ್ತಿಲ್ಲ ಎಂಬ ಪ್ರಶ್ನೆಗೆ ಬಂದರೆ... ಅವು ಕೇವಲ ಮನುಷ್ಯರಾಗದೆ ದೈವತ್ವಕ್ಕೇರಿ ಅನುಕರಿಸಲಸಾಧ್ಯವಾದ ಪ್ರತೀಕಗಳು ಎಂಬ ಸಂದೇಶ ರವಾನಿಸಿದ್ದರಿಂದಲೇ ಇರಬಹುದು!

ಅಷ್ಟೇ ಅಲ್ಲ, ಈ ರಾಮ, ಕೃಷ್ಣ, ಶಿವ... ಮುಂತಾದವರು ಕಲ್ಲುದೇವರುಗಳಾಗಿ ಗುಡಿ ಗುಂಡಾರಗಳಲ್ಲಿ ಬಂಧಿತರಾಗಿ ಹಳೆಯ ಯುಗಕ್ಕೆ ಸಂದು ಹೋಗಿರುವುದರಿಂದಲೋ ಅಥವಾ ಮೂಳೆ–ಮಾಂಸ–ಮಜ್ಜೆಯ ಪ್ರೇಮವೇ ಪ್ರಧಾನವಾಗಿ ಪ್ರೇಮವನ್ನು ತಪಸ್ಸಿನಂತೆ ಪರಿಭಾವಿಸುವ ಮನೋಸ್ಥಿತಿಯನ್ನು ದಾಟಿ ಹೋಗಿರುವುದರಿಂದಲೋ–

**ನೀನು ತಿರುಗಿ ಬರುವೆ ಅಂತ**
**ಕರಗದೆ ಕಾಯುತ್ತದೆ ಈ ನೂರು ಮಂಜಿನ ಬೆಟ್ಟ**
**ಅಲ್ಲಿ ಕೊರೆವ ಗವಿ ಕತ್ತಲಿನಲ್ಲಿ**
**ಅರಳುತ್ತಲೇ ಇರುತ್ತವೆ ನೀಲಿ ಮಂಜು ತಾವರೆ**
**ಕೈಯ ಕೊಳ್ಳಿ ಮಾಡಿ**
**ಜೀವದೆಣ್ಣೆ ಬತ್ತಿ ದೀಪಗಳ**
**ಉರಿಸುತ್ತ ಕಣ್ಣಲ್ಲಿ ಸುತ್ತ**
**ನಿನ್ನ ಬರವಿನ ಹಗಲು ಇರುಳಿನ**
**ಗೆಜ್ಜೆಯುಲಿವಿಗೆ ಹೆಜ್ಜೆಗಳನಿಕ್ಕುತ್ತ...**
**ಕಾದಿರುವೆ ಕಾದಲೆ ನಿನಗಾಗಿ,**
**ಮರುಭೂಮಿ ಹಿಮರಾಶಿ**
**ಸುಡುಗಾಡುಗಳ ಜೊತೆಗೆ**

ಎನ್ನುವ ಶಿವನ ತತ್ಪತರತೆಯಾಗಲಿ, ಶಿವನ ಒಂದು ನೋಟಕ್ಕಾಗಿ ನಿದ್ರಾಹಾರಗಳನ್ನು ತ್ಯಜಿಸಿ ತಪಸ್ಸು ಮಾಡಿದ ಗಿರಿಜೆಯ ಏಕಾಗ್ರತೆಯಾಗಲಿ, ನಿಂದನೆಯ ನುಡಿಗಳಿಗೆ ತನ್ನನ್ನೆ ತಾ ಕೊಟ್ಟುಕೊಂಡು–

**ಹೊಳೆಯೊಳು ಹೊತ್ತಾರೆ**
**ಧುಮುಕಿ ನಾ ಸತ್ತಾರೆ**
**ಹೊಂದೆನೇ ಅವನ ಹೊಂದೇನೆ?**

ಎಂಬ ರಾಧೆಯ ದನಿಯೊಳಗಣ ತಪ್ತತೆಯಾಗಲಿ;

**ಇಹಕೊಬ್ಬ ಗಂಡನೆ? ಪರಕೊಬ್ಬ ಗಂಡನೆ?**
**ಲೌಕಿಕಕೊಬ್ಬ ಗಂಡನೆ? ಪಾರಮಾರ್ಥಕೊಬ್ಬ ಗಂಡನೆ?**
**ನನ್ನ ಗಂಡ ಚೆನ್ನಮಲ್ಲಿಕಾರ್ಜುನ ದೇವರಲ್ಲದೆ**
**ಮಿಕ್ಕಿದ ಗಂಡರೆಲ್ಲ ಮುಗಿಲ ಮರೆಯ ಬಣ್ಣದ ಬೊಂಬೆಯಂತೆ**

ಎಂದ ಅಕ್ಕನ ನುಡಿಗಳ ನಿರ್ಭಯತೆಯಾಗಲಿ... ಇವುಗಳಲ್ಲಿ ಒಂದಂಶವೂ ನಮ್ಮ ಇಂದಿನ ಅನೇಕ ಹುಡುಗ–ಹುಡುಗಿಯರಿಗೆ ಮಹತ್ವದ್ದು ಎಂದು ಅನ್ನಿಸದಿರುವುದಕ್ಕೆ ಕಾರಣವಿರಬಹುದು ಎಂದು ಊಹಿಸಬಹುದಾಗಿದೆ!

ಅಪ್ಪ–ಅಮ್ಮ ಇಬ್ಬರೂ ದುಡಿಮೆಗೆ ತಮ್ಮನ್ನೇ ತಾವು ತೆತ್ತುಕೊಂಡಿರುವ ಈ ದಿನಗಳಲ್ಲಿ ಚಿಕ್ಕ ಚಿಕ್ಕ ಹುಡುಗ–ಹುಡುಗಿಯರೂ ಕೂಡ ನೂರಾರು ರೂಪಾಯಿಗಳನ್ನು ಹೂವಿನ ಬೊಕೆ, ರಂಗುರಂಗಿನ ಕಾರ್ಡು, ಹೋಟೆಲಿನಲ್ಲಿ ಪಾರ್ಟಿ, ವ್ಯಾಲೆಂಟೈನ್ಸ್ ಡೇ ಗೆಂದೇ ಸಿದ್ಧಗೊಂಡು ಮಾರುಕಟ್ಟೆಗೆ ಬಿಡುಗಡೆಯಾಗಿ ಬರುವ ಹಸಿರು, ಕೆಂಪು, ನೀಲಿ, ಬಿಳಿ ಉಡುಗೆ– ತೊಡುಗೆಗಳಿಗಾಗಿ ಸುರಿಯಲು ಶಕ್ತರಾಗಿರುವುದರಿಂದ 'ವಿಲ್ ಯು ಬಿ ಮೈ ವ್ಯಾಲೆಂಟೈನ್' ಎಂಬ ಪ್ರಶ್ನೆ ಎಸೆದು ಕ್ಷಣ ಮಾತ್ರದಲ್ಲಿ ಉತ್ತರ ನಿರೀಕ್ಷಿಸಿ 'ಎಸ್' ಎಂದರೆ ಜೊತೆಗೆ ನಡೆದು 'ನೋ' ಎಂದರೆ 'ಬಾಯ್ ಬಾಯ್' ಎಂದು ಸುಲಭವಾಗಿ ನಡೆದು ಹೋಗುವ ಅರ್ಥಾತ್ use and throw ಸಂಸ್ಕೃತಿಗೆ ಈಡಾಗುತ್ತಿರುವರೇ ಎಂಬ ಆತಂಕ ಉಂಟಾಗುತ್ತದೆ.

ದಿನಗಟ್ಟಲೆ ಕಾದು ಸಿಕ್ಕ ಅರೆಕ್ಷಣಗಳ ಅವಧಿಯಲ್ಲೇ... 'ತುಟಿಯ ಮೇಲೆ ತುಂಟ ಕಿರುನಗೆ, ಕೆನ್ನೆ ತುಂಬಾ ಕೆಂಡಸಂಪಿಗೆ'; 'ನಿಲ್ಲು ನೀ... ನಿಲ್ಲು ನೀ... ನೀಲವೇಣಿ...' ಮುಂತಾದ ಪುರಾತನ ಕಾಲದ ಹಾಡುಗಳನ್ನು ನಿವೇದಿಸಿ, ಒಂದು ಕಿರುನಗೆಯಿಂದಲೇ ಪುನೀತರಾಗುತ್ತಿದ್ದ ಹುಡುಗರ ಸೂಕ್ಷ್ಮ ಸಂವೇದನೆಗಳು ಈಗ ಡಬ್ಬ ಸೇರಿವೆ! ಮೈಲಿಗಟ್ಟಲೆ ನಡೆದು ಹುಡುಗಿಯನ್ನು ಹಿಂಬಾಲಿಸುವ, ಕೇವಲ ಒಂದು ಪ್ರೇಮಪೂರಿತ ನೋಟಕ್ಕಾಗಿ ಹುಡುಗಿ ಕಾತರಿಸುವ ಕಾಲ ಇದಲ್ಲ. ಹೇಳಿಕೇಳಿ ಇದು ವೇಗದ ಯುಗ. ಮೋಬೈಕಿನ ಅಬ್ಬರದ ಆರ್ಭಟದಲ್ಲಿ ಸೂಕ್ಷ್ಮವಾದುದೇನಾದರೂ ಕೇಳುವುದು–ಕಾಣುವುದು ಸಾಧ್ಯವೆ? ಮಣಗಟ್ಟಲೆ ಕಾಗದದ ಮೇಲೆ ಪ್ರೇಮಧಾರೆ ಹರಿಸಿ ಪ್ರೇಮ ನಿವೇದಿಸಿಕೊಳ್ಳುವಷ್ಟು ಪುರುಸೊತ್ತು ಈಗಿಲ್ಲ. ಇಂಟರ್‌ನೆಟ್ ಮೂಲಕ ಮದುವೆ, ಎಸ್.ಎಮ್.ಎಸ್‌ನ ಮೂಲಕ ಬಿಡುಗಡೆ... ಇವೆಲ್ಲಾ... ನನ್ನಂತಹವರಿಗೆ, ನಾವು ಹಳೆಯ ಕಾಲಕ್ಕೆ ಸಂದು ಹೋಗಿಬಿಟ್ಟಿರುವೆನೆ ಎಂಬ ಅನುಮಾನ ಮೂಡಿಸತೊಡಗಿವೆ!

ಹತ್ತು-ಹದಿನೈದು ವರುಷದ ಹಿಂದಿನ ಮಾತು. ಹುಡುಗಿಯೊಬ್ಬಳನ್ನು ಕಂಡಾಪಟ್ಟೆ ಪ್ರೀತಿಸಿದ ನನ್ನ ಪರಿಚಯದ ಹುಡುಗನೊಬ್ಬ ಹಲವಾರು ಗ್ರಂಥಾಲಯಗಳನ್ನು ತಡಕಾಡಿ ಖಲೀಲ್ ಗಿಬ್ರಾನನ ಈ ಸಾಲುಗಳ ಮೂಲಕ ಆಕೆಗೆ ಪ್ರೇಮ ಸಂದೇಶವನ್ನು ರವಾನಿಸಿದ್ದ.

**ಪ್ರೇಮ ನಮ್ಮನ್ನು ಸೇರಿಸಿತು**
**ಇನ್ನು ಯಾರು ತಾನೆ**
**ನಮ್ಮನ್ನು ಅಗಲಿಸಬಲ್ಲರು?**
**ಮೃತ್ಯು ನಮ್ಮನ್ನು ಒಯ್ದಿದೆ**
**ಇನ್ನು ಯಾರು ತಾನೆ**
**ಹಿಂದಕ್ಕೆ ಕರೆತರಬಲ್ಲರು?**

ಮತ್ತೆಂದೋ, ಮತ್ತೆಲ್ಲೊ ಸಿಕ್ಕಿದ ಅದೇ ಹುಡುಗ 'ಅಕ್ಕಾ... ನನ್ನ ಪ್ರೇಮ ವಿಫಲವಾಯಿತು, ಆದರೇನಂತೆ ಗಿಬ್ರಾನನನ್ನು ಓದಿ ನನ್ನ ವ್ಯಕ್ತಿತ್ವ ಸಂಪನ್ನವಾಯಿತು' ಅಂದ. ನಾನು–

**ಒಲುಮೆ ಚೇಳು ಸಕ್ಕರೆಯದು**
**ಕಚ್ಚಿದರೂ ಅಲ್ಲ ಕಹಿ;**
**ಆದರ ಕೊಂಡಿ ಅಕ್ಕರೆಯದು**
**ಚುಚ್ಚಿದರೂ ಬೆಲ್ಲ ಸಿಹಿ!**

ಎಂಬ ಕವಿತೆಯ ಸಾಲುಗಳನ್ನು ಉದ್ಧರಿಸಿ ಈ ಬಾರಿ ರೂಮಿಯನ್ನು ಓದು, ಮತ್ತಷ್ಟು ಸಂಪನ್ನನಾಗುತ್ತೀಯಾ ಎಂದು ಹೇಳಿ ಕಳಿಸಿದೆ!

ಪ್ರೇಮಕ್ಕೆ ಮುಗಿತಾಯವೆಂಬುದು ಇಲ್ಲ. ಅದು ಪ್ರತಿ ರಾತ್ರಿಯ ನಿದ್ದೆ-ಎಚ್ಚರಗಳ ನಡುವಿನ ಸುಂದರ ಸ್ವಪ್ನ. ಈ ಹೊತ್ತಿಗದು 'ಅಣು ರೇಣುವಿನಷ್ಟು ಸೂಕ್ಷ್ಮವಾಗಿ, ಶಿವ ಶಿವೆಗಿತ್ತ ಭಸ್ಮವಾಗಿ' ಉಳಿದಿಲ್ಲದಿರಬಹುದು. ಆದರೆ ಅದುವೆ ಚಂದದ ಕೆಂಪು ಗುಲಾಬಿಯ ರೂಪದಲ್ಲಿ ನಮ್ಮ ಹುಡುಗ-ಹುಡುಗಿಯರ ಕೈಯಲ್ಲಿ ನಲಿದಾಡುತಿರುವುದು.

'ಹಗೆಯೆಂದು ಬಗೆದವರೆಷ್ಟೋ ಮಂದಿ ಮುಟ್ಟಿ ಮನುಷ್ಯರಾಗಿದ್ದಾರೆ ಪ್ರೀತಿಯ ಆತ್ಮವನ್ನು; ಮನುಷ್ಯರಾದವರು ಮತ್ತೆ ಮತ್ತೆ ಬಿತ್ತಿ ಬೆಳೆಯುತ್ತಲೇ ಇರುವರು ಪ್ರೀತಿಯನ್ನು...' ಹೀಗಿರುವಾಗ ಪ್ರೇಮ ಎಂಬ ಎರಡಕ್ಷರ ಅಂದಿಗೂ ಇಂದಿಗೂ ಎಂದಿಗೂ ಮಧುರಾಕ್ಷರ... ಪ್ರೇಮ ಅಜರಾಮರ...

---

* **ಈ ಲೇಖನದಲ್ಲಿ ಕುವೆಂಪು, ಬೇಂದ್ರೆ, ಎಚ್.ಎಸ್. ಶಿವಪ್ರಕಾಶ್, ಸವಿತಾ, ಖಲೀಲ್ ಗಿಬ್ರಾನ್, ಅಕ್ಕಮಹಾದೇವಿ –ಇವರ ಕವಿತೆಗಳ ಕೆಲಸಾಲುಗಳನ್ನು ಕೃತಜ್ಞತೆಯಿಂದ ಬಳಸಿಕೊಳ್ಳಲಾಗಿದೆ.**

(ಉದಯವಾಣಿ ಮ್ಯಾಗಸಿನ್ ವಿಭಾಗ, ಫೆಬ್ರುವರಿ ೧೩, ೨೦೦೫)

# ಹೂ ಮನಸ್ಸಿನ ಹೋರಾಟಗಾರ: ಕಿಷನ್ ಪಟ್ನಾಯಕ್

೧೯೮೬ರ ಆಸುಪಾಸು. ಅದೇ ತಾನೆ ಸಾಹಿತ್ಯಲೋಕಕ್ಕೆ ಕಣ್ಣು ತೆರೆಯತೊಡಗಿದ್ದ ನಾನು ಲಂಕೇಶ್ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಲೋಹಿಯಾ ಕುರಿತ ಪುಟ್ಟ ಟಿಪ್ಪಣಿಯಿಂದ ಆಕರ್ಷಿತಳಾಗಿದ್ದೆ. ನನ್ನನ್ನು ಲೋಹಿಯಾ ಅವರ ವಿಚಾರಧಾರೆಯತ್ತ ಸೆಳೆದದ್ದು ಅವರು ಹಿರಿಯ ಸಮಾಜವಾದಿ ಎಂದಾಗಲಿ ಪ್ರಖರ ಬುದ್ಧಿಜೀವಿ ಎಂದಾಗಲಿ ಅಲ್ಲ! ಬದಲಾಗಿ ಆ ಟಿಪ್ಪಣಿಯಲ್ಲಿ ಉಲ್ಲೇಖಿಸಲಾಗಿದ್ದ ಲೋಹಿಯಾ ಅವರು ತಮ್ಮ ಗೆಳತಿ ರೋಮಾ ಮಿತ್ರಾಗೆ ಬರೆದ ಪತ್ರದ ತುಣುಕುಗಳು:

"ನಿನ್ನ ಚಪ್ಪಲಿ ಮತ್ತು ಇತರ ವಸ್ತುಗಳು ನನ್ನ ನೆನಪಿನಲ್ಲಿದ್ದವು. ಅದಕ್ಕಾಗಿ ಇಂದಿನ ದಿನವನ್ನು ಒಳ್ಳೆಯ ಕೆಲಸಕ್ಕಾಗಿ ಉಪಯೋಗಿಸುವ ಮನಸ್ಸಾಗಿ ನಿನಗೊಂದು ಜತೆ ಚಪ್ಪಲಿಯನ್ನು ಕೊಂಡ ಸಮಾಧಾನ. ಇಂತಹ ಸಮಾಧಾನ ನನಗೆ ಯಾವುದೇ ದೇಶದ ಮಾತ್ರವಲ್ಲ ಇಡೀ ಪ್ರಪಂಚದ ಅತ್ಯಂತ ಬಲಾಢ್ಯ ವ್ಯಕ್ತಿಯನ್ನು ಭೇಟಿಯಾದ ತೃಪ್ತಿಗಿಂತಲೂ ದೊಡ್ಡದು." *(೪ ನವೆಂಬರ್, ೧೯೬೧ರಲ್ಲಿ ಕೈರೋನಿಂದ ರೋಮಾಗೆ ಬರೆದ ಪತ್ರ.)*

"ಹೆಣ್ಣು ಸಮರ್ಥಳಾಗುವುದನ್ನು ಕಂಡು ಗಂಡು ಸಾಮಾನ್ಯವಾಗಿ ಹೆದರಿಕೊಳ್ಳುತ್ತಾನೆ. ನನ್ನ ಒಲವು ತದ್ವಿರುದ್ಧ." *(೯ ಮಾರ್ಚ್, ೧೯೬೧ರಲ್ಲಿ ರೋಮಾ ಮಿತ್ರಾಗೆ ಬರೆದ ಪತ್ರ.)*

ಲೋಹಿಯಾ ಅವರ ಪತ್ರದ ತುಣುಕುಗಳು ನನ್ನಲ್ಲಿ ಲೋಹಿಯಾ ಅವರನ್ನು ವಿಸ್ತೃತವಾಗಿ ಓದಬೇಕೆಂಬ ಆಸೆಯನ್ನು ಉದ್ದೀಪಿಸಿತ್ತು. ಆದರೆ ಅವರ ಪುಸ್ತಕಗಳನ್ನು ಪಡೆದುಕೊಳ್ಳುವಲ್ಲಿ ಶಿವಮೊಗ್ಗೆಯ ಗ್ರಂಥಾಲಯವನ್ನು ತಡಕಾಡಿದರೂ ಸಫಲಳಾಗಿರಲಿಲ್ಲ. ಲೋಹಿಯಾ ಅವರನ್ನು ಅರಿಯುವ ಹಂಬಲ ಹಂಬಲವಾಗಿಯೆ ಉಳಿದಿದ್ದ ಸಮಯದಲ್ಲಿ ಯೋಗಾನುಯೋಗವೊ ಎಂಬಂತೆ ಆ ಕಾಲದಲ್ಲಿ ಪ್ರಖರ ಲೋಹಿಯಾವಾದಿಯಾಗಿದ್ದ ನಾಗಭೂಷಣ ಅವರನ್ನು ಮದುವೆಯಾಗುವ ಸಂದರ್ಭ ಒದಗಿ ಬಂತು. ಗಾಂಧಿಯನ್ನು ಅಲ್ಪಸ್ವಲ್ಪ ಓದಿಕೊಂಡಿದ್ದ ನನಗೆ ಆಗ ಬೇರಾವ ವಾದದ ಪರಿಚಯವೂ ಇರಲಿಲ್ಲ. ಈ ಸಮಯದಲ್ಲೇ ನಾನು ಕಿಷನ್ ಅವರನ್ನು ಭೆಟ್ಟಿಯಾದದ್ದು – ೧೯೮೫ರಲ್ಲಿ.

ಚನ್ನಪಟ್ಟಣ ಸಮೀಪದ ಅರಳಾಳುಸಂದ್ರದಲ್ಲಿ ಸಮಾಜವಾದಿ ಶಿಬಿರದಲ್ಲಿ ಭಾಗವಹಿಸಿದ ಸಂದರ್ಭವದು. ಕಿಷನ್ ಅವರು ಹಿರಿಯ ಸಮಾಜವಾದಿಯೆಂದೂ, ಲೋಹಿಯಾ ಅವರ

ನಿಕಟವರ್ತಿಯೆಂದೂ, ಘನತೆವೆತ್ತ ವ್ಯಕ್ತಿಯೆಂದೂ ಆದಾಗಲೇ ನಾಗಭೂಷಣ ಅವರಿಂದ ಅವರ ಬಗ್ಗೆ ಸಾಕಷ್ಟು ಕೇಳಿದವಳಾಗಿದ್ದೂ, ಸಮಾಜವಾದದ ಬಗ್ಗೆ ಏನೇನೂ ಕಲ್ಪನೆ ಇರದಿದ್ದ ನನಗೆ ಅವರನ್ನು ಭೇಟಿಯಾಗುವ ಉತ್ಸುಕತೆಯೇನೂ ಇರಲಿಲ್ಲ. ಅವರಿಗೆ ಕನ್ನಡ ಬೇರೆ ಬರುವುದಿಲ್ಲವೆಂದು ಹೇಳಿದ್ದರಿಂದ ಮತ್ತು ಇಂಗ್ಲೀಷು–ಹಿಂದಿಯಲ್ಲಿ ಮಾತನಾಡುವಷ್ಟು ಧೈರ್ಯ, ಕುಶಲತೆ ನನ್ನಲ್ಲಿ ಇರಲಿಲ್ಲವಾದದ್ದರಿಂದ ಅವರನ್ನು ಹೇಗೆ ಎದುರುಗೊಳ್ಳುವುದು ಎಂದು ಒಳಗೊಳಗೆ ಚಿಂತಿತಳಾಗಿದ್ದೆ. ಆದರೆ ನಾಗಭೂಷಣ ಅವರೊಂದಿಗೆ ನನ್ನನ್ನು ನೋಡಿದಾಕ್ಷಣ ಕಿಷನ್‌ರವರು ಪರಿಚಯದ ನಗೆ ನಕ್ಕು ತಮ್ಮನ್ನು ತಾವೇ ಪರಿಚಯಿಸಿಕೊಂಡು ನನ್ನನ್ನು ಬಹಳ ಕಾಲದಿಂದ ಬಲ್ಲವರಂತೆ ಕೈ ಕುಲುಕಿದರು. ಅಲ್ಲದೆ ಕುಟುಂಬದ ಬಗ್ಗೆ ಸಮಾಜವಾದಿಗಳ ಅವಜ್ಞೆ ಬಲ್ಲವರಾಗಿ ನನ್ನನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದೂ ನಾಗಭೂಷಣ ಅವರಿಗೆ ಕಿವಿಮಾತು ಹೇಳಿದರು. ಕಿಷನ್ ಅವರ ಈ ಮಾತುಗಳನ್ನು ಕೇಳಿ ಅಲ್ಲೇ ಜಗುಲಿಯ ಮೇಲೆ ಕುಳಿತಿದ್ದ ಅವರ ಪತ್ನಿ ವಾಣಿ ನಸುನಕ್ಕರು! ನನ್ನ ಅಳುಕು, ಆತಂಕ ಕಾವಳದಂತೆ ಕರಗಿ ಹೋಯಿತು. ರೈತಸಂಘದ ಅನಸೂಯಮ್ಮ ಅವರು ಹರಕುಮುರುಕು ಇಂಗ್ಲೀಷಿನಲ್ಲಿ ಕಿಷನ್ ಅವರೊಂದಿಗೆ ನಿರರ್ಗಳವಾಗಿ ಸಂಭಾಷಿಸುತ್ತಿದ್ದುದನ್ನು ನೋಡಿದ ಮೇಲಂತೂ ನಾನೂ ನಿಸ್ಸಂಕೋಚದಿಂದ ಮುರುಕು ಹಿಂದಿಯಲ್ಲಿ ಕಿಷನ್ ಅವರೊಂದಿಗೆ ಮಾತಿಗಿಳಿದೆ. ಆದೇ ತಾನೆ ಕವಿತೆ ಬರೆಯಲು ಶುರು ಮಾಡಿದ್ದ ನಾನು, ಕವಿಯೆಂದೂ ಧಾರಾಳವಾಗಿ ಪರಿಚಯಿಸಿಕೊಂಡೆ!!

ಆ ದಿನ ಸಭೆಯಲ್ಲಿ ಕಿಷನ್‌ರವರು ಸವಿಸ್ತಾರವಾಗಿ ಗ್ರಾಮಪರಿಸರ ಕುರಿತು ಮಾತನಾಡಿದ ನೆನಪು. ಅವರ ಭಾಷಣದಿಂದ ನಾನೆಷ್ಟು ಪ್ರಭಾವಿತಳಾದೆನೆಂದರೆ... ಮುಂದಿನ ವರುಷ ಅರಳಾಳುಸಂದ್ರದಲ್ಲಿ ಗಿಡನೆಡುವ ಕಾರ್ಯಕ್ರಮ ಹಾಕಿಕೊಳ್ಳೋಣ, ನಾನೂ ಖಂಡಿತ ಬರುವೆ ಎಂದು ಅನಸೂಯಮ್ಮನಿಗೆ ವಚನವಿತ್ತೆ! ಆ ರಾತ್ರಿ ನಾವು ಅನಸೂಯಮ್ಮ ಅವರ ಮನೆಯಲ್ಲೇ ತಂಗಿದ್ದೆವು. ಅವರಿಂದ ರೈತಸಂಘದ ಹೋರಾಟದ ಕತೆಗಳನ್ನು ಕೇಳಿ ರೋಮಾಂಚಿತಳಾದೆ. ಅವರ ಮಾತುಗಳಿಗೆ ತೆರೆದುಕೊಳ್ಳುತ್ತಾ ಎಷ್ಟೊಂದು ಒಳ್ಳೆಯ ದಾರಿಗಳಿವೆ... ನಾನೇಕೆ ಈ ದಾರಿಗೆ ತಡವಾಗಿ ಬಂದೆ ಎಂದು ನನಗೆ ನಾನೇ ಕೇಳಿಕೊಂಡೆ. ಮಾರನೆಯ ದಿನದ ಸಭೆಯಲ್ಲಿ ಯಾವುದೋ ವಿಷಯ ಕುರಿತು ಬಿಸಿಬಿಸಿ ಚರ್ಚೆ ಶುರುವಾಗಿ ಸಮಾಜವಾದಿಗಳ ಸಿಟ್ಟು, ಸೆಡವು, ಜಗಳಗಂಟತನದ ಪರಿಚಯವೂ ಆಯಿತು. ಕೆ. ರಾಮ್‌ದಾಸ್, ರವಿವರ್ಮ ಕುಮಾರ್, ಆರ್.ಪಿ. ವೆಂಕಟೇಶಮೂರ್ತಿ ಮೊದಲಾದವರನ್ನು ಮೊಟ್ಟಮೊದಲ ಬಾರಿ ನೋಡಿದ್ದೇ ಅಲ್ಲಿ. ಮಾತು ಜಗಳವಾಗಿ ಜಗಳ ಕದನವಾಗಿ ಇನ್ನೂ ಏನೇನೋ ಆಗುತ್ತಿರುವುದನ್ನು ಕಣ್ಣಾರೆ ಕಂಡು ಗಾಬರಿಯಾದೆ. ಕಿಷನ್ ಮಾತ್ರ ಇದೆಲ್ಲಾ ಸಹಜವೆಂಬಂತೆ ಮೌನವಾಗಿ ಕುಳಿತು ಇದನ್ನೆಲ್ಲಾ ವೀಕ್ಷಿಸುತ್ತಿದ್ದರು. ಸ್ವಲ್ಪ ಸಮಯದಲ್ಲೆ, ಕದನ ನಿಲುಗಡೆಗೆ ಬಂದು ಎಲ್ಲಾ ರಾಜಿಯಾಗಿ ಕನಸುಗಳನ್ನು ಹೆಣೆಯ ತೊಡಗಿದ್ದರು. ಕೋಪದ ಜಾಗದಲ್ಲಿ ಪರಿತಾಪ, ಜಗಳದ ಜಾಗದಲ್ಲಿ ಪಶ್ಚಾತ್ತಾಪ, ಹೊಸ

ಆಶೆ, ನಿರೀಕ್ಷೆ, ಭರವಸೆಯ ಮಾತುಗಳಾಗಿ ರೂಪಾಂತರಗೊಂಡು ಮತ್ತೆ ಪರಸ್ಪರ ಭೆಟ್ಟಿಯಾಗುವ ವಾಗ್ದಾನದೊಂದಿಗೆ ಶಿಬಿರ ಮುಕ್ತಾಯವಾದರೂ, ಸಮಾಜವಾದದೊಂದಿಗಿನ ನನ್ನ ಒಡನಾಟ ಅಲ್ಲಿಂದ ಆರಂಭವಾಗಿತ್ತು. ಅನತಿಕಾಲದಲ್ಲೇ ಮತ್ತೊಂದು ಶಿಬಿರ ದಲಿತ ಸಂಘರ್ಷ ಸಮಿತಿಯ ವತಿಯಿಂದ ಕೆಮ್ಮಣ್ಣುಗುಂಡಿಯಲ್ಲಿ ಆಯೋಜಿಸಲ್ಪಟ್ಟಿತ್ತು. ಆ ಶಿಬಿರದಲ್ಲಿ ನಾನೊಬ್ಬಳೇ ಹೆಣ್ಣುಮಗಳು, ಮಿಕ್ಕವರೆಲ್ಲಾ ನಿಗಿನಿಗಿ ಕೆಂಡದ ಕಣ್ಣುಗಳ ದಲಿತ ಹುಡುಗರು! ಬುದ್ಧ... ಗಾಂಧಿ... ಮಾರ್ಕ್ಸ್... ಲೋಹಿಯಾ... ಅಂಬೇಡ್ಕರ್... ಜಿಜ್ಞಾಸೆ ಭರದಿಂದ ನಡೆದಿತ್ತು. ಇಷ್ಟೆಲ್ಲಾ ಒಳ್ಳೆಯ ವಿಚಾರಧಾರೆಗಳಿದ್ದರೂ ಅವು ಯಾಕೆ ಸದ್ಯದಲ್ಲಿ ಚಲಾವಣೆಯಲ್ಲಿ ಇಲ್ಲ ಎಂದು ದಲಿತ ಹುಡುಗರು ಗೊಂದಲಕ್ಕೊಳಗಾಗಿದ್ದರು.

**'ಕೊಲೆ ಸುಲಿಗೆ ನಾಡಿನಲಿ ಕುಡಗೋಲು ಅತ್ಯಾಚಾರ**
**ನಾಡಲ್ಲವೋ ಇದು ವಿಷದ ಸಮುದ್ರ'**

ದಲಿತ ಸಂಘರ್ಷ ಸಮಿತಿಯ ಹುಡುಗರ ಈ ಹಾಡುಗಳು ನನ್ನ ಮುಂದೆ ಹೊಸಲೋಕವನ್ನೇ ತೆರೆದಿಟ್ಟವು. ಐದಾರು ವರುಷಗಳ ಹಿಂದೆ ನನ್ನ 'ಸ್ತ್ರೀಲೋಕ' ಕಾದಂಬರಿಯಲ್ಲಿ ಅದನ್ನು ಬಳಸಿಕೊಳ್ಳಲು ಆ ಹಾಡಿನ ಸಾಹಿತ್ಯಕ್ಕಾಗಿ ತುಂಬಾ ಹುಡುಕಾಡಿದೆ. ಅಂದಿನ ಹುಡುಗರು, ಈಗ, ಅವರಲ್ಲಿ ಅನೇಕರು ನಾಯಕರು... ಹಾಡ ಮರೆತಿದ್ದರು...

ಅರಳಾಳುಸಂದ್ರದ ಸಭೆಯ ನಂತರ ಸಮಾಜವಾದದ ಬಗ್ಗೆ ಅಲ್ಪಸ್ವಲ್ಪ ವಿಚಾರ ಅರಿತಿದ್ದ ನಾನು ಈಗ ನಾನು ಭಯಂಕರ ಪ್ರಶ್ನೆಗಳನ್ನು ಕೇಳಲು ಶುರುಮಾಡಿದ್ದೆ!

ಹೀಗೇ ಒಮ್ಮೆ ನಾಗಭೂಷಣ ಅವರಿಗೆ ಸಮಾಜವಾದ, 'ಲೋಹಿಯಾವಾದ ಅಂದರೆ ಏನ್ರೀ?' ಎಂದು ಕೇಳಿದೆ. ಜಾತಿವಿನಾಶ, ಮಾತೃಭಾಷಾ ಶಿಕ್ಷಣ, ಸ್ಥಳೀಯ ತಂತ್ರಜ್ಞಾನ, ಲಿಂಗತಾರತಮ್ಯ ನಿವಾರಣೆ... ಸರ್ವರಿಗೂ ಸಮಾನ ಅವಕಾಶ, ನೆಮ್ಮದಿಯ ಜೀವನ ಒದಗಿಸುವ ತತ್ವಜ್ಞಾನ ಎಂದೇನೋ ಹೇಳಿದರು. ನೀವೆಲ್ಲಾ ಪುಸ್ತಕ ಓದಿ, ಭಾಷಣ ಕೇಳಿ ಸಮಾಜವಾದಿ ಆಗಿರುವಿರಿ. ನಾನು ಇದಾವುದರ ಅರಿವಿಲ್ಲದೆ ಸಮಾಜವಾದಿಯಾಗಿದ್ದೇನೆ ಎಂದೆ. ಹೇಗೆ? ಎಂದರು. ನೋಡ್ರೀ... ನಾನು ಲೋಹಿಯಾ ಅವರ ಸೌಂದರ್ಯ ಮತ್ತು ಮೈಬಣ್ಣ ಓದಿಲ್ಲ! ಆದ್ರೂ ಕಪ್ಪು ಹುಡುಗನ್ನ ಮೆಚ್ಚಿ ಮದುವೆಯಾದೆ. ಜಾತಿವಿನಾಶದ ಯಾವ ಕಾರ್ಯಕ್ರಮದ ಪರಿಚಯ ಇಲ್ಲದೇನೇ ಜಾತಿ ಮೀರಿ ಅಂತರ್‌ಜಾತಿ ಮದುವೆಯಾದೆ. ನಾನು ಸಂಪೂರ್ಣ ವ್ಯವಹರಿಸೋದು ಕನ್ನಡದಲ್ಲೇ... ಕನ್ನಡದಲ್ಲೇ ಸಹಿ ಮಾಡ್ತೀನಿ. ಇದನ್ನೆಲ್ಲಾ ಸಮಾಜವಾದ, ಲೋಹಿಯಾವಾದ ಅಂದ್ರೆ ಏನು ಅಂತ ಗೊತ್ತಿಲ್ಲದೇನೇ ಮಾಡಿದಿನಲ್ಲಾ ಎಂದು ಭೋಳೆ ಭೋಳೆಯಾಗಿ ವಾದಿಸಿದೆ.

ಇದನ್ನೆಲ್ಲಾ ನಾಗಭೂಷಣ ಅವರು ದೇವನೂರು ಮಹಾದೇವ ಅವರ ಹತ್ತಿರ ಕೆಮ್ಮಣ್ಣುಗುಂಡಿಯಲ್ಲಿ ಸಿಕ್ಕಾಗ ಹೇಳಿದಾಗ ಮಹಾದೇವ ಅವರು 'ಹೆಣ್ಣುಮಕ್ಕಳಿಗೆ ಹತ್ತು ಹೆಜ್ಜೆ ಇಡಲಿಕ್ಕೆ ಪ್ರೇರಣೆ ನೀಡಿದರೆ ಹತ್ತು ಮಾರು ದೂರ ಹೋಗ್ತಾರೆ' ಎಂಬರ್ಥದ ಮಾತುಗಳನ್ನು

ಹೇಳಿ ನನ್ನ ಬೆಂಬಲಕ್ಕೇ ಬಂದರು! ನನಗೆ ಖುಷಿಯಾಯಿತು! ಅದೇ ಶಿಬಿರದಲ್ಲಿ ಬಿಡುವಿನ ವೇಳೆಯಲ್ಲಿ ವಸ್ತು–ಚೈತನ್ಯ ಕುರಿತು ಬಿರುಸಿನ ಚರ್ಚೆ ಆರಂಭವಾಯಿತು. ಗೋವಿಂದಯ್ಯ, ಎಸ್. ಚಂದ್ರಶೇಖರ್, ಶಂಕರ ಲಾಳಾಪುರ, ನಾಗಭೂಷಣ, ಮಹಾದೇವ ಅವರು ಮಾತಿನ ಮತ್ತಿನಲ್ಲಿ ಮುಳುಗೇಳುತ್ತಿದ್ದರು. ನನಗೋ ತಲೆಬುಡ ತಿಳಿಯದೆ, ಗೊಂದಲ. ಅದರೆ ಚರ್ಚೆಯಲ್ಲಿ ಭಾಗವಹಿಸುವ ಆಶೆ, ಕುತೂಹಲ. ಎಲ್ಲರೂ ಮಾತಿನಲ್ಲಿ ಮುಳುಗಿರುವಾಗ ಮಹಾದೇವ ಅವರು ಈ ಬಗ್ಗೆ ನನ್ನ ಅಭಿಪ್ರಾಯ ಏನು ಎಂದು ಕೇಳುವುದನ್ನು ಮರೆಯಲಿಲ್ಲ! ನಾನು ನನ್ನದೇ ಅಳತೆಗೋಲಿನಿಂದ ಮಹಾದೇವ ಅವರ ವ್ಯಕ್ತಿತ್ವವನ್ನು ಅಳೆದು ಈ ವ್ಯಕ್ತಿ ಕೂಡ ಹೆಚ್ಚುಕಮ್ಮಿ ಕಿಷನ್ ತರಾ ಎಂದು ಅಂದಾಜು ಮಾಡಿದೆ! ಈ ಘಟಾನುಘಟಿಗಳ ನಡುವೆ ನನಗೇನು ಕೆಲಸ? ಎಂದು ಸುಮ್ಮನೆ ಕುಳಿತಿದ್ದಾಗ, ಕೆ.ಎಂ. ಶಂಕರಪ್ಪನವರು 'ಬಡ್ಡೇತವು ಏನಾರ ಮಾತನಾಡಿಕೊಳ್ಳಲಿ... ನೀನು ಅವರಿಂದ ಬಿಡಿಸಿಕೊಂಡು ಬುದ್ಧನ ದಾರಿಗೆ ಬಾರಮ್ಮ' ಎಂದು ಪಕ್ಷಾಂತರಕ್ಕೆ ಇಂಬುಗೊಟ್ಟರು. ನಾನು ಪಕ್ಷಾಂತರ ಮಾಡಿ ಶಂಕರಪ್ಪನವರ ಹತ್ತಿರ ಕಷ್ಟ–ಸುಖ ಮಾತನಾಡತೊಡಗಿದೆ... ಅವರು ನನ್ನನ್ನು ಬುದ್ಧನತ್ತ ಎಳೆದದ್ದು ಹೀಗೇ... ಅಲ್ಲೇ...

ಕಳೆದ ಇಪ್ಪತ್ತು ವರುಷಗಳ ಸಮಾಜವಾದಿಗಳೊಂದಿಗಿನ ಒಡನಾಟದಲ್ಲಿ ನಾನು ಕಂಡುಕೊಂಡ ಸರಳ ಸತ್ಯವೆಂದರೆ, ಸಮಾಜವಾದವನ್ನು ಕನಿಷ್ಟ ಮಟ್ಟದಲ್ಲಾದರೂ ಆಚರಣೆಗೆ ತಂಡದವರು ಸಮಾನತೆ ಮತ್ತು ಸ್ವಾತಂತ್ರ್ಯಕ್ಕಾಗಿ ಹಂಬಲಿಸುತ್ತಿದ್ದ ಆಯಾ ಸಮಾಜವಾದಿಗಳ ಮನೆಯ ಹೆಣ್ಣುಮಕ್ಕಳೇ...!?

ನಂತರದ ವರುಷಗಳಲ್ಲಿ ಕಿಷನ್ ಅವರನ್ನು ನಾನು ಮತ್ತೆ ಭೇಟ್ಟಿಯಾದದ್ದು ೧೯೯೧ರಲ್ಲಿ ಹಾಸನದ 'ಲೋಹಿಯಾ ನೆನಪು' ಕಾರ್ಯಕ್ರಮದಲ್ಲಿ – ತೇಜಸ್ವಿ ಅವರನ್ನು ಒಳಗೊಂಡಂತೆ ಕರ್ನಾಟಕದ ಅನೇಕ ಹಿರಿಯ ಸಮಾಜವಾದಿಗಳಾದ ಶ್ರೀ ವೀರಣ್ಣ ತಿಮ್ಮಾಜಿ, ವೈಜನಾಥ ಪಾಟೀಲ್, ಬಿ.ಆರ್. ಪಾಟೀಲ್ ಮೊದಲಾದವರು ಸೇರಿದ್ದರು. ಅಂದು ಕಿಷನ್‌ರವರು, ಮನುಷ್ಯನ ಅಗತ್ಯಗಳು ಮತ್ತು ಅವನ ಆಕಾಂಕ್ಷೆ ಕುರಿತು ಮಾಡಿದ ಭಾಷಣ ನನ್ನನ್ನು ವಿಚಲಿತಗೊಳಿಸಿತ್ತು. ಮನುಷ್ಯನ ಚಿತ್ತವೃತ್ತಿಯ ಬಗ್ಗೆ ಆಳವಾಗಿ ಆಲೋಚಿಸುವಂತೆ ಪ್ರೇರೆಪಿಸಿತ್ತು. ಓರ್ವ ಮಹಿಳೆ ಎಷ್ಟು ಸೀರೆಗಳನ್ನು ಹೊಂದಿದರೆ ಒಳ್ಳೆಯದು ಎನ್ನುವುದನ್ನು ಎಷ್ಟು convincing ಆಗಿ ಹೇಳಿದರೆಂದರೆ ನಂತರದ ವರುಷ ಗಳಲ್ಲಿ ಕೆಲಕಾಲ ನಾನು ಸೀರೆಗಳನ್ನು ಕೊಳ್ಳುವುದನ್ನೇ ನಿಲ್ಲಿಸಿದೆ.

ಕಿಷನ್‌ರವರು ಕರ್ನಾಟಕಕ್ಕೆ ಭೇಟಿಯಿತ್ತಾಗ ಒಂದೆರಡು ಸಲ ನಮ್ಮ ಮನೆಯಲ್ಲೇ ಉಳಿದುಕೊಂಡಿದ್ದರಿಂದ ತಾಸುಗಟ್ಟಲೆ ಅವರ ವಿಚಾರಗಳನ್ನು ಆಲಿಸಿದ್ದೇನೆ. ಪ್ರತಿ ಭೇಟಿಯಲ್ಲೂ ಅವರ ವಿಚಾರಗಳಿಂದ ಹೊಸದೇನನ್ನೋ ಪಡೆದಿದ್ದೇನೆ ಎಂದೇ ಅನಿಸುವುದು. ಅವರ ಸರಳತೆ, ವಿಚಾರಗಳ ಸ್ಪಷ್ಟತೆ, ಕಾವ್ಯಾತ್ಮಕ ಅಭಿವ್ಯಕ್ತಿ, ನಡೆ–ನುಡಿಗಳನ್ನು ಸಮನ್ವಯಗೊಳಿಸಿದಂತಹ ಬಿರುಕಿಲ್ಲದ ಪಾರದರ್ಶಕ ವ್ಯಕ್ತಿತ್ವ, ಖಚಿತ ನಿಲುವುಗಳು ನನ್ನ ಸೀಮಿತ ಬದುಕನ್ನು

ಸಂಪನ್ನಗೊಳಿಸಿದೆ. ಮೂರು ವರುಷದ ಹಿಂದೆ ನಾವು ಚಿತ್ರದುರ್ಗದಲ್ಲಿದ್ದಾಗ ಮೇಧಾ ಪಾಟ್ಕರ್ ಅವರನ್ನು ಭೆಟ್ಟಿಯಾಗುವ ಸಂದರ್ಭ ಒದಗಿ ಬಂದಿತ್ತು. 'ಬಸವಶ್ರೀ' ಪ್ರಶಸ್ತಿ ಪಡೆಯಲು ಬಂದಿದ್ದ ಅವರು ನಮ್ಮ ಮನೆಗೂ ಭೇಟಿ ನೀಡಿದ್ದರು. ಮಾತಿನ ನಡುವೆ ನಾಗಭೂಷಣ ಅವರು ಮೇಧಾ ಅವರ ಬಳಿ ಕಿಷನ್ ಪಟ್ನಾಯಕ್ ನಿಮಗೆ ಗೊತ್ತೆ ಎಂದು ಕೇಳಿದಾಗ; ಅವರು, ತಾನು ಕಿಷನ್ ಅವರ ಶಿಷ್ಯೆ ಎಂದು ಹೇಳಿ ನಮ್ಮನ್ನು ಚಕಿತಗೊಳಿಸಿದರು. ನಾವೆಲ್ಲ ಹೇಗೆ ಕಿಷನ್‌ಜೀ ಅವರ ಸ್ನೇಹ ತಂತುವಿನಿಂದ ಬೆಸೆಯಲ್ಪಟ್ಟಿದ್ದೇವೆ ಎಂದು ಸೋಜಿಗಪಟ್ಟೆ.

ಕಿಷನ್ ಅವರು ನವೆಂಬರ್ ೧೦, ೨೦೦೭ರಲ್ಲಿ ಶಿವಮೊಗ್ಗೆಯಲ್ಲಿ ನಾಗಭೂಷಣ ಅವರು ಕುವೆಂಪು ವಿಶ್ವವಿದ್ಯಾಲಯ ಮತ್ತು ಮೈಸೂರಿನ ರಾಮಮನೋಹರ ಲೋಹಿಯಾ ಪ್ರತಿಷ್ಠಾನದ ಸಹಯೋಗದಲ್ಲಿ ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ಆಡಿದ ಮಾತುಗಳು ಇನ್ನೂ ಕಿವಿಯಲ್ಲೇ ಇವೆ...

"ಭಾರತದಲ್ಲಿಂದು ಮತೀಯತೆ ಹೆಚ್ಚುತ್ತಿದೆ. ಸರ್ವಾಧಿಕಾರಿಗಳ ಆರ್ಭಟ ಮೇರೆ ಮೀರುತ್ತಿದೆ. ಪ್ರತಿಯೊಬ್ಬ ಭಾರತೀಯನೂ ರಾಮನಿಗೆ ವಂದಿಸಬೇಕೆಂಬ ಒತ್ತಡ ಸೃಷ್ಟಿಯಾಗುತ್ತಿದೆ. ವೈವಿಧ್ಯತೆಯೇ ಭಾರತ ದೇಶದ ಸಂಸ್ಕೃತಿ. ಇದರ ನಾಶ ಎಂದರೆ ಭಾರತದ ವಿನಾಶವೇ ಆಗಿದೆ. ಏಕ ಸಂಸ್ಕೃತಿಯ ಕೊನೆ ಕೂಡ ವಿನಾಶವೇ. ಅದು ಎಂತಹ ಬಲಾಢ್ಯ ದೇಶವನ್ನೂ ನಾಶಗೊಳಿಸುತ್ತದೆ. ರಾಮಕೃಷ್ಣ ಪರಮಹಂಸರು ಧರ್ಮ ನಿರಪೇಕ್ಷತೆಗೆ, ಸರ್ವಧರ್ಮ ಸಮಾನತೆಗೆ ಸೂಕ್ತ ಉದಾಹರಣೆ. ಅವರು ವೈಷ್ಣವರಂತೆ ಪೂಜೆ ಮಾಡಿದರು. ಮುಸ್ಲಿಮರಂತೆ ನಮಾಜು ಮಾಡಿದರು, ಆಧ್ಯಾತ್ಮಿಕತೆಯ ಏಕತೆಯ ಪ್ರತಿನಿಧಿ ಅವರು. ಧರ್ಮ ನಿರಪೇಕ್ಷತೆಯ ಪ್ರವಾದಿ..."

"ನಿನ್ನ ಒಳಿತು ನಿನ್ನಾಚೆ ಇರುವಂತಹದ್ದು, ನಿನ್ನ ಸ್ವಾರ್ಥದಿಂದಾಚೆ ಇರುವಂತಹದ್ದು ಮತ್ತು ಅದು ನೈತಿಕ ನೆಲೆಯಲ್ಲಿ ಇರುವಂತಹದ್ದು ಎಂದು ನಂಬುವುದೇ ಆಧ್ಯಾತ್ಮ. ಸೇವೆಯೇ ಅದರ ಮುಖ. ಅದರ ನೆಲೆಯಲ್ಲಿಯೇ ನಂನಮ್ಮ ಬದುಕನ್ನು ಕಟ್ಟಿಕೊಳ್ಳಬೇಕಾಗಿದೆ."

ಕಳೆದ ವರುಷ ಕಿಷನ್‌ರವರನ್ನು ಇಲ್ಲೇ ಮೈಸೂರಿನ ರೈಲ್ವೆ ನಿಲ್ದಾಣದಲ್ಲಿ ಬೀಳ್ಕೊಟ್ಟಾಗ, ಯಾಕೋ ವಯಸ್ಸಿನ ಭಾರದಿಂದ ಕೊಂಚ ನಲುಗಿದಂತೆ ಕಂಡರು. ಸಮಾಜವಾದ ಎಂಬ ಸಮ್ಮೋಹಿನಿಯ ಜೊತೆ ಬಾಳುವೆ ಮಾಡಿ "ಆಧುನಿಕ ಜಗತ್ತಿನ ಮುಂದೆ ಇರುವುದು ಎರಡೇ ಆಯ್ಕೆ, ಒಂದು ಅಣುಬಾಂಬ್ ಮತ್ತೊಂದು ಗಾಂಧಿ" ಎಂದೆನ್ನುತ್ತಲೇ ಇದ್ದಕ್ಕಿದ್ದಂತೆ ನಮ್ಮ ನಡುವೆಯಿಂದ ನಿರ್ಗಮಿಸಿರುವ ಕಿಷನ್ ಈಗ ಎಲ್ಲಿರುವರೊ? ಮತ್ತೆ ಅವರ ಭೇಟಿ ಎಂದು? ಎಲ್ಲಿ? ಯಾವಾಗ? ತಿಳಿಯದು.

('ಅಗ್ನಿ', ೨೦೦೪)

●

# ಗಿಳಿ, ಗೊರವಂಕ, ಮರಕುಟಿಗ, ಒಯ್ದು ನೀಡಿರೇ ಕಂಬನಿ ಹೂವ...

ಜನನದಲ್ಲಿ ಮರಣದಲ್ಲಿ
ಹೂವು ಜತೆಯಾಗುವುದು
ದುಃಖದಲ್ಲಿ, ಸಂತೋಷದಲ್ಲಿ
ಹೂವು ಭಾಗಿಯಾಗುವುದು
ಮಿಕ್ಕವರು ಮರಳಿದರೂ
ಹೂವು ಮಸಣದಲ್ಲಿ
ಉಳಿದೇ ಉಳಿಯುವುದು
ಅಳಿದವನ ಆತ್ಮವನ್ನು
ಪರಮಾತ್ಮನೆಡೆ ಕೊಂಡೊಯ್ಯುವುದು.

ನೂರಾರು ಗಂಧದ ಹೂವಿನ ಹಾರಗಳನ್ನು ಚಿತೆಗೇರಿಸಿದ್ದರಿಂದ ಧೂಮ ವರ್ತುಲಾಕಾರದಲ್ಲಿ ಸುತ್ತುತ್ತಾ ಹತ್ತೂ ದಿಕ್ಕಿಗೆ ಮೈಚಾಚುತ್ತಾ ಗಂಧದ ಪರಿಮಳವನ್ನು ಆ ಕುಪ್ಪಳ್ಳಿಯ ಕಾಡಿಗೆ ಹರಡುತ್ತಿತ್ತು. ಎಲ್ಲ... ಮ್ಲಾನವದನರಾಗಿ ತಮಗೆ ಗೊತ್ತಿಲ್ಲದಂತೆ ಅದನ್ನೆ ಉಸಿರಾಡುತ್ತಿದ್ದರು. ತಮ್ಮಲ್ಲಿ ಇಷ್ಟಿಷ್ಟೇ... ಪರಿಮಳವಾಗಿ ತೇಜಸ್ವಿ ಬೆರೆತಂತೆ... ಅನಿಸುತ್ತಿತ್ತು.

ನಾನು ತೇಜಸ್ವಿಯವರನ್ನು ಮುಖತಃ ಭೇಟಿ ಮಾಡಿದ್ದು ೧೯೯೦ರಲ್ಲಿ; ಆದರೆ ಅದಕ್ಕಿಂತ ಮುಂಚೆಯೇ ೧೯೮೦ರಲ್ಲೇ ಅವರು ನನಗೆ ಅತ್ಯಂತ ಆಪ್ತರಾಗಿದ್ದರು 'ತುಕ್ಕೋಜಿ'ಯ ಮೂಲಕ. ತನ್ನಿಷ್ಟಕ್ಕೆ ಬಂದ ಹಾಗೆ ಬಟ್ಟೆ ಹೊಲೆದು ನಮ್ಮನ್ನು ಕಾಡಿಸುತ್ತಿದ್ದ ನಮ್ಮ ಬೀದಿಯ ಮಲಯಾಳಿ ಟೈಲರ್‌ಗೆ ನಾವು ಅದಾಗಲೇ ತುಕ್ಕೋಜಿ ಅಂದು ನಾಮಕರಣ ಮಾಡಿ ಅವನ ನಿಜ ನಾಮಧೇಯವನ್ನೇ ಮರೆತುಬಿಟ್ಟಿದ್ದೆವು. ತೇಜಸ್ವಿ ಜನ ಸೇರದ ವ್ಯಕ್ತಿ ಎಂದು ಅದಾಗಲೇ ಸುದ್ದಿ ಗಾಳಿಯಲ್ಲಿ ಇದ್ದದ್ದರಿಂದ ನಾಗಭೂಷಣರಿಗೆ ಅವರು ಆಪ್ತರಾಗಿದ್ದರೂ ನಾನು ಅವರನ್ನು ಭೇಟಿ ಮಾಡುವ ಸಾಹಸಕ್ಕೆ ಕೈ ಹಾಕಿರಲಿಲ್ಲ.

೧೯೯೦ರ ಸುಮಾರಿಗೆ ಎಂದು ತೋರುತ್ತದೆ. ಆಗ ನಾವು ಹಾಸನದಲ್ಲಿದ್ದೆವು. ಎಂದಿನಂತೆ ಮಾರ್ಚಿಯಲ್ಲಿ ಲೋಹಿಯಾ ನೆನಪು ಕಾರ್ಯಕ್ರಮ! ತೇಜಸ್ವಿಯವರನ್ನು ಆಹ್ವಾನಿಸುವುದು ಎಂದು ತೀರ್ಮಾನವಾಯಿತು. ಕಿಷನ್‌ಜೀ ಕೂಡ ಬರುವವರಿದ್ದರು. ಎಲ್ಲ ಒಟ್ಟಿಗೆ ಹೋಗಿ ಕಾಡಿದರೆ ತೇಜಸ್ವಿ ಬರುತ್ತಾರೆ ಎಂದು ನಮ್ಮ ಎಣಿಕೆ. ಸರಿ ಒಂದು ಮಧ್ಯಾಹ್ನ

ಹಾಸನದ ಜನತಾ ಮಾಧ್ಯಮದ ಸಂಪಾದಕ ಆರ್.ಪಿ. ವೆಂಕಟೇಶಮೂರ್ತಿ ಹಾಗೂ ಅವರ ಹೆಂಡತಿ ಜಯಂತಿ, ಲೇಖಕಿ ಬಾನು ಮುಷ್ತಾಕ್, ನಾಗಭೂಷಣ, ನಾನು ಹಾಗೂ ಇನ್ನೂ ಕೆಲವು ಸ್ನೇಹಿತರು, ಮಕ್ಕಳು ಕಾರು ಮಾಡಿಕೊಂಡು ಮೂಡಿಗೆರೆಯತ್ತ ಧಾವಿಸಿದೆವು. ಮೂಡಿಗೆರೆಯ ತೋಟದಲ್ಲಿ ಮಾಸಿದ ಚಡ್ಡಿ–ಹರಕು ಬನೀನಿನಲ್ಲಿದ್ದ ತೇಜಸ್ವಿ ಏನೋ ಕೆಲಸ ಮಾಡುತ್ತಿದ್ದರು. ದನಗಳ ಹಾಗೆ ನುಗ್ಗಿದ್ದ ನಮ್ಮನ್ನು ಕಂಡು ಒಂದು ಕ್ಷಣ ಗಾಬರಿಯಾಗಿ ತಕ್ಷಣ ಸಾವರಿಸಿಕೊಂಡು ಕ್ಷಣಾರ್ಧದಲ್ಲಿ ಮಾಯವಾಗಿ ಹತ್ತು ಮಿನಿಟಿನ ತರುವಾಯ ಜೀನ್ಸ್ ಪ್ಯಾಂಟು, ಷರಟು ತೊಟ್ಟು ಮುಖ ತೊಳೆದುಕೊಂಡು (ಹಾಗೆ ಕಾಣುತ್ತಿತ್ತು!) ತಲೆ ಬಾಚಿಕೊಂಡು ನಮ್ಮೆದುರು ಪ್ರತ್ಯಕ್ಷರಾದರು. 'ಏನ್ರಯ್ಯಾ... ದನ ನುಗ್ಗಿದ ಹಾಗೆ ನುಗ್ತೀರಲ್ಲಯ್ಯಾ...ಹೆಂಗಸರು ಮಕ್ಕಳ ಜತೆ ಬರ್ತೀದೀನಿ... ಅಂತ ಒಂದು ಮಾತು ಹೇಳಬಾರದೇನ್ರಯ್ಯಾ' ಅಂತ ನಮ್ಮ ಜತೆ ಬಂದಿದ್ದ ಗಂಡಸರಿಗೆ ಗದರಿಸಿದರು!

ನಾವು ೩–೪ ಜನ ಹೆಂಗಸರು ಇದ್ದದ್ದರಿಂದ ಮತ್ತು ಯಾರ ಹೆಂಡತಿ ಯಾರು ತಿಳಿಯದೆ ತೇಜಸ್ವಿ ಅವರಿಗೆ confuse ಆಗಿದ್ದರಿಂದ, ನಾವು ಹೆಂಗಸರು ನಮ್ಮ ನಮ್ಮ ಪರಿಚಯ ನಾವೇ ಮಾಡಿಕೊಂಡೆವು. ಜತೆಗೆ ನಾವೆಲ್ಲ ಅವರ ಬರಹಗಳ ಅಭಿಮಾನಿಗಳೆಂದೂ ಹೇಳಿದೆವು. ತೇಜಸ್ವಿ ನಮ್ಮ ಗುಂಪಿನ ಆಗ್ರಹಕ್ಕೆ ಮಣಿದು ಕಾರ್ಯಕ್ರಮಕ್ಕೆ ಬರಲು ಒಪ್ಪಿದರು. ತೇಜಸ್ವಿಯವರ ಶ್ರೀಮತಿ ರಾಜೇಶ್ವರಿ ನಮಗೆ ಪ್ರೀತಿಯಿಂದ ಬಿಸಿ ಬಿಸಿ ಚಹಾ ನೀಡಿದರು. ತೇಜಸ್ವಿಯವರು ನಮ್ಮನ್ನು ಅವರ ತೋಟದಲ್ಲಿ ಸುತ್ತಾಡಿಸಿದರು. ನಾವು ಅವರ ನಾಯಿ ಎಲ್ಲಿದೆಯೆಂದು ಕೇಳಿ ಅದರ ದರ್ಶನವನ್ನು ಮಾಡಿದೆವು! ಯಾಕೋ... ತೇಜಸ್ವಿ ಜನ ಸೇರದ ವ್ಯಕ್ತಿ ಎಂಬ ಗಾಳಿ ಸುದ್ದಿ ಸುಳ್ಳೆಂದು ತೋರಿತು. ಬಹುಶಃ ದೊಡ್ಡ ದೊಡ್ಡ ಜನರನ್ನು ಸೇರದ ವ್ಯಕ್ತಿ ಇರಬಹುದು. ನಮ್ಮಂತಹ ಸಾಮಾನ್ಯರ ಬಗ್ಗೆ ಅವರದ್ದೇನೂ ತಕರಾರು ಇರಲಿಕ್ಕಿಲ್ಲ... ಎಂದು ತರ್ಕಿಸಿದೆವು. ಅವರ ಕಾದಂಬರಿಯ ಸಾಮಾನ್ಯ, ಅತಿ ಸಾಮಾನ್ಯ ಪಾತ್ರಗಳ ಜಾತ್ರೆಯೆ ನಮ್ಮ ಕಣ್ಮುಂದೆ ನೆರೆಯಿತು. ಅವರ ಸರಳತೆ, ಸಂಕೋಚ ಮೆಚ್ಚುಗೆಯಾಗಿ ಗೌರವ ಇಮ್ಮಡಿಯಾಯಿತು.

ಹಾಸನದಲ್ಲಿ ಸಮಾವೇಶಗೊಂಡ ಲೋಹಿಯಾ ನೆನಪು ಕಾರ್ಯಕ್ರಮಕ್ಕೆ ಕರ್ನಾಟಕದ ಎಲ್ಲೆಡೆಯಿಂದ ಹಳೆಯ ಸಮಾಜವಾದಿ ಮಿತ್ರರು ಬಂದಿದ್ದರು. ತೇಜಸ್ವಿ ಅವರೂ ಕಾರ್ಯಕ್ರಮದಲ್ಲಿ ಭಾಗವಹಿಸಿ ತಾತ್ವಿಕವಾದ ಭಾಷಣ ಮಾಡಿಯೂ ಎಲ್ಲರನ್ನು ನಕ್ಕು ನಗಿಸಿದರು! ಅದು ಅವರ ವಿಶಿಷ್ಟ ಶೈಲಿ.

ಇದಾದ ಸ್ವಲ್ಪ ಸಮಯದಲ್ಲೇ 'ಸಾಹಿತ್ಯ ಸಂವಾದ' ಪತ್ರಿಕೆಯ ಮಹಿಳಾ ಸಂಚಿಕೆ ಸಂಪಾದಿಸುವ ಸಂದರ್ಭ ನನಗೆ ಒದಗಿ ಬಂತು. ನಾನು ಅತ್ಯುತ್ಸಾಹದಿಂದ ತೇಜಸ್ವಿಯವರಿಗೆ ಒಂದು ಪತ್ರ ಬರೆದೆ. ಕನ್ನಡದ ಲೇಖಕಿಯರ ಬರವಣಿಗೆಯ ಬಗ್ಗೆ ಅವರ ಅಭಿಪ್ರಾಯ ಏನೆಂದು ನಾನು ಅವರಿಂದ ತಿಳಿಯ ಬಯಸಿದ್ದೆ. ಕನ್ನಡದ ಘಟಾನುಘಟಿ ಲೇಖಕರಿಗೆಲ್ಲ (ಉದಾ: ಜಿ.ಎಸ್.ಎಸ್., ಕೆ.ವಿ. ಸುಬ್ಬಣ್ಣ, ಅನಂತಮೂರ್ತಿ, ಲಂಕೇಶ್, ತೇಜಸ್ವಿ, ಶಾಂತಿನಾಥ ದೇಸಾಯಿ, ಮಹಾದೇವ). ನಾನು ಈ ರೀತಿ ಪತ್ರ ಬರೆದು ಒಂದೆರಡು

ಸಾಲಾದರೂ ಸರಿಯೆ ಉತ್ತರ ನೀಡಬೇಕೆಂದು ಕೋರಿದ್ದೆ. ಜಿ.ಎಸ್.ಎಸ್. ಮತ್ತು ಕೆ.ವಿ.ಸುಬ್ಬಣ್ಣ ಹೊರತುಪಡಿಸಿದರೆ ಮಿಕ್ಕವರಾರೂ ಒಂದು ಸಾಲಿನ ಉತ್ತರ ಕೂಡ ಬರೆಯಲಿಲ್ಲ.

ನನಗೆ ಸಿಮೊ' ದಿಬುವಾಳ ಅ ವಾಕ್ಯ ನೆನಪಾಯಿತು. 'ಪುರುಷ ಮದದ ಬಗ್ಗೆ ಹೇಳುತ್ತಿದ್ದೇನೆ. ಇಲ್ಲಿ ಇದರ ಇನ್ನೊಂದು ಮುಖವನ್ನೂ ನಾವು ಗಮನಿಸಬೇಕು. ನಾನು 'ಸೆಕೆಂಡ್ ಸೆಕ್ಸ್' ಬರೆಯುವುದಕ್ಕೆ ಪ್ರೇರಣೆ ಪ್ರೋತ್ಸಾಹ ಕೊಟ್ಟವರಲ್ಲಿ ನೀನೇ ಮೊದಲಿಗ. (ಸಾರ್ತ್ರನಿಗೆ ಉದ್ದೇಶಿಸಿ ಹೇಳಿದ್ದು) ನಾನು ಪುಸ್ತಕವನ್ನು ಬರೆದು ಮುಗಿಸಿದಾಗ ನೀನು ಅದರಲ್ಲಿನ ಎಲ್ಲ ವಾದಗಳನ್ನು ಒಪ್ಪಿಕೊಂಡೆ. ಆದರೆ ಕಾಮುವಿನಂತಹವರು ಆ ಪುಸ್ತಕವನ್ನು ನನ್ನ ಮುಖದ ಮೇಲೆ ಬಿಸಾಡುವುದಷ್ಟೇ ಉಳಿದಿತ್ತು ನಾನು ಅಲ್ಲಿಯವರೆಗೆ ಎಷ್ಟೆಲ್ಲಾ ಜನರನ್ನು ಇವರೆಲ್ಲ ಸಾಮಾಜಿಕ ಮತ್ತು ಲಿಂಗ ಅಸಮತೆಗಳನ್ನು ಕುರಿತಂತೆ ಪ್ರಜಾತಂತ್ರವಾದಿ ಗಳಾಗಿದ್ದಾರೆ ಅಂದುಕೊಂಡಿದ್ದೆ. ಆದರೆ... 'ಪುರುಷಾಂಧವಾದ' ಅನ್ನುವುದನ್ನು ನಾನು ಆಗ ಕಂಡುಕೊಂಡೆ'.

ಛೆ! ಇಷ್ಟೊಂದು ಅನಾದರಣೆಯೆ? ಅಥವಾ ಇವರಿಗೆ ನಮ್ಮ ಲೇಖಕಿಯರ ಬರವಣಿಗೆಯ ಬಗ್ಗೆ ಅಭಿಪ್ರಾಯವೇ ಇಲ್ಲವೆ? ಒಳಗೊಳಗೇ ನಾನು ನೊಂದುಕೊಂಡೆ. ಇದಾದ ಒಂದೆರಡು ತಿಂಗಳ ಅವಧಿಯಲ್ಲೇ ನಮ್ಮ ಸ್ನೇಹಿತರ ಬಳಗದೊಂದಿಗೆ ('ಮಾಡಿ ಮಡಿದವರು' ಖ್ಯಾತಿಯ ಕೆ.ಎಂ. ಶಂಕರಪ್ಪ, ಕತೆಗಾರ ರಾಘವೇಂದ್ರ ಪಾಟೀಲ ಹಾಗೂ ಅವರ ಕುಟುಂಬ) ಕುದುರೆಮುಖ, ಹೊರನಾಡು, ಶೃಂಗೇರಿಯತ್ತ ಪ್ರವಾಸ ಹೋಗಿದ್ದೆವು. ದಾರಿಯಲ್ಲಿ ಮೂಡಿಗೆರೆ ಸಿಕ್ಕಾಗ ಕೆ.ಎಂ. ಶಂಕರಪ್ಪ 'ತೇಜಸ್ವಿನ ನೋಡಾಣ ಕಣ್ಲಾ...' ಎಂದರು. ಪಾಟೀಲರೂ 'ನಾನು ತೇಜಸ್ವಿಯವರನ್ನ ಭೆಟ್ಟಿಯಾಗಿಲ್ಲ... ನೋಡೋಣ' ಎಂದರು. ಮತ್ತೆ ಮತ್ತೊಮ್ಮೆ ಹೇಳದೆ ಕೇಳದೆ ಹತ್ತಾರು ಜನ ದನಗಳ ಹಾಗೆ ನುಗ್ಗಿದರೂ ತೇಜಸ್ವಿಯವರು ಬೇಸರವನ್ನೇನೂ ಮಾಡಿಕೊಳ್ಳಲಿಲ್ಲ. ಶಂಕರಪ್ಪನವರ ಬೋಳುಮಂಡೆ, ನೀಳ ಬಿಳಿ ಗಡ್ಡ ನೋಡಿ 'ಏನೋ ಇಷ್ಟು ಮುದುಕ ಆಗಿದ್ದೀಯಾ... ಗುರ್ತೇ ಸಿಗಲಿಲ್ಲಪ್ಪಾ...' ಎಂದು ಹೇಳಿ ಬಿದ್ದು ಬಿದ್ದು ನಕ್ಕರು. ಹಳೆಯ ನೆನಪುಗಳನ್ನು ಹಂಚಿಕೊಂಡರು. ಒಂದು ಗಂಟೆ ಖುಷಿಯಾಗಿ ಕಾಲ ಕಳೆದೆವು. ರಾಜೇಶ್ವರಿಯವರು ಬಿಸಿ ಬಿಸಿ ಚಹಾ ನೀಡಿ, ಬಾಯ್ತುಂಬ ಮಾತನಾಡಿ ನಮ್ಮನ್ನು ಸತ್ಕರಿಸಿದರು. ನಾವೆಲ್ಲ ಹೆಂಗಸರು ಕಷ್ಟ ಸುಖ ವಿನಿಮಯ ಮಾಡಿಕೊಂಡೆವು.

ಈ ಸಂದರ್ಭದಲ್ಲಿ ನಾನು ಈ ಸ್ವಲ್ಪ ಸಮಯದ ಹಿಂದೆ ಅವರಿಗೆ ಬರೆದ ಪತ್ರದ ಬಗ್ಗೆ ಏನೂ ಕೇಳಿಲಿಲ್ಲ. ಆದರೆ ತೇಜಸ್ವಿಯವರೇ ಅದನ್ನು ಪ್ರಸ್ತಾಪಿಸಿ... 'ನಾನು ನಿಮ್ಮ ಪತ್ರ ಬಂದಾಗಿನಿಂದಲೂ ಆಲೋಚಿಸುತ್ತಲೇ ಇರುವೆ. ನಾನು ಲೇಖಕಿಯರ ಕತೆ-ಕಾದಂಬರಿಗಳನ್ನು ಹೆಚ್ಚು ಓದಿದವನಲ್ಲ. ನನ್ನ ಬರಹಗಳಲ್ಲೂ ಸ್ತ್ರೀಯರ ಮನೋ ವ್ಯಾಪಾರಗಳನ್ನು ಚಿತ್ರಿಸಿರುವುದು ಕಡಿಮೆ. ನಾನು ಓದಿರುವುದೇ ಕಡಿಮೆ. ಓದದೆ ಕನ್ನಡದ ಲೇಖಕಿಯರ ಬಗ್ಗೆ ಅಭಿಪ್ರಾಯ ಕೊಡುವುದು ಸರಿಯಲ್ಲ ಎಂದು ತೋರಿತು. ಲೇಖಕಿಯರ

ಬರಹಗಳನ್ನು ನಾನೇಕೆ ಓದಲಿಲ್ಲ? ನಾಲ್ಕು ಸಾಲಿನ ಅಭಿಪ್ರಾಯ ಕೊಡುವಷ್ಟೂ ಅರಿವು ನನ್ನಲ್ಲಿ ಇಲ್ಲವಲ್ಲ... ಎಂದು ಆಲೋಚಿಸುತ್ತಲೇ ಇರುವೆ. ಈಗ ನೀವೇ ಬಂದಿರುವುದರಿಂದ ಹೇಳುತ್ತಿರುವೆ ತಪ್ಪು ತಿಳಿಯಬಾರದು' ಎಂದರು. ಆದರೆ ನಾನಾಗಲೇ ತಪ್ಪು ತಿಳಿದುಕೊಂಡು ಬಿಟ್ಟಿದ್ದೆ. 'ನೀವು ನಮ್ಮನ್ನು ಓದದಿದ್ದರೂ ಪರವಾಗಿಲ್ಲ, ನಾವು ನಿಮ್ಮನ್ನು ಓದುತ್ತೇವೆ' ಎಂದು ಹೇಳಿ ಮಾತು ಮುಗಿಸಿದೆ.

'ಸಂವಾದ'ದ ಮಹಿಳಾ ವಿಶೇಷಾಂಕ ಅನಿವಾರ್ಯ ಕಾರಣಗಳಿಂದ ಮುಂದೆ ಮುಂದೆ ಹೋಗಿ ಆರೇಳು ತಿಂಗಳ ನಂತರ ತಡವಾಗಿ ಸಿದ್ಧವಾಯಿತು. ಮುನ್ನುಡಿ ಬರೆಯಲು ಕುಳಿತೆ. 'ಕಿರಗೂರಿನ ಗಯ್ಯಾಳಿಗಳು' ಕತೆಯನ್ನು ಅದಾಗಲೇ ಓದಿದ್ದರೂ ನನ್ನ ಮುನ್ನುಡಿಯಲ್ಲಿ ಅದನ್ನು ಕುರಿತು ಪ್ರಸ್ತಾಪಿಸಲು (ಆಗ ತಾನೆ ಪುಸ್ತಕ ರೂಪದಲ್ಲಿ ಅದು ಪ್ರಕಟವಾಗಿತ್ತು) ಪುಸ್ತಕವನ್ನು ಕೊಂಡು ತಂದಿದ್ದೆ. ಸುಮ್ಮನೆ ಪುಟ ತೆರೆದು ಕಣ್ಣಾಡಿಸಿದೆ. ಪುಸ್ತಕವನ್ನು 'ತಮ್ಮ ಆತ್ಮಗೌರವಕ್ಕಾಗಿ ಅವಿರತ ಹೋರಾಡುತ್ತಿರುವ ಎಲ್ಲ ಮಹಿಳೆಯರಿಗೆ' ಅರ್ಪಿಸಲಾಗಿತ್ತು. 'ನಾನು ಈ ಬಗ್ಗೆ ಆಲೋಚಿಸುತ್ತಲೇ ಇರುವೆ' ಎಂದು ತೇಜಸ್ವಿ ಹೇಳಿದ್ದರಲ್ಲ... ಅದು ಈ ರೂಪದಲ್ಲಿ ಕಾಣಿಸಿಕೊಂಡಿತೆ? ನನಗೆ ತಿಳಿಯದು. ಆದರೆ ನಾನು ತೇಜಸ್ವಿಯವರ ವ್ಯಕ್ತಿತ್ವದ ಬಗ್ಗೆ ದುಡುಕಿನ ತೀರ್ಮಾನ ತೆಗೆದುಕೊಂಡದ್ದಾಕ್ಕಾಗಿ ಪರಿತಪಿಸಿದೆ.

ಇದರಾಚೆಗೂ ತೇಜಸ್ವಿಯವರನ್ನು ಬೇರೆ ಬೇರೆ ಸಭೆಗಳಲ್ಲಿ ನಾಲ್ಕೈದು ಬಾರಿ ಭೇಟಿ ಮಾಡಿರುವೆ. ಅವರು ಸಂಕೋಚದ ವ್ಯಕ್ತಿಯೆಂದು ಅರಿವಿಗೆ ಬಂದಿರುವುದರಿಂದ ನಾನೇ ಮುಂದಾಗಿ ಮಾತನಾಡಿಸಿರುವೆ. ಅವರದೇನಿದ್ದರೂ ಮುಗುಳುನಗೆಯ ಉತ್ತರ. ಏನೋ ಹೇಳಬೇಕೆಂದು ಅಂದುಕೊಳ್ಳುವರು, ಆದರೆ ಹೇಳಲಾರರು... ಅವರ ಈ ಸಂಕೋಚ ನಮಗೆ ತಮಾಷೆಯ ವಸ್ತು.

ಲೋಹಿಯಾರವರ ತತ್ವಚಿಂತನೆ, ಕುವೆಂಪುರವರ ಕಲಾಸೃಷ್ಟಿ; ಕಾರಂತರ ಜೀವನ ದೃಷ್ಟಿ ಅವರ ವ್ಯಕ್ತಿತ್ವದ ಬೆನ್ನೆಲುಬಾಗಿದ್ದರಿಂದ, ಅವರು ಜಗತ್ತಿನ ಸಕಲ ಜೀವಸಂಕುಲಗಳಿಗೆ ತಮ್ಮ ಬರಹಗಳಲ್ಲಿ ಸಾಮಾಜಿಕ ನ್ಯಾಯ ಒದಗಿಸಿದ್ದಾರೆ! ಪಶುಪಕ್ಷಿ ಕ್ರಿಮಿಕೀಟಗಳಿಂದ ಹಿಡಿದು ನರಮನುಷ್ಯ, ರಾಕ್ಷಸ, ದೇವತೆ ದೆವ್ವಗಳನ್ನೂ ಅವರು ಸಮಾನವಾಗಿ ಕಂಡವರು! ತೇಜಸ್ವಿ ಎಂದಾದರೂ ತನ್ನ ಬಗ್ಗೆ ಹೇಳಿಕೊಂಡದ್ದು, ಬರೆದುಕೊಂಡದ್ದು? ಇಲ್ಲ... ಇಲ್ಲ... ಇಡೀ ಜಗತ್ತನ್ನು ಅರ್ಥಮಾಡಿಕೊಳ್ಳುವ ಪ್ರಕ್ರಿಯೆಯ ಭಾಗವಾಗಿಯೇ ಬ್ರಹ್ಮಾಂಡದಲ್ಲಿ ಅಣುವನ್ನು ಇರಿಸಿಕೊಂಡು ನೋಡುವ ಹಾಗೆ ತಮ್ಮನ್ನು ನೋಡಿಕೊಂಡವರು. ಈಗಲೂ ನನಗನಿಸುತ್ತಿರುವುದು.

> **ಎಲ್ಲೋ ಅಲ್ಲೇ ಇರುವಂತಿದೆ**
> **ಕಾಡಿನೊಳಗೆ ಜೀವ...**
> **ಗಿಳಿ, ಗೊರವಂಕ, ಮರಕುಟಿಗ**
> **ಒಯ್ದುನೀಡಿರೇ ಕಂಬನಿ ಹೂವ...**

('ಅಗ್ನಿ', ಏಪ್ರಿಲ್ ೨೦೦೭)

●

# ಬೆಂಕಿಯಲ್ಲವದು, ಬೆಚ್ಚಗಿನ ಮಮತೆ...

ನಾಗಭೂಷಣರಿಗೆ ಒಂದು ಕಾಲದಲ್ಲಿ ಮೈಸೂರೆಂದರೆ, ಒಂದು ತೀರ್ಥ ಕ್ಷೇತ್ರವಿದ್ದಂತೆ. ಹಾಗಾಗಿ ನಾವು ಮದುವೆಯಾದ ಕೆಲವೇ ದಿನಗಳಲ್ಲಿ ಮೈಸೂರಿಗೆ ಹೊರಟೆವು. ಮದುವೆಯಾದ ತಕ್ಷಣ ಮೊದಲು ಮನೆ ದೇವರ ಹತ್ತಿರ ಕರೆದುಕೊಂಡು ಹೋಗುವ ವಾಡಿಕೆಯಂತೆ, ನಾಗಭೂಷಣ ಮೈಸೂರಿನಲ್ಲಿ ನನ್ನನ್ನು ಮೊದಲು ಕರೆದುಕೊಂಡು ಹೋದದ್ದು ಕೆ. ರಾಮದಾಸರ ಮನೆಗೇ! ಅಲ್ಲಿ ಅವರ ಮನೆಯಲ್ಲಿ ನಮಗೆ ತುಂಬು ಆತಿಥ್ಯ. ನಂತರ ಮಹಾದೇವ, ಮಹೇಶ್, ಗೋವಿಂದಯ್ಯ, ಆಲನಹಳ್ಳಿ, ಶಿವತೀರ್ಥನ್, ನೆಲಮನೆ ದೇವೇಗೌಡ – ಹೀಗೆ ಒಂದು ಸುತ್ತು ತಿರುಗಿ ಬಂದೆವು. ಒಬ್ಬೊಬ್ಬರೂ ಒಂದೊಂದು ಥರ... ಕೋಪ, ತಾಪ, ಪರಿತಾಪ ಹಾಗೂ ಇವೆಲ್ಲವನ್ನೂ ಮೀರಿಸುವಂತೆ ವಿಚಾರ, ಮಮಕಾರ... ತತ್‌ಕ್ಷಣವೇ ಅಸಹಕಾರ...

ಇವೆಲ್ಲದರ ಒಟ್ಟು ಮೊತ್ತವೇ ರಾಮದಾಸ್.

ಒಳ್ಳೆಯದಕ್ಕೋ, ಕೆಟ್ಟದಕ್ಕೋ ನಮ್ಮಲ್ಲಿ ಅನೇಕರು ಬದಲಾಗಿರುವುದನ್ನು ನೋಡಿದ್ದೇನೆ. ಆದರೆ ರಾಮದಾಸ್ ಹಾಗಲ್ಲ... ಆದಿಯೂ ಪ್ರತಿಭಟನೆ, ಅಂತ್ಯವೂ ಪ್ರತಿಭಟನೆ... ಹೋರಾಟ ಅವರ ಮಂತ್ರ; ಪ್ರತಿಭಟನೆ ಅವರ ತಂತ್ರ... ಯಾರಿಗೂ ಅಂಜಿದವರಲ್ಲ ಅವರು. ಸಾವಿಗೂ ಹಲವಾರು ಬಾರಿ ಸವಾಲೆಸದವರೇ... ಈಗ ನಿರ್ಗಮಿಸಿದ್ದಾರೆ. ನಿರ್ಗಮಿಸುವ ಹಿಂದಿನ ಮೂರು ದಿನಗಳು ನಾವು ಅವರ ಜೊತೆಯಲ್ಲಿದ್ದೆವು. ಮೊದಲ ಬಾರಿಗೆ ಅವರು ಈ ಮೂರೂ ದಿನಗಳ ಕಾಲ ಪೂರ್ತಿ ಸಮಾಧಾನದಿಂದ ನಮ್ಮೊಡನೆ ಮಾತನಾಡಿದರು. ತಮ್ಮ ಹೋರಾಟವನ್ನು ಮುಂದುವರೆಸಿಕೊಂಡು ಹೋಗುವ ಜವಾಬ್ದಾರಿ ನಿಮ್ಮೆಲ್ಲರದು ಎಂದರು. ನನ್ನನ್ನು ಯಾವಾಗಲೂ 'ರೀ ಸವಿತಾ...' ಎಂದು ಕರೆಯುತ್ತಿದ್ದವರು, ಮೊದಲ ಬಾರಿಗೆ 'ಅಮ್ಮ...' ಎಂದು ಸಂಬೋಧಿಸಿದ್ದು ನನ್ನ ಎದೆಯ ಯಾವುದೋ ತಂತಿಯನ್ನು ಮೀಟಿದಂತೆನಿಸಿತು... ಅವರು ಸುಸ್ತಾಗಿದ್ದರು; ಮಾತನಾಡಲು ಕಷ್ಟಪಡುತ್ತಿದ್ದರು. ಆದರೆ ನಿರ್ಗಮಿಸುವ ಯಾವ ಸೂಚನೆಯೂ ಇರಲಿಲ್ಲ. ಅಂತಹ ಸೂಚನೆ ಕೊಟ್ಟರೆ ಎಲ್ಲಿ ಅವರು ಮತ್ತೊಮ್ಮೆ ತನ್ನ ಕುಣಿಕೆಯಿಂದ ತಪ್ಪಿಸಿಕೊಂಡಾರೋ ಎಂಬ ಆತಂಕದಲ್ಲಿ ಆ ಅಂತಕ ಅವರನ್ನು ಕೊಂಡೊಯ್ದಿದ್ದಾನೆ...

ರಾಮದಾಸ್ ಕಳೆದ ಜನವರಿಯಲ್ಲಿ ತೀವ್ರ ಅಸ್ವಸ್ಥೆಯ ನಡುವೆಯೂ ಶಿವಮೊಗ್ಗಕ್ಕೆ ಬಂದು ನನ್ನ ಹಾಗೂ ನಾಗಭೂಷಣ ಅವರ ಪುಸ್ತಕ ಬಿಡುಗಡೆ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಸಮಾರಂಭದಲ್ಲಿ ನಮ್ಮ ಪಕ್ಕದಲ್ಲಿ ಕೂತೇ, ಸಮಾರಂಭ ಏರ್ಪಡಿಸುವುದು ಹೀಗಲ್ಲ ಎಂಬ ಸಿಟ್ಟಿನ ಮಾತಿನೊಂದಿಗೇ ಭಾಷಣದ ಕಿಡಿ ಹೊತ್ತಿಸಿದರು! ಅವರನ್ನು ಬಲ್ಲವರಿಗೆ ಅದೇನೂ ಹೊಸದಲ್ಲ. ಆದರೆ ಸಭಿಕರಿಗೆ ಗಾಬರಿ ಹಾಗೂ ಆಶ್ಚರ್ಯ. ಅವರೇಕೆ ಹಾಗೆ ಮಾತಾಡಿದರು ಎಂದು ಎಲ್ಲರೂ ನಮ್ಮನ್ನು ವಿವರಣೆ ಕೇಳುವವರೇ... ಅದು ಅವರ ಶೈಲಿ... ಎಂದೆವು. ಹೀಗೂ ಉಂಟೇ ಎಂದು ಅವರು ಆಶ್ಚರ್ಯ ವ್ಯಕ್ತಪಡಿಸಿದರು. Rough, tough and warm. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ, ರಾಮದಾಸ್ ಅಗ್ನಿ ಪರ್ವತದ ಹಾಗೆ... ಸಿಡಿದಾಗ ದೂರ ನಿಂತು ನೋಡುವುದೇ ಒಂದು ಚಂದ. ಸಹಿಸಬಲ್ಲ ಶಕ್ತಿಯಿದ್ದರೆ, ಹತ್ತಿರವಿದ್ದೂ ಆ ಬಿಸಿಯಲ್ಲಿ ಪ್ರೀತಿಯನ್ನು ಕಾಣಬಹುದಿತ್ತು.

ಬೆಂಕಿಯಲ್ಲದವದು, ಬೆಚ್ಚಗಿನ ಮಮತೆ.

('ಅಗ್ನಿ', ಜೂನ್ ೨೦೦೭)

●

# ಉರಿವ ಒಲೆಗಳ ಮುಂದೆ: ಹೀಗೆ ನಿನ್ನ ಕಂಡೆ...

ಸಮಾಜವಾದಿಗಳ ಪತ್ನಿಯರ ಪಡಿಪಾಟಲು ಬಲು ವಿಚಿತ್ರವಾದದ್ದು. ಇನ್ನು ಸಮಾಜವಾದಿ ವಿಚಾರವಾದಿಯೂ ಆಗಿದ್ದರಂತೂ ಆ ಪಡಿಪಾಟಲು ಯಾವ ಬಗೆಯದು ಎಂದು ಹೇಳುವುದೇ ಬೇಡ. ಗಂಡಂದಿರ ಸಮಾಜವಾದ–ವಿಚಾರವಾದವೆಲ್ಲವನ್ನೂ ಹೆಂಡತಿಯರೇ ಆಚರಣೆಗೆ ತಂದು ಅವರ ಮಾನ–ಪ್ರತಿಷ್ಠೆಗಳನ್ನು ಕಾಪಾಡಬೇಕಾಗಿರುತ್ತದೆ! ಇಂತಹ ಸಂಕಷ್ಟಗಳೆಲ್ಲವನ್ನೂ ನುಂಗಿಟ್ಟುಕೊಂಡು ಅದನ್ನು ಆದಷ್ಟೂ ಆನಂದವಾಗಿ ಪರಿವರ್ತಿಸಿಕೊಳ್ಳಲು ಜೀವನ ಪೂರ್ತಾ ಹೆಣಗಿ ಕೊನೆಗೆ ಸೋತು ಹೋದ ನಿರ್ಮಲಾ ರಾಮದಾಸ್ ಇಷ್ಟು ಬೇಗನೆ ನಮ್ಮನ್ನು ಅಗಲಿ ಹೋಗಿದ್ದು ನಿಜವಾಗಿಯೂ ದುಃಖದ ಸಂಗತಿಯಾದರೂ, ಕಳೆದ ಹತ್ತು ವರ್ಷಗಳಲ್ಲಿ ಅವರು ಅನುಭವಿಸಿದ ಮಾನಸಿಕ ಹಾಗೂ ದೈಹಿಕ ಸಂಕಟಗಳ ದೃಷ್ಟಿಯಿಂದ ಒಂದು ರೀತಿಯಲ್ಲಿ ಒಳ್ಳೆಯದೇ ಎಂದರೆ ಯಾರೂ ತಪ್ಪು ತಿಳಿಯಲಾರರು ಎಂದು ನಾನು ಭಾವಿಸಿದ್ದೇನೆ. ಅವರ ಸಂಕಷ್ಟಗಳನ್ನು ಹತ್ತಿರದಿಂದ ಕಂಡಿದ್ದ ನನಗೆ ಅವರು ತೋರುತ್ತಿದ್ದ ಬದುಕುವ ಇಚ್ಛಾಶಕ್ತಿ ಹಾಗೂ ಅವರನ್ನು ಬದುಕಿಸಿಕೊಳ್ಳಲು ರಾಮದಾಸ್ ಕಷ್ಟಪಟ್ಟು ಸಂಘಟಿಸಿಕೊಳ್ಳುತ್ತಿದ್ದ ಸಂಕಲ್ಪ ಶಕ್ತಿ ನನಗೆ ದಾಂಪತ್ಯದ ಆಳದ ಸತ್ಯವೊಂದನ್ನು ಪರಿಚಯಿಸಿತ್ತು.

ಮೇಲ್ನೋಟಕ್ಕೆ ಸಿಡುಕಿನ ಪ್ರತಿಮೂರ್ತಿಯಾಗಿರುತ್ತಿದ್ದ ರಾಮದಾಸ್ ಒಳಗೆ ಒಲುಮೆಯ ನದಿಯೇ ಆಗಿದ್ದರು. ನಿರ್ಮಲಾರ ತೀವ್ರ ಅನಾರೋಗ್ಯದ ದಿನಗಳಲ್ಲಿ ಅವರನ್ನು ಮಗುವಿನಂತೆ, 'ಏನು ಬೇಕು ಹೇಳಪ್ಪ... ನಿನಗೆ ಏನೆಲ್ಲ ಅನುಕೂಲ ಬೇಕೋ, ಚಿಕಿತ್ಸೆ ಬೇಕೋ ಅದನ್ನೆಲ್ಲ ಒದಗಿಸಿದ್ದೀನೋ ಇಲ್ವೋ ಹೇಳಪ್ಪಾ?' ಎಂದು ಗದ್ಗದಿತರಾಗಿ ಪತ್ನಿಯಿಂದ ಅರ್ಹತಾ ಪತ್ರ ಬೇಡುವ ಪ್ರಯತ್ನದಲ್ಲಿ ಅವರು ತಮ್ಮ ಮೂರು ದಶಕಗಳ ದಾಂಪತ್ಯ ಕುರಿತಂತೆ ಆತ್ಮ ನಿರೀಕ್ಷಣೆಯಲ್ಲಿ ತೊಡಗಿರುವಂತೆ ನನಗೆ ತೋರುತ್ತಿತ್ತು. ನಿರ್ಮಲಾ ಸಹ ಯಾವುದೇ ಕಹಿ ನೆನಪಿನ ಸೋಂಕೂ ಇಲ್ಲದಂತೆ, ಪತಿಯ ಹೊಸ ರೀತಿಯ ಲಲ್ಲೆಯಿಂದ ತುಸು ನಾಚಿದಂತೆ ನಿಧಾನವಾಗಿ ಹೆಜ್ಜೆಯಿಡುತ್ತಾ ಹೊರಹೋಗುತ್ತಿದ್ದರು!

ಅತಿ ಬಾಲ್ಯದಲ್ಲೇ ತಂದೆಯನ್ನು ಕಳೆದುಕೊಂಡಿದ್ದ ರಾಮದಾಸರನ್ನು ಒಂಟಿ ಹೆಂಗಸಾಗಿ ಬಲು ಕಷ್ಟದಲ್ಲಿ ಸಾಕಿ ಸಲಹಿದ ಅವರ ತಾಯಿ ಮಂಜಮ್ಮನವರು ಮದುವೆಯಾದ ಮೇಲೂ ಮಗನನ್ನು ಹೆಂಡತಿಯ ಗಂಡನನ್ನಾಗಿ ಬಿಡದೆ ತನ್ನ ಮಗನನ್ನಾಗಿಯೇ ಕಾಪಾಡಿದಂಥವರು!

ರಾಮದಾಸರ ಸಕಲ ಪಚ್ಚಾಟಗಳನ್ನು ಸಹಿಸಿಕೊಂಡೇ ಅವರ ಎಲ್ಲ ಸುಖ ಸೌಕರ್ಯಗಳನ್ನು ನೋಡಿಕೊಂಡವರು. ಇದರಿಂದಾಗಿ ಎಲ್ಲ ಗೃಹಕೃತ್ಯದ ಜಂಜಾಟಗಳಿಂದ ಮುಕ್ತರಾಗಿದ್ದ ನಿರ್ಮಲಾ ತಮ್ಮ ಸಾಹಿತ್ಯಾಭಿರುಚಿಯನ್ನೂ, ಅಧ್ಯಾಪನ ವೃತ್ತಿಯನ್ನೂ ರೂಢಿಸಿಕೊಳ್ಳಲು ಸಹಾಯಕವಾಯಿತು. ರಾಮದಾಸರ ಎಲ್ಲ ಹೋರಾಟಗಳಲ್ಲಿ ಸಾಥ್ ನೀಡುತ್ತಿದ್ದ ಆ ದಿನಗಳು ಅವರ ಅತ್ಯುತ್ತಮ ದಿನಗಳು. ಆಗ ರಾಮದಾಸ್ ಕಲ್ಲು ಬಂಡೆಯಂತೆ ಕಂಡರೆ, ಪಕ್ಕದಲ್ಲೇ ಇರುತ್ತಿದ್ದ ನಿರ್ಮಲಾ ನಮಗೆ ಕಲ್ಲು ಸಕ್ಕರೆಯಂತೆ ಕಾಣುತ್ತಿದ್ದರು – ಮಾತಿನಲ್ಲೂ, ವ್ಯಕ್ತಿತ್ವದಲ್ಲೂ, ಬರವಣಿಗೆಯಲ್ಲೂ.

ಆದರೆ ಮಂಜಮ್ಮ ನಿಧನರಾದ ಮೇಲೆ ಗೃಹಕೃತ್ಯದ ಎಲ್ಲ ಭಾರಗಳೂ ನಿರ್ಮಲಾರ ಮೇಲೆ ಬಿತ್ತು. ಅದಕ್ಕಿಂತ ಹೆಚ್ಚಾಗಿ ರಾಮದಾಸರ ಆವೇಶ–ಆಟಾಟೋಪಗಳು. ಸೂಕ್ಷ್ಮ ಪ್ರಕೃತಿಯ ನಿರ್ಮಲಾ, ರಾಮದಾಸರ ಮಿತಿಯಿಲ್ಲದ ಒತ್ತಡಗಳನ್ನು ಎದುರಿಸಲಾಗದೆ ನಲುಗಿ ಹೋದರು. ರಾಮದಾಸ್ ಈ ಬಗ್ಗೆ ಎಚ್ಚೆತ್ತುಕೊಳ್ಳುವ ವೇಳೆಗೆ ಕಾಲ ಮಿಂಚಿ ಹೋಗಿತ್ತು. ಮನಸ್ಸು ಸ್ಥಿಮಿತ ತಪ್ಪಿ ಅವರ ಪಿತ್ತಕೋಶ ಆಘಾತಗೊಂಡಿತ್ತು. ರಕ್ತದಲ್ಲಿ ಸಕ್ಕರೆ ಮಿತಿ ಮೀರಿತ್ತು. ಪರಿತಾಪ–ಅನುತಾಪಗಳಿಂದ ಬಳಲಿದ ರಾಮದಾಸ್, ನಿರ್ಮಲಾರ ಅನಾರೋಗ್ಯ ಮರುಕಳಿಸಿದಾಗಲೆಲ್ಲಾ ತಮ್ಮ ಅನಾರೋಗ್ಯವನ್ನೂ ಲೆಕ್ಕಿಸದೆ ಆಸ್ಪತ್ರೆಗಳಿಗೆ ಅಲೆದೂ ಅಲೆದೂ ಸುಸ್ತಾದರು. ಹಣ್ಣಾದರು. ಮಣ್ಣಾದರು. ನನ್ನ ಪ್ರಕಾರ ಕೊನೆಗೂ ಗೆದ್ದಿದ್ದು ನಿರ್ಮಲಾರೇ: ಸಾಯುವ ವೇಳೆ ರಾಮದಾಸ್ ಕೊನೆಗೂ ತೊಟ್ಟು ಕಳಚಿದ್ದ ಹಣ್ಣಿನಂತಾಗಿದ್ದರು. ನಿರ್ಮಲಾ ಬಿಡಿ, ಅವರು ಯಾವಾಗಲೂ ಮಾಗಿದ ಹಣ್ಣೇ.

ನಿರ್ಮಲಾರ ಕೊನೆಯ ದಿನಗಳಲ್ಲಿ ಅವರಿಗೆ ತಾನು ಬರೆಯಬೇಕಾದುದನ್ನೆಲ್ಲ ಬರೆದಿಲ್ಲ ಎಂಬ ಚಿಂತೆ ಕಾಡುತ್ತಿದ್ದುದನ್ನು ನಾನು ಅನೇಕ ಬಾರಿ ಗಮನಿಸಿದ್ದೇನೆ. ಒಂದು ಹಳೆಯ ನೋಟ್ ಬುಕ್ಕಿನಲ್ಲಿ ಗದ್ಯ ಪದ್ಯಗಳೆರಡನ್ನೂ ಅವಸರವಸರವಾಗಿ ಬರೆದಿಡುತ್ತಿದ್ದರು. ಎರಡು ವರ್ಷಗಳ ಹಿಂದೆ ರಾಮದಾಸರ ಕೋರಿಕೆ ಮೇರೆಗೆ ಅವುಗಳಲ್ಲಿನ ಒಂದಷ್ಟು ಪದ್ಯಗಳನ್ನು ಆರಿಸಿ, ಜೋಡಿಸಿ ಪ್ರಕಟಣೆಗಾಗಿ ಲೋಹಿಯಾ ಪ್ರಕಾಶನಕ್ಕೆ ಅಣಿ ಮಾಡಿಕೊಟ್ಟಿದ್ದೆ. ರಾಮದಾಸ್ ಆ ಪುಸ್ತಕದ ಬಿಡುಗಡೆ ಸಮಾರಂಭವನ್ನು ಬಹು ಸಂಭ್ರಮದಿಂದ ಏರ್ಪಡಿಸಿದ್ದರು. ಆ ಪುಸ್ತಕದ ಹೆಸರು ಎಷ್ಟು ಅರ್ಥಪೂರ್ಣ ನೋಡಿ: 'ಉರಿವ ಒಲೆಗಳ ಮುಂದೆ'! ಇದಕ್ಕೂ ಕೆಲವು ವರ್ಷಗಳ ಹಿಂದೆ ಪ್ರಕಟವಾದ ಅವರ 'ಚಲ್ ಮೇರಿ ಲೂನಾ' ಲಲಿತ ಪ್ರಬಂಧ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನವೂ ಸಂದಿತ್ತು.

ನಿರ್ಮಲಾರ ಮನೆಯಲ್ಲಿ ನಾವು ಎಷ್ಟು ಬಾರಿ ತಂಗಿದ್ದೇವೆ (ಮೈಸೂರಿಗೆ ಹೋದಾಗ ಅವರ ಮನೆಯಲ್ಲೇ ತಂಗಬೇಕೆಂಬುದು ರಾಮದಾಸರ ಕಟ್ಟಾಜ್ಞೆಯಾಗಿತ್ತು. ಏಕೆಂದರೆ ಅವರಿಗೆ ಜಗಳಾಡಲು ನಾಗಭೂಷಣ್‌ರಂತಹ ಜನ ಬೇಕಿತ್ತು!), ಉಂಡಿದ್ದೇವೆ, ಹೊರ ಹೋಗಿ ಆನಂದಿಸಿದ್ದೇವೆ. ನಿರ್ಮಲಾ ಹೆಚ್ಚು ಮಾತಾಡುತ್ತಿರಲಿಲ್ಲವಾದರೂ, ಮನೆಗೆ ಬಂದ ಎಲ್ಲರ ಅಗತ್ಯಗಳನ್ನು ತಿಳಿದುಕೊಳ್ಳುವಷ್ಟು ಸೂಕ್ಷ್ಮವಾಗಿದ್ದರು. ನಾವು ಅವರ ಮನೆಯಲ್ಲಿ ತಂಗಿದಾಗಲೆಲ್ಲ

ಬೆಳಿಗ್ಗೆ ಎದ್ದೊಡನೆ ತಮ್ಮ ಅನಾರೋಗ್ಯದ ನಡುವೆಯೂ ನಮ್ಮ ಕೋಣೆಗೆ ಚಹಾದೊಂದಿಗೆ ತಾವೇ ಬರುತ್ತಿದ್ದರು. ಹತ್ತು ನಿಮಿಷ ಕೂತು ಸಾಹಿತ್ಯ–ಸಂಸ್ಕೃತಿ–ಸ್ನೇಹಿತರು ಇತ್ಯಾದಿಗಳ ಬಗ್ಗೆ ಮಾತನಾಡಿದ ನಂತರವೇ ಮುಂದಿನ ಕೆಲಸಗಳಲ್ಲಿ ತೊಡಗಿಕೊಳ್ಳುತ್ತಿದ್ದುದು. ಅಂತಹ ಲಲಿತ ಸೌಜನ್ಯ ಅವರದ್ದು.

ನಿರ್ಮಲಾ, ಮಗಳು ಸ್ನೇಹಳೊಬ್ಬಳಿಗೇ ತಾಯಿಯಾಗಿರಲಿಲ್ಲ. ಕರ್ನಾಟಕದಾದ್ಯಂತ ಇರುವ ರಾಮದಾಸರ ಗೆಳೆಯರಿಗೂ, ಶತ್ರುಗಳಿಗೂ ತಾಯಿಯೋ, ಅಕ್ಕನೋ, ತಂಗಿಯೋ ಆಗಿದ್ದರು. ರಾಮದಾಸ್ ಹೋದ ನಂತರ ನಿರ್ಮಲಾ ಚೇತರಿಸಿಕೊಳ್ಳುತ್ತಿದ್ದಂತಿತ್ತು. ಆದರೆ ಈಗ ಇದ್ದಕ್ಕಿದ್ದಂತೆ ಹೀಗಾದದ್ದು ನಮಗಾದ ವೈಯಕ್ತಿಕ ನಷ್ಟವಷ್ಟೇ ಅಲ್ಲ, ಕರ್ನಾಟಕದ ಅಳಿದುಳಿದಿರುವ ಸಮಾಜವಾದಿ ಬಳಗಕ್ಕೂ ಆದ ನಷ್ಟ. ಇವರ ವಂಶದ ಚಿಗುರನ್ನು ಹೊತ್ತಿರುವ ಸ್ನೇಹ ಹಾಗೂ ಓಂಕಾರ್‌ಗೆ ನಾವು ಧೈರ್ಯ ಹೇಳುವ ಅಗತ್ಯವಿಲ್ಲ. ಅವರಿಬ್ಬರೂ ನಿಜವಾಗಿ ಗಟ್ಟಿಗರು.

('ವಿಕ್ರಾಂತ ಕರ್ನಾಟಕ', ಡಿಸೆಂಬರ್ ೭, ೨೦೦೭)

●

# ನೀಲಾಂಜನ: ಎನ್.ಎಸ್.ಎಲ್. ಅಭಿನಂದನ ಗ್ರಂಥ

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅಭಿನಂದನ ಗ್ರಂಥಗಳ ಒಂದು ಪರಂಪರೆಯೇ ಇದೆ. ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ, ಮಾಸ್ತಿ, ಆನಂದಕಂದ, ಕಾರಂತ, ಕೆ.ಎಸ್.ನ., ಹೀಗೆ ಕನ್ನಡದ ಅನೇಕ ಮಹತ್ವದ ಲೇಖಕರಿಗೆ ಅಭಿನಂದ ಗ್ರಂಥಗಳು ಸಂದಾಯವಾದ ದಾಖಲೆಯಿದೆ. ಆಯಾ ಕ್ಷೇತ್ರದಲ್ಲಿ ಮಹತ್ವದ ಸಾಧನೆ ಮಾಡಿದ ವ್ಯಕ್ತಿಗಳನ್ನು ಗೌರವಿಸುವ ದೃಷ್ಟಿಯಿಂದ ಅಭಿನಂದನ ಗ್ರಂಥಗಳು ರೂಪುಗೊಳ್ಳುವುದು ಸಹಜವಾದರೂ ಸಲ್ಲಬೇಕಾದವರಿಗೆಲ್ಲಾ ಇದು ಸಂದಿದೆ ಎಂದರೆ ತಪ್ಪಾದೀತು.

ಎಲ್ಲರೂ ಹುಟ್ಟಿರುವುದು ನಿಜವಾದರೂ, ಹಲವರು ಅರವತ್ತರ ಗಡಿ ದಾಟುವುದು ಸಹಜವಾದರೂ ಎಲ್ಲರ ಮನೆಯಲ್ಲಿ ಹುಟ್ಟುಹಬ್ಬದ ಸಮಾರಂಭಗಳು, ಷಷ್ಟ್ಯಬ್ಧಿ ಸಮಾರಂಭಗಳು ನಡೆಯುವುದಿಲ್ಲವಷ್ಟೇ. ಒಡಹುಟ್ಟಿದವರ ಅನುರಾಗ, ಬಂಧುಬಳಗದವರ ಒತ್ತಾಸೆಗಳು ಮೇಲೆ ಕಾಣಿಸಿದ ಸಮಾರಂಭಗಳಿಗೆ ಕಾರಣವಾಗುವಂತೆ, ಸಹಲೇಖಕರು, ಗೆಳೆಯರು, ಅಭಿಮಾನಿಗಳು, ಹಿತೈಷಿಗಳು ಅಭಿನಂದನ ಗ್ರಂಥಗಳ ಹಿಂದಿರುತ್ತಾರೆ.

'ಅಭಿನಂದನೆ' ಹೆಸರೇ ಸೂಚಿಸುವಂತೆ ಇಲ್ಲಿ ನಿಂದನೆ–ಟೀಕೆ–ವಿಮರ್ಶೆ–ಚಿಂತನೆ–ಚರ್ಚೆಗಳ ಅವಕಾಶ ಕಡಿಮೆ. ಹುಟ್ಟುಹಬ್ಬದ ದಿನ ಉಡಾಳ ಮಗುವಿಗೂ ಬೈಗುಳ–ಹೊಡೆತ ಗಳಿಂದ ವಿನಾಯಿತಿ ಇರುವಂತೆ ಈ ಅಭಿನಂದನ ಗ್ರಂಥಗಳಲ್ಲಿ ಹರಕೆ–ಹಾರೈಕೆ–ಆಶೀರ್ವಾದ ಇವೇ ಪ್ರಧಾನ ಅಂಶಗಳು. ಅಭಿನಂದನಾ ಗ್ರಂಥಗಳು ಒಂದು ರೀತಿಯಲ್ಲಿ ಉಡುಗೊರೆ ರೀತ್ಯಾ ಬರೆಹಗಳಿಂದ ತುಂಬಿರುತ್ತವೆ ಎಂದರೆ ತಪ್ಪಾಗಲಾರದು. ಡಾ. ಎಲ್.ಎಸ್. ಶೇಷಗಿರಿರಾವ್, ಡಾ. ಎಚ್.ಎಸ್. ವೆಂಕಟೇಶಮೂರ್ತಿ ಮತ್ತು ಬಿ.ಆರ್. ಲಕ್ಷ್ಮಣರಾವ್ ಅವರ ಸಂಪಾದಕತ್ವದಲ್ಲಿ ಕನ್ನಡದ ಹಿರಿಯ ಕವಿ ಶ್ರೀ ನೈಶಿಲಭಟ್ಟರಿಗೆ ಸಮರ್ಪಿಸಲ್ಪಟ್ಟ 'ನೀಲಾಂಜನ' ಕೂಡ ಈ ನಡಾವಳಿಗೆ ಹೊರತಾಗಿಲ್ಲ ಎಂದು ಹೇಳಬೇಕಾಗುತ್ತದೆ.

'ನೀಲಾಂಜನ' ೭೦೦ ಪುಟಗಳ ಬೃಹತ್ ಗ್ರಂಥ. ನವ್ಯ ಕಾವ್ಯ, ಭಾವಗೀತೆ, ವಿಮರ್ಶೆ, ಸಂಪಾದನೆ, ಅನುವಾದ, ನಾಟಕ ಇವೇ ಮೊದಲಾದ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಜನಪ್ರಿಯರಾಗಿರುವ ಡಾ. ಲಕ್ಷ್ಮೀನಾರಾಯಣ ಭಟ್ಟರಿಗೆ ಅವರ ಮಿತ್ರರು, ಅಭಿಮಾನಿಗಳು ಪ್ರೀತಿಯಿಂದ ಸಮರ್ಪಿಸಿರುವ ಈ ಅಭಿನಂದನ ಗ್ರಂಥದ ಹೆಸರು ಆಕರ್ಷಕವಾಗಿದೆ. ರಕ್ಷಾಕವಚ, ಮುದ್ರಣ ಸೊಗಸಾಗಿವೆ.

ಪ್ರಸ್ತುತ ಗ್ರಂಥ ಐದು ಭಾಗಗಳಲ್ಲಿ ಹಬ್ಬಿಕೊಂಡಿದೆ. ಭಾಗ ಒಂದು: ಎ.ಎನ್. ಮೂರ್ತಿರಾವ್, ಪುತಿನ, ಕೆ.ಎಸ್.ನ., ಹಾಮಾನಾ, ಕಣವಿ, ಭೈರಪ್ಪ, ಬಲ್ಲಾಳ

ಮುಂತಾದವರ ಹರಕೆ ಹಾರೈಕೆಗಳಿಂದ ತುಂಬಿಕೊಂಡಿದ್ದು, ಇವುಗಳಲ್ಲಿ 'ಪ್ರೀತಿಯ ಶಿಷ್ಯ' ಎನ್ನುವ ತ.ಸು.ಶಾಮರಾಯರ ಲೇಖನ ಗಮನ ಸೆಳೆಯುತ್ತದೆ. ತ.ಸು. ಶಾಮರಾಯರು, ಭಟ್ಟರು ಹುಡುಗನಾಗಿದ್ದಾಗಿನ ಚಿತ್ರಣ ಕೊಡುತ್ತಾರೆ. ವಾರಾನ್ನ ಕೇಳಲು ಕಂಡರಿಯದಂಥ ಊರಿಗೆ ಬಂದಿದ್ದ ಹುಡುಗನ ಧೈರ್ಯ, ಸಂಕಲ್ಪಶಕ್ತಿಗಳನ್ನು ಮೆಚ್ಚುತ್ತಾರೆ. ಈ ಹುಡುಗ ನೋಡ ನೋಡುತ್ತಲೇ ಎಲ್ಲಿಂದೆಲ್ಲಿಗೆ ಏರಿಬಿಟ್ಟ ಅನ್ನಿಸಿ, ಸಂತೋಷ ಆಶ್ಚರ್ಯ ಎರಡನ್ನೂ ವ್ಯಕ್ತಪಡಿಸುತ್ತಾರೆ.

ಎರಡನೆಯ ಭಾಗ ಭಟ್ಟರ ಸಮಗ್ರ ವ್ಯಕ್ತಿತ್ವವನ್ನು ಕಟ್ಟಿಕೊಡುವ ಪ್ರಯತ್ನವಾಗಿದ್ದು ಇಲ್ಲಿನ ೨೮ ಲೇಖನಗಳಲ್ಲಿ ಭಟ್ಟರು ಸ್ನೇಹಶೀಲ ವ್ಯಕ್ತಿಯಾಗಿ, ಹಿರಿಯಣ್ಣನಾಗಿ, ಕಲಾವಿದರ ಪರವಾಗಿ ನಿಂತ ಕವಿಯಾಗಿ, ಮುಕ್ತ ಮನಸ್ಸಿನ ಸ್ನೇಹಿತನಾಗಿ, ಹೆಮ್ಮೆಯ ಮೇಸ್ಟ್ರು ಆಗಿ, ಅನುಕರಣೀಯ ವ್ಯಕ್ತಿ – ಚೈತನ್ಯದ ಚಿಲುಮೆಯಾಗಿ ಬಿಂಬಿತರಾಗಿದ್ದಾರೆ. ಪ್ರಸ್ತುತ ಭಾಗದ 'ರಾಗದ ಬೆನ್ನೇರಿ' ಎಂಬ ಹಾಮಾನಾ ಅವರ ಲೇಖನದಲ್ಲಿ, ಯಶಸ್ಸು ಪಡೆಯುವ ಆಶೆಯಿಂದ ರಾಗದ ಬೆನ್ನೇರಿ ಹೋಗುವ ಆತುರದಲ್ಲಿ ಕ್ಯಾಸೆಟ್ ಕವಿಗಳಿಗೆ ಹೇಳಿರುವ ಕಿವಿಮಾತುಗಳು ಸಮಯೋಚಿತವಾಗಿವೆ. ಅವರ ಮಾತುಗಳನ್ನೇ ಪುನರುಚ್ಚರಿಸುವುದಾದರೆ 'ರಾಗದ ಬೆನ್ನು ಹತ್ತಿ ಭಾವನೆಗಳು ಹೊರಟಾಗ ಕವಿ ತನ್ನ ಕೆಲಸವನ್ನು ಸಮರ್ಪಕವಾಗಿ ಮಾಡದೆ ಹೋಗುವ ಅಪಾಯಗಳುಂಟು. ರಾಗದ ಪರಿಕರಗಳಾಗಿ ಏಕತಾನದ ಪ್ರಾಸ, ಅನವಶ್ಯಕ ಪದ ಜೋಡಣೆ, ಒಗ್ಗದ ದೀರ್ಘತೆ ಇವುಗಳಿಂದ ಕಾವ್ಯದ ಶಕ್ತಿ ಸ್ವರೂಪ ಕುಗ್ಗುತ್ತದೆ. ನಿಜವಾದ ಕವಿ ಇದಕ್ಕೆ ಗಮನ ಕೊಡಬೇಕು. ರಾಗ, ಭಾವಗಳನ್ನು ಹಿಂಬಾಲಿಸಬೇಕು. ಭಾವ ರಾಗವನ್ನು ಅವಲಂಬಿಸಬಾರದು. ಸರಳತೆ ಕಾವ್ಯ ಶ್ರೇಷ್ಠತೆಯನ್ನೇನೂ ಕೆಡಿಸದು. ಆದರೆ ಅದು ಇನ್ನೊಂದನ್ನು ದೃಷ್ಟಿಯಲ್ಲಿಟ್ಟುಕೊಂಡಿದ್ದಾಗಿರಕೂಡದು, ಅಷ್ಟೇ. ಮೊದಲು ಸೃಷ್ಟಿ, ಆಮೇಲೆ ಸಂವಹನ. ಸಂವಹನಕ್ಕಾಗಿಯೇ ಸೃಷ್ಟಿಯಾಗಬಾರದು'.

ಹೆಚ್ಚು ಹೆಚ್ಚು ಕಿವಿಗಳಿಗೆ ಮುಟ್ಟಬೇಕೆಂಬ ಆಕರ್ಷಣೆಗೆ ಬಲಿಯಾಗಿ ಸಂವಹನ ಮಾಧ್ಯಮಗಳ ಪ್ರಲೋಭನೆಗೆ ಶರಣಾಗಿ ಒಂದರ್ಥದಲ್ಲಿ ಅದರ ಗುಲಾಮರಾಗಿ ಕಾಗದದ ಹೂವುಗಳನ್ನು ಸೃಷ್ಟಿಸಿ ಮಾರುತ್ತಿರುವ ಕನ್ನಡದ ಕೆಲವು ಭಾವಗೀತೆಕಾರರು ಇದನ್ನು ಅವಶ್ಯ ಗಮನಿಸಬೇಕು. ಪ್ರಸ್ತುತ ಭಾಗದಲ್ಲಿ ಕನ್ನಡದ ಖ್ಯಾತ ಕವಿಗಳು, ಕಾದಂಬರಿಕಾರರು, ನಾಟಕಕಾರರು, ವಿಮರ್ಶಕರು, ಭಾಷಾವಿಜ್ಞಾನಿಗಳು, ಸಂಶೋಧಕರು, ಪ್ರತಿಭಾವಂತ ಅಧ್ಯಾಪಕರು ಇತ್ಯಾದಿ ಇತ್ಯಾದಿಯಾಗಿ ಭಟ್ಟರನ್ನು ಹೊಗಳಿ ಹೊಗಳಿ ಹೊನ್ನಶೂಲಕ್ಕೇರಿಸಿದ ಲೇಖನಗಳೇ ಇಡಿಕಿರಿದು, ಓದುವಾಗ ಏಕತಾನತೆ ಒದಗಿ ನಿರಾಸೆ ಹುಟ್ಟಿಸಿದರೂ...

ಬಿ.ಆರ್. ಛಾಯಾ ಅವರ 'ನಮ್ಮ ಭಟ್ಟಮಾಮ' ಲೇಖನದೊಳಗೆ ಬಿಂಬಿತವಾಗಿರುವ ಭಟ್ಟರ ವ್ಯವಹಾರ ಜ್ಞಾನ; ಲೇಖಕರ ಪರವಾನಗಿ ತೆಗೆದುಕೊಳ್ಳದೆಯೇ ಅವರ ಭಾವಗೀತೆಗಳನ್ನು ಬಳಸಿಕೊಂಡವರನ್ನು ಭಟ್ಟರಿಂದ ರಕ್ಷಿಸಿಕೊಳ್ಳಲು ಮುಂದಾಗಿ ಸ್ವತಃ ತಮ್ಮನ್ನೇ ಅನಾವರಣ ಗೊಳಿಸಿಕೊಳ್ಳುವ ವೈ.ಕೆ. ಮುದ್ದುಕೃಷ್ಣರ ಜಾಣತನ!... ಮುಂದೆ ಭಟ್ಟರೊಂದಿಗೆ ಅವರ

ಗೆಳೆತನ!... ಸಿ. ಅಶ್ವಥ್ ಅವರು ಲೇಲೇಲೇ.. ಎಂದು ಟ್ಯೂನ್ ಹಾಕುತ್ತಿದ್ದಂತೆಯೇ ಅಲ್ಲೇ ಕೆಳಗೆ ಬಿದ್ದಿದ್ದ ವಿಲ್ಸ್ ಫಿಲ್ಟರ್ ಸಿಗರೇಟಿನ ಕಾಗದದ ಮೇಲೆ ಆ ಲಯಕ್ಕೆ ಒಪ್ಪುವಂತೆ ಒಂದು ಪದ್ಯವನ್ನೇ ಬರೆದು ಮುಗಿಸುವಂತಹ ಸನ್ನಿವೇಶಗಳು ಅನಿರೀಕ್ಷಿತವಾಗಿ ಪ್ರಕಟಗೊಂಡು ಭಟ್ಟರ ಮನುಷ್ಯ ಸಹಜ ದೌರ್ಬಲ್ಯಗಳನ್ನು ಅರಿಯುವಲ್ಲಿ ಸಹಾಯಕವಾಗಿವೆ! 'ಸ್ವರ್ಗ ಮೂರೇ ಗೇಣು ಉಳಿದಿತ್ತು' 'ಕಲ್ಲುಸಕ್ಕರೆ ಚಪ್ಪರಿಸಿದ ಅನುಭವ', 'ನಮ್ಮ ಹೆಮ್ಮೆಯ ಮೇಸ್ಟ್ರು' ಮುಂತಾದ ಲೇಖನಗಳೊಳಗಿನ ಅವರ ಶಿಷ್ಯರ ಅನ್ನಿಸಿಕೆಗಳು ಭಟ್ಟರ ಮೇಲಿನ ಗೌರವ ಹೆಚ್ಚಿಸುವುದರಲ್ಲಿ ಸಹಾಯಕವಾಗುವಂತಿವೆ.

ಪ್ರಸ್ತುತ ಗ್ರಂಥದ ಮೂರನೆಯ ಭಾಗದಲ್ಲಿ ಎನ್.ಎಸ್. ಎಲ್ ಕೃತಿಗಳನ್ನು ಕುರಿತು ಸವಿಸ್ತಾರವಾದ ೬೩ ಲೇಖನಗಳಿವೆ. ಭಟ್ಟರ 'ವೃತ್ತ' ಕವನ ಸಂಕಲನಕ್ಕೆ ೧೯೬೮ರಲ್ಲಿ ಜಿ.ಎಸ್.ಎಸ್. ಬರೆದ ಮುನ್ನಡಿ 'ನಿರಾತಂಕ ಮನೋಭಾವದ ಕವಿ' ಶೀರ್ಷಿಕೆಯಡಿ ಪುನರ್ಮುದ್ರಿತವಾಗಿದ್ದು ಈ ಲೇಖನದಲ್ಲಿ ಭಟ್ಟರ ಪ್ರಥಮ ಕವನ ಸಂಕಲನದ ಮೊದಲ ಕವಿತೆ 'ಸೀಮಂತಿನಿ' ಕುರಿತು ಸೊಗಸಾದ ಒಳನೋಟವಿದೆ. ಇದೇ ಲೇಖನದಲ್ಲಿ ಜಿ.ಎಸ್.ಎಸ್. ಅವರು ಸಾಹಿತ್ಯಕ್ಷೇತ್ರದಲ್ಲಿನ ಗುಂಪುಗಾರಿಕೆ ಕುರಿತು ಬರೆಯುತ್ತಾರೆ. 'ಸಮಾನ ಮನೋಧರ್ಮವುಳ್ಳ ಜನ ವೈಚಾರಿಕ ಜಾಗೃತಿಗಾಗಿ ಒಂದು ಗುಂಪಾಗುವುದು ಸಹಜವಾದರೂ, ಬರಬರುತ್ತಾ ತಮ್ಮ ತಮ್ಮ ವೈಯಕ್ತಿಕ ಸ್ವತಂತ್ರ ವಿಚಾರಶೀಲತೆಯನ್ನು ಬೆಳೆಯಿಸಿಕೊಳ್ಳುವ ಬದಲು ಆ ಗುಂಪಿನ ಮುಖವಾಣಿಯಾಗಿ ಸಾಮೂಹಿಕವಾಗಿ ಆಲೋಚಿಸತೊಡಗುತ್ತಾರೆ. ಹೀಗೆ ಸಾಮೂಹಿಕವಾಗಿ ಆಲೋಚಿಸುವ ಪದ್ಧತಿ ಅತ್ಯಂತ ಅಪಾಯಕಾರಿಯಾದದ್ದು. ವ್ಯಕ್ತಿಗೆ ಹಾಗೂ ಪಂಥಕ್ಕೆ, ಯಾವುದೇ ಒಂದು ಗುಂಪಿಗೆ ತತ್ವಶಃ ತಾವು ಬದ್ಧರಾಗಿದ್ದರೂ ತಮಗೆ ತಾವೇ ಸ್ವತಂತ್ರರಾಗಿ ಆಲೋಚಿಸುತ್ತಿದ್ದೇವೆ, ಅದನ್ನು ಧೈರ್ಯವಾಗಿ ಪ್ರಕಟಿಸಬೇಕು ಎಂದು ಕಂಡುಕೊಳ್ಳುವವರು ತೀರ ವಿರಳ. ಯಾವ ಒಂದು ಗುಂಪಿಗೆ ಸೇರದೆ ಹೊರಗೆ ನಿಂತ ವ್ಯಕ್ತಿಗಳು ತಾವು ಏಕಾಕಿಗಳಾಗಿ, ಅನಾಥರಾಗಿ, ಗುಂಪುಗಾರಿಕೆಯ ಜನರ ಟೀಕೆಗೋ ಅನಾದರಕ್ಕೋ, ಅವಜ್ಞತೆಗೋ ಪಾತ್ರರಾಗಬೇಕಾದದ್ದು ಅನಿವಾರ್ಯ. ಇಂದು ಇಂತಹ ಗುಂಪುಗಳು ತಿಳಿದವರಿಂದ, ತಿಳಿಯದವರಿಂದ ರೂಪುಗೊಂಡಿವೆ. ಹೊಸದಾಗಿ ಬರೆಯುವವರು, ಅಷ್ಟೆ ಏಕೆ, ಸಾಕಷ್ಟು ಶಕ್ತರಾದವರೂ ಸಹ ತಮ್ಮ ಇಚ್ಛೆಯಿಂದಲೋ ಅಥವಾ ಗುಂಪಿನ ಕೆಲವು ಬುದ್ಧಿವಂತರ ಚಾಕಚಕ್ಯತೆಯಿಂದಲೋ, ತಮ್ಮ ಪ್ರಕಾಶನ ಹಾಗೂ ಪ್ರಸಾರಕ್ಕಾಗಿ ಇಂಥ ಗುಂಪುಗಳ ಆಕರ್ಷಣೆಯನ್ನೋ ರಕ್ಷಣೆಯನ್ನೋ ಬಯಸುವಂಥ ಒಂದು ಆತಂಕ ಇಂದಿನ ಪರಿಸರದಲ್ಲಿದೆ'.

೧೯೬೮ರಲ್ಲಿ ಈ ರೀತಿಯಾಗಿ ಬರೆಯುವ ಜಿ.ಎಸ್.ಎಸ್. ಅವರ observation ಇಂದಿಗೂ ಪ್ರಸ್ತುತವಾಗಿರುವುದನ್ನು ಕಂಡರೆ ಆಶ್ಚರ್ಯವೆನಿಸುತ್ತದೆ. ಇದೇ ಭಾಗದಲ್ಲಿ, ಯು.ಆರ್. ಅನಂತಮೂರ್ತಿ ಅವರು 'ಚಿನ್ನದ ಹಕ್ಕಿ' (ಏಟ್ಸ್ ಕವಿಯ ಮಹತ್ವದ ಕವನಗಳ ಅನುವಾದ) ಕುರಿತು ಬರೆದಿರುವ 'ಘನವಾದ ಪದ್ಯಗಳ ಹಿತವಾದ ಅನುವಾದ'

ಗಮನಾರ್ಹವೆನಿಸುತ್ತದೆ. ಮಿಕ್ಕ ಲೇಖನಗಳು ಓದಿಸಿಕೊಳ್ಳುವ ಗುಣ ಪಡೆದಿದ್ದರೂ ಯಾಕೋ ಅಂತಹ ಉತ್ಸಾಹ ಮೂಡಿಸುವುದೇ ಇಲ್ಲ.

ಪ್ರಸ್ತುತ ಗ್ರಂಥದ ನಾಲ್ಕನೆಯ ಭಾಗದಲ್ಲಿ ಭಟ್ಟರ ಕೃತಿಗಳನ್ನು ಕುರಿತಾದ ಇಪ್ಪತ್ತೆರಡು ಪತ್ರಿಕಾ ವಿಮರ್ಶೆಗಳನ್ನು ಕಲೆಹಾಕಲಾಗಿದೆ. 'ಶ್ರೀ ಲಕ್ಷ್ಮೀನಾರಾಯಣ ಭಟ್ಟರ ಕಾವ್ಯ ದೊಡ್ಡ ಧ್ಯೇಯವನ್ನುಳ್ಳ ಮತ್ತು ಅದನ್ನು ಸಾಧಿಸುವ ಪ್ರಯತ್ನದಲ್ಲಿ ಸೋಲದೆ ಇರುವ ಕಾವ್ಯ' ಎಂದು ಪ್ರೊ. ಕೀರ್ತಿನಾಥ ಕುರ್ತಕೋಟಿ ಭಟ್ಟರ 'ಚಿತ್ರಕೂಟ' ಕುರಿತು ತಮ್ಮ ಪ್ರಜಾವಾಣಿ ವಿಮರ್ಶೆಯಲ್ಲಿ ಹೇಳಿದರೆ, ಅದೇ ಕವನ ಸಂಕಲನ ಕುರಿತು – ಬದುಕಿನ ಉತ್ಕರ್ಷದ ಬಗೆಗೆ ಅದಮ್ಯ ಆಶಾವಾದಿತ್ವವನ್ನು ಹೊಂದಿರುವ, ವರ್ತಮಾನದ ಒಡಲಲ್ಲಿ ಇರುವ 'ಆರ್ಷ' ಪ್ರಜ್ಞೆಯನ್ನು ಚಿತ್ರಿಸುವ 'ಚಿತ್ರಕೂಟ' ಭಟ್ಟರ ನವೋದಯ ದೃಷ್ಟಿಯ ನವ್ಯ ಸೃಷ್ಟಿಗೆ ಸಾಕ್ಷಿಯಾಗಿದೆ ಎನ್ನುತ್ತಾರೆ – ಎಂ.ಎಲ್. ಅಚ್ಯುತರಾವ್, ತಮ್ಮ ಮಲ್ಲಿಗೆಯಲ್ಲಿನ ಪುಸ್ತಕ ವಿಮರ್ಶೆಯಲ್ಲಿ. ಬಿ.ಭಾಸ್ಕರರಾವ್ ಅವರು ತರಂಗ ಪತ್ರಿಕೆಯಲ್ಲಿನ ಪುಸ್ತಕ ವಿಮರ್ಶೆಯಲ್ಲಿ, 'ಸುನೀತ' ಅನುವಾದ ಕುರಿತು ಮಾದರಿ ಅನುವಾದ ಎಂದು ಶ್ಲಾಘಿಸಿದರೆ, ಕೊರತೆ ನೀಗುವ ಉತ್ತಮ ಕಾಣಿಕೆ ಎಂದು ಜಿ.ಎಸ್. ಆಮೂರ ಅವರು ಪ್ರಜಾವಾಣಿ ವಿಮರ್ಶೆಯಲ್ಲಿ ಬರೆಯುತ್ತಾರೆ. ಮುರಳೀಧರ ಉಪಾಧ್ಯ ಹಿರಿಯಡ್ಕ ಅವರು ಭಟ್ಟರ 'ಹೊಳೆಸಾಲಿನ ಮರ' ಕುರಿತು ಬರೆಯುತ್ತಾ "ಭಟ್ಟರು ನವ್ಯಕಾವ್ಯದ ಜತೆಗೆ ಭಾವಗೀತೆಗಳನ್ನು ಬರೆದ ಕವಿ. ಅವರು ಎರಡು ದೋಣಿಗಳಲ್ಲಿ ಕಾಲಿಟ್ಟು ಜಯಿಸಿದ್ದಾರೆ. 'ಹೊಳೆಸಾಲಿನ ಮರ' ಕನ್ನಡದ ನವ್ಯಕಾವ್ಯ ಮತ್ತು ಭಟ್ಟರ ಕಾವ್ಯ ಪ್ರತಿಭೆ ಎರಡೂ ಕ್ರಿಯಾಶೀಲವಾಗಿರುವುದನ್ನು ಸಾಬೀತು ಪಡಿಸುವ ಸಂಕಲನ" ಎಂದು ತರಂಗ ಪತ್ರಿಕಾ ವಿಮರ್ಶೆಯಲ್ಲಿ ಹೇಳಿದ್ದರೆ; ಇದೇ ಸಂಕಲನ ಕುರಿತು ಮಲ್ಲೇಪುರಂ ಜಿ. ವೆಂಕಟೇಶ್, ಕನ್ನಡಪ್ರಭದಲ್ಲಿ – "ಕವನಸಂಕಲನದ ಶೀರ್ಷಿಕೆಯ ಪದ್ಯ ಮೊದಲೋದಿಗೇ ನಮ್ಮ ನೋಟವನ್ನು ಗಪ್ಪನೆ ಹಿಡಿಯುತ್ತದೆ. ಭಟ್ಟರು ಇಲ್ಲಿ ಪದಗಳೊಡನೆ ನಡೆಸಿರುವ ಚೆಲ್ಲಾಟ, ಆ ಪದಗಳ ಮೂಲಕ ಅನೂಹ್ಯ ಲೋಕವನ್ನು ಸೃಷ್ಟಿಸುವ ತವಕ, ಜೊತೆಜೊತೆಗೆ ಪ್ರಕೃತಿಯ ಉಸಿರಾಟ–ಮಾನವನ ಅಕ್ಷುಣ್ಣ ಬದುಕು, ಇವನ್ನು ಕೇಂದ್ರೀಕರಿಸಿ ಕೊಂಡು ನಮ್ಮ ಮನಸ್ಸನ್ನು ದೋಚುತ್ತದೆ. ಪದ್ಯದ ಮೂಲಕ ಮನಸ್ಸುಗಳ ರಿಂಗಣಗುಣಿತವನ್ನು ಜೋಡಿಸುವ ಅರ್ಥ ಶರೀರ, ಶಬ್ದಗಾರುಡಿ, ಆಧುನಿಕ ಕನ್ನಡ ಕಾವ್ಯದ ಅಧ್ಯಯನ ಶ್ರದ್ಧೆ, ತಪಸ್ಸುಗಳ ಫಲವಾಗಿ ಇಲ್ಲಿನ ಅನೇಕ ಪದ್ಯಗಳು ಅರಳಿವೆ" ಎಂದು ಬರೆಯುತ್ತಾರೆ.

ಮೇಲೆ ಕಾಣಿಸಿದ ಈ ಪತ್ರಿಕಾ ವಿಮರ್ಶೆಗಳೂ ಸೇರಿದಂತೆ ಈ ಗ್ರಂಥದ ಅನೇಕ ಲೇಖನಗಳು ಓದಿದಾಗ, ಅದರಲ್ಲೂ ಭಟ್ಟರ ಕಾವ್ಯವನ್ನು ಕುರಿತ ವಿಮರ್ಶೆಯ ಲೇಖನಗಳನ್ನು ಓದಿದಾಗ, ನನ್ನ ಮನಸ್ಸಿಗೆ ಢಾಳಾಗಿ ಗೋಚರಿಸಿದ್ದು, ನಮ್ಮ ಕನ್ನಡ ವಿಮರ್ಶಕರ ಹಿಪಾಕ್ರಸಿ. ಈ ನಿಟ್ಟಿನಲ್ಲಿ ತಮ್ಮ ದಾಕ್ಷಿಣ್ಯಪರ ವಿಮರ್ಶೆಯ ಮೂಲಕ ಅವರು ಭಟ್ಟರಿಗೆ ಅನ್ಯಾಯ ಬಗೆದಿದ್ದಾರೆ ಎಂದೇ ಹೇಳಬಹುದು!

ಭಾಗ ಐದರಲ್ಲಿ ಭಟ್ಟರ ಜೊತೆ ನಡೆಸಿದ ಒಂದು ಸಂದರ್ಶನವಿದೆ. ಹಾಗೂ ಭಟ್ಟರ

ವಿವಿಧ ಕಾವ್ಯ ಸಂಗ್ರಹಗಳಿಂದ ಕಲೆಹಾಕಿದ ಎನ್.ಎಸ್.ಎಲ್. ಸೂಕ್ತಿಗಳಿವೆ. ಒಂದೆರಡು ಸೂಕ್ತಿಗಳನ್ನು ಉಲ್ಲೇಖಿಸುವುದಾದರೆ–

'ಕಳ್ಳ ಮುತ್ತಿಟ್ಟರೆ ಹಲ್ಲೆಣಿಸಿಕೊಳ್ಳುವ ಕಾಲ'

'ಸಾರ ತೀರದ ಬಾಳು ತುರಿದ ತಿರುಳಿನ ಕರಟ'

'ತನ್ನ ಹಿನ್ನೆಲೆಯಲ್ಲಿ ಹಬ್ಬುತ್ತಿರುವ ಮೂಲ ಶ್ರುತಿಗೆ ಮತ್ತೆ ಪಡಿನುಡಿಯಬೇಕು'...ಇತ್ಯಾದಿ...

ಆಯಾ ಕವನಗಳಲ್ಲಿ ಈ ಸಾಲುಗಳು ಸಾಂದರ್ಭಿಕ ಅರ್ಥ ಹೊರಡಿಸಬಹುದಾದರೂ ಬಿಡಿಯಾಗಿ ಇವನ್ನು ಕಲೆಹಾಕಿರುವ ಔಚಿತ್ಯ ತಿಳಿಯುವುದಿಲ್ಲ. ಭಾವಗೀತೆಗಳ ಸಂಗ್ರಹದಿಂದ ಆರಿಸಿ ಕಲೆಹಾಕಿರುವ ಗೀತೆಗಳ ಕೆಲವು ಸಾಲುಗಳು ಮಾತ್ರ ಮೆಲುಕು ಹಾಕುವಂತಿವೆ. ಉದಾಹರಣೆಗೆ:

**'ಕುರುಡು ಹಮ್ಮು ಬೇಟೆಯಾಡಿ**
**ಪ್ರೀತಿ ನರಳಿದೆ'**

**'ಯಾರು ಏನೆ ಜರೆಯಲಿ**
**ಯಾವ ಹೆಸರೆ ಕರೆಯಲಿ**
**ತಾಳಿನಿಲ್ಲು ಜೀವವೇ**
**ಸಹನೆ ಆದುವೆ ಗೆಲ್ಲಲಿ'**

**'ಹೂವು ಅರಳಿ ಕಾಯಿಗೆ**
**ಕಾಯಿ ಹೊರಳಿ ಹಣ್ಣಿಗೆ**
**ಹಣ್ಣೊಳಗಿನ ಬೀಜ ಚಿಮ್ಮಿ**
**ಮತ್ತೆ ತವರು ಮಣ್ಣಿಗೆ'**

**'ಎಲೆ ಹೂವು ಮರ ಚಿಗುರು**
**ಮಾತ್ರ ಪ್ರತ್ಯಕ್ಷ**
**ಇದನೆತ್ತಿ ನಿಲಿಸಿದಾ ಬೇರು ಅದೃಶ್ಯ'... ಇತ್ಯಾದಿ...**

ಈ ಗ್ರಂಥದಲ್ಲಿ ಭಟ್ಟರ ಅರ್ಧಾಂಗಿಯಾದ ಶ್ರೀಮತಿ ಜ್ಯೋತಿಯವರಿಂದಾಗಲೀ, ಭಟ್ಟರ ಮಕ್ಕಳಿಂದಾಗಲೀ ಒಂದಾದರೂ ಲೇಖನ ಬರೆಸದೆ ಇರುವುದು ದೊಡ್ಡ ಕೊರತೆಯಾಗಿ ಕಾಣುತ್ತದೆ.

ಇಡಿಯಾಗಿ ಈ ಗ್ರಂಥವನ್ನು ಕುರಿತು ಹೇಳುವುದಾದರೆ: ಮೆಚ್ಚುಗೆ + ಆಶ್ಚರ್ಯ ಎರಡೂ ಉಂಟಾಗುತ್ತವೆ. ಹಾಗೆಯೇ ಏಳುನೂರು ಪುಟಗಳ ಈ ಬೃಹತ್ ಗ್ರಂಥ ಭಟ್ಟರನ್ನಾಗಲೀ, ಅವರ ಕೃತಿಗಳನ್ನಾಗಲಿ ನಿಜಾರ್ಥದಲ್ಲಿ ಬಿಂಬಿಸಿದೆ ಎಂಬುದರ ಬಗ್ಗೆ ನನಗೆ ಅನುಮಾನವೂ ಇದೆ.

('ಸಾಹಿತ್ಯ ಸಂವಾದ', ಏಪ್ರಿಲ್–ಜೂನ್ ೧)

# ಹೂದೋಟದಲ್ಲೊಂದು ಸುತ್ತು

ಈಗ ಎರಡು ವರ್ಷಗಳ ಹಿಂದೆ ನಾನು ತಾತ್ಕಾಲಿಕವಾಗಿ 'ಸಾಹಿತ್ಯ-ಸಂವಾದ'ದ ಸಂಪಾದಕಿಯಾಗಿದ್ದಾಗ ಮೃತ್ಯುಂಜಯ ಅವರು ಅದರಲ್ಲಿ ಪ್ರಕಟಣೆಗೆಂದು ಎರಡು ಪದ್ಯಗಳನ್ನು ಕಳಿಸಿದ್ದರು. ನಾನು ನನ್ನ ಅಭಿರುಚಿಯ ಯೋಗ್ಯತಾನುಸಾರ ಅವು ಅಷ್ಟೇನೂ ಒಳ್ಳೆಯ ಪದ್ಯಗಳಲ್ಲ ಎಂದು ತೀರ್ಮಾನಿಸಿ, ಅವರಿಗೆ 'ಇನ್ನೂ ಒಳ್ಳೆಯ ಪದ್ಯಗಳನ್ನು ಬರೆಯಿರಿ' 'ಸಂವಾದ'ದಲ್ಲಿ ಖಂಡಿತವಾಗಿಯೂ ಪ್ರಕಟಿಸುವೆ ಎಂದು ಬರೆದೆ. ನಿಜ ಹೇಳಬೇಕೆಂದರೆ ಅವು ಕೆಟ್ಟ ಪದ್ಯಗಳೇನೂ ಆಗಿರಲಿಲ್ಲ. ಅದಕ್ಕಿಂತ ಸಾಧಾರಣ ಎನಿಸುವಂತಹ ಪದ್ಯಗಳನ್ನು ನಾವು ಪ್ರಕಟಿಸಿದ್ದುಂಟು. ಆದರೆ ಕೊಂಚ ಅವಿಶದತೆಯ ಛಾಯೆ ಆ ಕವನಗಳನ್ನು ಆವರಿಸಿದ್ದರಿಂದ ಆ ಅವಿಶದತೆ ಅವರ ಮುಂದಿನ ಬೆಳವಣಿಗೆಗೆ ಅಪಾಯಕಾರಿಯಾಗಬಹುದು ಎಂಬ ಸಂದೇಹ ನನ್ನಲ್ಲಿ ಉಂಟಾದದ್ದರಿಂದ, ಎಲ್ಲಕ್ಕಿಂತ ಮಿಗಿಲಾಗಿ ಅವು ಮೃತ್ಯುಂಜಯ ಅವರ ಮೊದಲ ಹೆಜ್ಜೆಗಳಾದ್ದರಿಂದ ನಾನು ಸದಾಶಯವನ್ನು ಇಟ್ಟುಕೊಂಡೇ ಬರೆದಿದ್ದೆ. ಆದರೆ ಮರುಟಪಾಲಿನಲ್ಲೇ ನನಗೆ ಅವರಿಂದ ಕೊಂಚ ಕಟುವಾದ ಉತ್ತರವೇ ಬಂದಿತು. ಅವರಿಗೆ ನನ್ನ ಹಿತೋಪದೇಶ ನೋವು ತಂದಿತ್ತು. ನಾನು ಅದನ್ನೇನೂ ಅಷ್ಟಾಗಿ ಗಂಭೀರವಾಗಿ ತೆಗೆದುಕೊಳ್ಳದೆ 'ಹುಡುಗು ಬುದ್ಧಿ' ಎಂದು ಬೈದುಕೊಂಡು (ನಾನವರಿಗಿಂತ ಕೆಲವೇ ವರ್ಷಗಳಿಂದ ಹಿರಿಯಳಾಗಿದ್ದರಿಂದ) ಇಂದಲ್ಲ ನಾಳೆ ಅವರಿಗೆ ಅರ್ಥವಾದೀತು ಎಂದೆಲ್ಲ ಅಂದುಕೊಂಡು ನನ್ನನ್ನೇ ಸಮಾಧಾನಿಸಿಕೊಳ್ಳಲು ಅಣಿಯಾಗುತ್ತಿರುವಾಗಲೇ ಒಂದೆರಡು ದಿನಗಳಲ್ಲಿ 'ದಯವಿಟ್ಟು ಕ್ಷಮಿಸಿ' ಎಂಬ ಮಾರೋಲೆಯೂ ಅವರಿಂದ ಬಂದು ನನ್ನ ಮನಸ್ಸು ನಿರಾಳವಾಯಿತು. ಇದು ಅವರ ಕಾವ್ಯ ಪ್ರೇಮವನ್ನೂ ಮತ್ತು ಆ ದಾರಿಯಲ್ಲಿ ಮುನ್ನಡೆಯಬೇಕೆಂಬ ಹಂಬಲವನ್ನೂ ಅರ್ಥ ಮಾಡಿಕೊಳ್ಳಲು ನನಗೆ ಸಹಾಯ ಮಾಡಿತು.

ನಾನು ಆವೊತ್ತು ಅವರ ಕವಿತೆಯನ್ನು ಕುರಿತಾಗಿ ಮಾಡಿದ ಟೀಕೆಯನ್ನು ಸವಾಲಾಗಿ ಸ್ವೀಕರಿಸಿದುದಕ್ಕೆ ಸಾಕ್ಷಿಯೋ ಎಂಬಂತೆ ಇವೊತ್ತು ತಮ್ಮ ಪ್ರಥಮ ಕವನಸಂಗ್ರಹದ ಹಸ್ತಪ್ರತಿಯನ್ನು ನನ್ನ ಕೈಯಲ್ಲಿರಿಸಿದ್ದಾರೆ. 'ಆವೊತ್ತು ಹಾಗೆ ಅಂದ್ರಲ್ಲಾ... ಈಗ ಏನು ಹೇಳ್ತೀರಿ?' ಎಂಬ ಬಿಂಕ ಇದರ ಹಿನ್ನೆಲೆಯಲ್ಲಿದೆ ಎಂದು ನಾನು ಬಲ್ಲೆ. 'ನನ್ನ ವರ್ಕ್ ಎಷ್ಟು ಚೆನ್ನಾಗಿತ್ತು, ಆದರೂ ಇವರಿಗೆ ಇಷ್ಟವಾಗದೇ ಹೋಯಿತಲ್ಲ' ಎಂಬ ಮಗುವಿನ ಹತಾಶಭಾವದಿಂದ ಉಕ್ಕಿದ ವಿಷಾದಭಾವಕ್ಕಿಂತ ಬೇರೆ ಅಲ್ಲ ಅದು. ಹಾಗಾಗಿ ಈ ದಿನ ನಾನು ಸಂತೋಷದಿಂದಲೇ ಓದಿ ನನ್ನ ಅನಿಸಿಕೆಯನ್ನು ಹಂಚಿಕೊಳ್ಳಲು ಇಷ್ಟಪಡುತ್ತೇನೆ.

'ಕವಿತೆ' ಎಷ್ಟಾದರೂ ನೆಲದ ಋಣ, ನೀರಿನ ಕರುಣೆ, ಸೂರ್ಯನ ಹರಕೆಯಿಂದ ಪಲ್ಲವಿಸುವ ಹೂವಿನಂತೆ ಅಲ್ಲವೆ? ಒಂದು ಬಾರಿ ನೆಟ್ಟು ನೀರುಣಿಸಿದ ಬಳಿಕ ಕವಿಯ ಕೆಲಸ ಮುಗಿಯಿತು. ಆ ಹೂವಿನ ರೂಪ, ಸ್ಪರ್ಶ, ರಸ, ಗಂಧಕ್ಕೆ ಮರುಳಾಗಿ ಆಹಾ! ಎಂಥಾ ಹೂವು ಎಂದು ಒಂದು ಕ್ಷಣ ದೂರ ನಿಂತು ನೋಡಿ ಸಂಭ್ರಮಿಸುವ ದಾರಿಹೋಕನೆ ಸಹೃದಯ. ಈ ತೋಟ ಯಾರದ್ದು? ಇದರ ಮಾಲೀಕನಾರು? ಇವೆಲ್ಲ ಅವನಿಗಾದರೂ ಯಾಕೆ ಬೇಕು? ಆ ಹೂವು ಬೆಳೆದಾತನ ಕಣ್ಣೀರ ಕುಡಿದು ಬೆಳೆದಿರಬಹುದು, ಅಥವಾ ಅವನ ಬೆವರಿನ ಹನಿಯಿಂದಲೇ ಉಳಿದಿರಬಹುದು. ಅಥವಾ ಅದರ ನಂಟು ಮಳೆ ನೀರಿನೊಂದಿಗೆ ಮಾತ್ರ ಇರಬಹುದು. ಆದರೆ ಅವೆಲ್ಲ ಹೂವಿನಲ್ಲಿ ಪ್ರಕಟವಾಗುವುದೆ? ಅವೆಲ್ಲ ಪೂರಕವಾದ ಅಂಶಗಳೇ ಹೊರತು ನಿರ್ಣಾಯಕವಾದವುಗಳಲ್ಲ. 'ಹೂವು–ಹೂವೇ?' ಅದು ನೆಟ್ಟು ನೀರುಣಿಸಿದವನಿಗಿಂತಲೂ ಮೊದಲೂ ಇತ್ತು. ಮುಂದೂ ಇರುವುದು. ಕವಿತೆ ಕೂಡ ಹಾಗೆಯೇ ಅಲ್ಲವೇ?

ಸದ್ಯದ ಕನ್ನಡ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಈ ಭಾವಕ್ಕೆ ಪುರಸ್ಕಾರ ಸಿಗುತ್ತಿದೆಯೇ? ಈ ಕವಿತೆಯನ್ನು ಬರೆದವನಾರು? ಅವನ ಹಿನ್ನೆಲೆ ಏನು? ಅವನು ಪ್ರತಿನಿಧಿಸುತ್ತಿರುವ ಗುಂಪು ಯಾವುದು? ಆ ಗುಂಪಿನ ಬಲವೇನು? ಆ ಗುಂಪಿನ ಒಲವೇನು ಆ ಒಲವನ್ನು ಪುರಸ್ಕರಿಸಿದರೆ ಅದರಿಂದ ಸಿಗುವ ಲಾಭವೇನು? ಈ ಅಂಶಗಳೇ ಮುಖ್ಯವಾಗಿ ಕವಿತೆ ಮೂಲೆಗುಂಪಾಗಿದೆ. 'ರೀ ಈ ಹೂವು ಚೆನ್ನಾಗಿದೆಯೇನ್ರೀ' ಎಂದು ಕೇಳಿದರೆ ಅವರು ತಮ್ಮ ಪಂಚೇಂದ್ರಿಯಗಳನ್ನಷ್ಟೇ ವಿಶ್ವಾಸಕ್ಕೆ ತೆಗೆದುಕೊಂಡು ತಮ್ಮ ಅಭಿಪ್ರಾಯ ಹೇಳಲಾರರು. ಮೂರು ಮತ್ತೊಂದು ಜನರು ತೀರ್ಪು ಕೊಟ್ಟ ಮೇಲೆಯೇ ಲೋಕಾಭಿರಾಮವಾಗಿ ಅದೂ ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ಹೇಳುವರು. ಇಂತಹ ಆತ್ಮದ್ರೋಹದ ವಿಮರ್ಶೆಯ ಪರಿಪಾಠ ಈಗ ಬರೆಯಲು ಆರಂಭಿಸಿರುವ ಎಳೆಯರಿಗೆ ಎಂತಹ ಆಘಾತಕರ ಪರಿಸ್ಥಿತಿಯನ್ನು ನಿರ್ಮಿಸಿದೆ ಹಾಗೂ ಅವರು ಬರೆಯುವ ಅದಮ್ಯ ಉತ್ಸಾಹವನ್ನೇ ಚಿವುಟಿ ಹಾಕಿದೆ ಎಂಬುದನ್ನು ನಾನಿಲ್ಲಿ ಸೂಚಿಸಲೇಬೇಕಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಅಪರೂಪಕ್ಕೊಬ್ಬ ವಿಮರ್ಶಕ ಪ್ರಾಮಾಣಿಕವಾಗಿ ಇದ್ದುದನ್ನು ಇದ್ದಹಾಗೆಯೇ ಹೇಳಿದರೂ ಅವನ ಪ್ರಾಮಾಣಿಕತೆಯನ್ನೆ ಗುಮಾನಿಯಿಂದ ನೋಡುವಂತಾಗಿರುವುದೂ ಸುಳ್ಳಲ್ಲ. 'ಬತ್ತಿಯ ಹೊತ್ತಿಸಿ, ಬುತ್ತಿಯ ಉಣ್ಣಿಸಿ' ಬಾಯ್ತುಂಬ ಹರಸಿ 'ನಿನ್ನ ದಾರಿ ನಡೆ' ಎಂದು ಹರಸುವ ಹಿರಿಯರು ಈಗೆಲ್ಲಿದ್ದಾರೆ? ಇನ್ನು ಸರ್ಕಾರಿ ಕಛೇರಿಗಳಂತೆ ಕಾರ್ಯ ನಿರ್ವಹಿಸುತ್ತಿರುವ, ಯಾವುದೇ ರೀತಿಯ ಹೊಸ ಪ್ರಯೋಗಗಳಿಗೆ ತೆರೆದುಕೊಳ್ಳದ ನಮ್ಮ ಪ್ರಭಾವಿ–ಜನಪ್ರಿಯ ಪತ್ರಿಕೆಗಳ ಬಗ್ಗೆ ಏನೂ ಹೇಳದಿರುವುದೇ ಒಳಿತು. ಮಾರ್ಗದರ್ಶನವೇ ಇಲ್ಲದಂತಹ ಇಂತಹ ಪರಿಸ್ಥಿತಿಯಲ್ಲಿ 'ಸ್ವ'ವನ್ನಷ್ಟೇ ನಂಬಿ ತನ್ನ ಆಶೆ ಆಕಾಂಕ್ಷೆ, ಅನುಭವ, ಅನುಭೂತಿಗಳಿಗೆ ಅಕ್ಷರಗಳ ಮೂಲಕ ರೂಪುಗೊಡುತ್ತಿರುವ ಮೃತ್ಯುಂಜಯ ಅವರ ಎದೆಗಾರಿಕೆಯನ್ನು ನಾನು ಮನಸಾ ಅಭಿನಂದಿಸುತ್ತೇನೆ.

ಮೃತ್ಯುಂಜಯ ಅವರ ಕವಿತೆಗಳಲ್ಲಿನ ಸ್ಥಾಯಿಭಾವ ಯೌವ್ವನಕ್ಕೆ ಸಹಜವಾದ 'ಪ್ರೇಮ'. ಆ ಪ್ರೇಮವೆಂಬ ಭಾವದ ಹಿಂದಿರುವ ಕುತೂಹಲ, ಹಂಬಲ, ಮುಗ್ಧತೆ, ಬೆರಗು, ಕೊರಗು, ಹಟ ಇವೆಲ್ಲವನ್ನೂ ತನಗೆ ಸಹಜವೆನಿಸುವ ಲಯದಲ್ಲಿ ತೀವ್ರವಾಗಿ ದಾಖಲಿಸಿರುವುದು ಇಲ್ಲಿನ ವಿಶೇಷ. ಮೃತ್ಯುಂಜಯ ಇದೀಗ ತಾರುಣ್ಯದ ಹೊಸ್ತಿಲಲ್ಲಿ ಅಡಿ ಇಟ್ಟವರಾದ್ದರಿಂದ, ಅವರು ಕಂಡ ಉಂಡ ನೋವು–ಅವಮಾನ, ಅನುಭವಿಸಿದ ನವುರಾದ ಭಾವ ಇವೆಲ್ಲವನ್ನೂ ಹೆಚ್ಚು ಉತ್ಸಾಹದಿಂದಲೇ ಪರಿಸರದ ಪ್ರತಿಮೆಗಳ ಮುಖಾಂತರ ಪೋಣಿಸಿದ್ದಾರೆ. ಇಲ್ಲಿನ ಬಹುತೇಕ ಪದ್ಯಗಳು ಹೃದಯವನ್ನು ನೆಮ್ಮಿ ಬರೆದವುಗಳು.

> **ಓ ಅಪೂರ್ವ ಕನಸಿನಂಥ ಮುಂಜಾವು ಮಂಜಿನ ದುಪ್ಪಟಿ ಹೊದ್ದ**
> **ಬೆಟ್ಟದವ್ವನ ಬೆನ್ನು**
> **ಮೇಲಿಂದ ಕಚಗುಳಿ ಕೂಸುಮರಿ ಆಡಿ ಇಳಿದು ಬಂದಂಥವನು ಯಾರಿವನು**
> **'ಯಾರೋ ನೀನು?' ಎನಲು–ಮರ ಹೊಳೆದು ಗಿಡ ಬೆಳಗಿ ಹೂ ಬಿರಿದೊ ಎಲ್ಲ**
> **ಕುಂತ ಹಕ್ಕಿಗೆ ರೆಕ್ಕೆ ಮೌನ ಕಣಿವೆಗೆ ಹಾಡು ಮರೆತ**
> **ಮಾತಿಗೆ ಸ್ಮೃತಿಯ ಹೊನಲು ಹಿರಿಯಿತಲ್ಲಾ...** *(ಕಲ್ಲ ಕೆರೆಯ ಹಾಡು)*

ಎಂಬಲ್ಲಿನ ಉತ್ಸಾಹವಾಗಲಿ—

> **ನೀನೀಗ ಕಮ್ಮನೆಯ ಮಣ್ಣಾಗಿರುವೆ**
> **ನೀನು ಬಿಡುವ ಹುಚ್ಚೆಳ್ಳು ಸೂರ್ಯಕಾಂತಿಗೆ**
> **ಕಣ್ಣರಳಿ, ನೋಡುತ್ತಾ ನಿಂತು ಬಿಡುವೆ.** *(ನನ್ನ ಮೆಚ್ಚಿನ ಕವಿಗೆ)*

ಎಂಬಲ್ಲಿನ ಮುಗ್ಧತೆಯಾಗಲಿ—

> **ನಿಮ್ಮ ದಿರುಸಿಗೆ ದಂಗಾದೊ**
> **ಕಣ್‌ಕಾಂತಿಗೆ ಬೆರಗಾದೊ**
> **ಮಾತೊ–ಮಾಟವೊ ಒಳಗಾದೊ**
> ......................................
> ......................................
> **ಅಗಣಿತ ಸುಳ್ಳುಗಳನ್ನು ನುಡಿದಿದ್ದೆವು**
> **ಅನಂತ ತಟಾಕಗಳಲ್ಲಿ ಸುಮ್ಮನೆ ಕಳೆದಿದ್ದೆವು** *(ಹಿರಿಯರಿಗೆ ನಮಸ್ಕಾರ)*

ಎಂಬಲ್ಲಿನ ಬೆರಗು: ಕೊರಗಾಗಲಿ

> **ಹಠ ತೊಟ್ಟರೆ ಮಾತ್ರ ಹಂಬಲ ತುಂಬಿರೆ**
> **ಮಾತ್ರ ಊರುವುದು**
> **ಬೇರು ನೀರು ಊರುವುದು ಪಲ್ಲವಿಸುವುದು**
> **ದಿಟ್ಟ ದ್ವಿದಳ ಚಾಚುವುದು**
> **ಅದು ಹಗಲ ಹಣ್ಣನ್ನ ತೊಳೆಯಾಗಿಸಿ**

ಅದು ಇರುಳ ಹೂವನ್ನ ದಳವಾಗಿಸಿ
ಎಷ್ಟೆಲ್ಲ ಶತಪಥ ತಪ ಹಗಲಿರುಳ ಹರಣ...

*(ಒಂದು ಅನುರಾಗಕ್ಕಾಗಿ ಎಷ್ಟೆಲ್ಲ)*

ಎಂಬಲ್ಲಿನ ಅವಿಶ್ರಾಂತ ಹಂಬಲವಾಗಲಿ ತರುಣ ಹೃದಯದ ಬೆಚ್ಚನೆಯ ಸ್ಪಂದನಗಳೇ ಆಗಿವೆ.

ಸದ್ಯ ಮಹಿಳಾಕಾವ್ಯ ಒಂದು 'ಶಕ್ತಿಮಾರ್ಗ'ವಾಗಿ ರೂಪುಗೊಳ್ಳುತ್ತಿರುವ ಸಂದರ್ಭದಲ್ಲಿ ಅದರ ಗುಣಾತ್ಮಕ ಅಂಶಗಳೂ ಮೃತ್ಯುಂಜಯ ಅವರ ಕವನಗಳ ಮೇಲೆ ಪ್ರಭಾವಿಸಿರುವುದನ್ನು ನಾನು ಗುರುತಿಸದೆ ಇರಲಾರೆ. ಅಂತೆಯೇ 'ಸ್ತ್ರೀ' ಬಗ್ಗೆ ಅವರ ದೃಷ್ಟಿಕೋನವೂ ಆರೋಗ್ಯಪೂರ್ಣ ನಿಲುವಿನಿಂದ ಕೂಡಿದ್ದಾಗಿದೆ ಎಂಬುದಕ್ಕೆ ಈ ಸಾಲುಗಳು:

ಸಾವಿನ ಗಳಿಗೆಗಳನ್ನು ಗುಳಿಗೆಗಳೆಂಬಂತೆ ನುಂಗಿ
ಮುಗುಳ್ನಗಿಸುವ ಬೆಳಗಿನ ಬಿಸಿಲಿನಂಥಾ ಹಚ್ಚನೆಯ ಪ್ರೀತಿ
...............................................................
ದಟ್ಟೈಸಿದ ಮೋಡಗಳು ಸೂರ್ಯನನು ಬಂಧಿಸಿದಂತೆ
...............................................................
ನನಗೆ ಬೇಕಿರುವುದು ಹೊನ್ನಲ್ಲ, ಮಣ್ಣಲ್ಲ,
ಬೀಸು ರೆಕ್ಕೆಗಳಂಥ, ನೀಳ ಕೈ ತೋಳುಗಳು
ನನ್ನ ಹಿಡಿದಿಡುವ ನಿನ್ನ ಹಿಡಿ ಹೃದಯ *(ಕಣ್ಣುಗಳೆಂದರೆ ಕಣ್ಣುಗಳು)*

ತಿಂಗಳ ಬೆಳಕಿನಂಥ ಕಣ್ಣುಳ್ಳವಳ ಜತೆ
ಬುಗ್ಗೆಯಂಥ ನಗೆಯ ಜತೆ
ಹೂದಂಡೆ, ನಕ್ಷತ್ರ ಮೂಗುನತ್ತಿನ ಜತೆ
ಚಂದ್ರ ಕುಂಕುಮ...........................
ದಿಟ್ಟಬೊಟ್ಟಿನ ಕಾಡಿಗೆ ಜತೆ *(ಗೆಳೆಯ ಮದುವೆಯಾದ)*

ಓ ಚಂದ್ರಮಾ ಮಗುವನ್ನಾಗಿಯಾದರೂ
ಮಾಡಿ ಅವಳ ಮೃದು ಎದೆ ಮೇಲೆ
ನನ್ನ ಮಲಗಿಸು (ಸರೋದ)

—ಸಾಕ್ಷಿಯಾಗಿ ಒದಗಿ ಬಂದಿವೆ.

ಕೋಮಲ ಭಾವದ ಮಹಾಪೂರದಲ್ಲಿ ಮೃತ್ಯುಂಜಯ ಅವರು ಕೊಚ್ಚಿಕೊಂಡು ಹೋಗಿಲ್ಲ ಎನ್ನುವುದಕ್ಕೆ ಸಾಕ್ಷಿಯಾಗಿ ಸಾತ್ವಿಕ ಪ್ರತಿಭಟನೆಯನ್ನು ಸೂಚಿಸುವ; ಆದರೆ ಕಲಾತ್ಮಕವಾಗಿ ಅಷ್ಟೇನೂ ಯಶಸ್ವಿಯಾದ 'ಮಣ್ಣಿನ ಹುಡುಗ' ಎಂಬ ಕವನವನ್ನು ಇಲ್ಲಿ ಪರಿಶೀಲಿಸಬಹುದು.

ಮಾಡುತಾನೆ ಮಣ್ಣು ಮಿದ್ದು ಹುಲ್ಲು ಕಸ ತೆಗೆದು
ಬಂಡಿಗಾಲಿ ತೇರು
ಎಳೆಯುತಾನೆ ಉದ್ದಾನೆ ಕಡ್ಡಿ ಚುಚ್ಚಿ ಸಾಗುವಂತೆ ತೇರು
.......................................................
ಆ ಮಣ್ಣಿನ ತೇರು ಚೆನ್ನದಾಗಿರಂಗೈತಲ್ರಿ.................
ಆ ಕಣ್ಣಿನ ತೇರು ಆ ಮೀಸೆಯ ಜೋರು
ಏನ್ ಕಾಲ್ಕುಣಿತದ ಮೋಜು........................... *(ಮಣ್ಣಿನ ಹುಡುಗ)*

ಇಲ್ಲಿ 'ಮೋಜು' ತಾರಕಕ್ಕೇರುವ ಸಮಯದಲ್ಲಿಯೇ 'ಸೂಳೆ... ಮಗನೆ, ತಿದಿ ಒತ್ತು ಬಾ ಅಂದ್ರೆ... ಮೆರೆಯಾಕೆ ಬಂದೀಯಾ' ಆಗಿ ತೇರು ನಿಂತು ಬಾಲಕನ ಕನಸು ಭಗ್ನವಾಗುತ್ತದೆ, ಆಶಯ ಮತ್ತು ವಾಸ್ತವ ಬೇರೆ ಬೇರೆ ಎಂದು ಕವಿ ಅರಿತಿರುವುದರಿಂದಲೇ ಇಲ್ಲಿ ಗೌಡರನ್ನು ನೆಲ ಕಚ್ಚಿಸದೆ ಕ್ರಾಂತಿಯ ಕಹಳೆ ಮೊಳಗಿಸದೆ ಸಹಜಗತಿಯಲ್ಲಿ ವೈಷಮ್ಯದ ವಿಷಚಕ್ರದ ಉರುಳುವಿಕೆಯನ್ನು ವಿಷಾದಭಾವದಿಂದ ಕವಿ ಚಿತ್ರಿಸಿದ್ದಾನೆ. ಈ ಕವಿತೆ ಮೇಲುಜಾತಿ: ವರ್ಗದ 'ಅಹಂ' ಅಗೋಚರವಾಗಿ ಗೌಡರ ವ್ಯಕ್ತಿತ್ವವನ್ನು ನಾಶಪಡಿಸುತ್ತಿರುವುದನ್ನೂ ಅದೇ ಸಮಯಕ್ಕೆ ಅದು ಮುಗ್ಧ ಬಾಲಕನ ಸಂತಸವನ್ನು ಕಸಿದುಕೊಳ್ಳುತ್ತಿರುವುದನ್ನು ಧ್ವನಿಸುತ್ತಾ 'ಜಾತಿ'ಯಿಂದ ಬಿಡುಗಡೆ ಹೊಂದಲೇಬೇಕಾದ ಅಗತ್ಯವನ್ನು ಪ್ರತಿಪಾದಿಸುತ್ತದೆ.

'ನಡೆ–ನುಡಿ' ಎರಡನ್ನು ಗಣನೆಗೆ ತೆಗೆದುಕೊಂಡರೂ ವಿಶೇಷತೆಯನ್ನು ತೋರದ, ಅವಿಶದತೆ ಥಾಳಾಗಿ ಗೋಚರಿಸುವ, ಸಹೃದಯನಿಗೆ ಸಂತೋಷ ನೀಡದ ಕೆಲವು ಕವಿತೆಗಳು ಈ ಸಂಗ್ರಹದಲ್ಲಿ ಇವೆ. ಉದಾ: 'ಶ್ರಾವಣ', 'ಎಲ್ಲ ಮಲಗಿದ ಮೇಲೆ ಕವಿತೆ', 'ಆಕೆ ಹಾಡುವುದನ್ನು ಕೇಳಿದೆ', 'ಕೂಗುಮಾರಿ', 'ಯುಗಾದಿ' ಇತ್ಯಾದಿ. ಆದರೆ ಹೂದೋಟವೆಂದ ಮೇಲೆ ಎಲ್ಲ ರೀತಿಯ ಹೂವುಗಳು ಇರುವುದು ಸಾಧ್ಯವಾದ್ದರಿಂದ ಹಾಗೂ ಅಪರೂಪದ ಸುಗಂಧಯುಕ್ತ ಹೂವುಗಳೇ ಹೆಚ್ಚಾಗಿ ಗೋಚರಿಸುವುದರಿಂದ ಅವರ ಈ ಆಯಶಸ್ವಿ ರಚನೆಗಳನ್ನು ಆಕ್ಷೇಪಣೆಯ ದೃಷ್ಟಿಯಿಂದ ಖಂಡಿತ ನೋಡಲಾರೆ.

ಒಂದಂತೂ ನಿಜವಿರಬಹುದು. ನೂರಾರು ಕವಿಗಳು ನಡೆದ ಹಾದಿಯನ್ನೇ ಮೃತ್ಯುಂಜಯ ಅವರೂ ನಡೆಯಬೇಕು. ಹೊಸ ದಾರಿ ಎಂಬುದು ಇದೆಯೆ? ಹೊಸ ನಡಿಗೆ ಎಂಬುದು ಇದೆಯೇ? ಅಥವಾ ಅದು ಕೇವಲ ನಡೆಯುವಾತನ ಭಾವವೆ? ಮೃತ್ಯುಂಜಯರೂ ತನ್ನ ದಾರಿಯನ್ನು ನಡೆಯಲಿ, ಕಲ್ಲುಮುಳ್ಳು ಎಡರುತೊಡರುಗಳನ್ನು ನಿವಾರಿಸಿಕೊಳ್ಳುವುದನ್ನು ನಡೆದಂತೆ ಕಲಿಯಲಿ ಎಂದು ಈ ಸಂದರ್ಭದಲ್ಲಿ ತುಂಬು ಮನಸ್ಸಿನಿಂದ ಹಾರೈಸುತ್ತೇನೆ.

(ಕೆ.ಪಿ. ಮೃತ್ಯುಂಜಯ ಅವರ 'ಒಂದು ಅನುರಾಗಕ್ಕಾಗಿ ಎಷ್ಟೆಲ್ಲ'
ಕವನ ಸಂಕಲನಕ್ಕೆ ಬರೆದ ಮುನ್ನುಡಿ – ೧೯೯೯)

●

# ಮದುವೆಯ ನಂತರದ ಕತೆ... ಮುಳುಗಡೆಯ ವ್ಯಥೆ...

'ಹೊಳೆಯ ಹಾದಿ' ಭಾಗೀರಥಿ ಹೆಗಡೆ ಅವರ ಮೊದಲ ಕಾದಂಬರಿ. ಧಾರಾವಾಹಿ ರೂಪದಲ್ಲಿ 'ಸಕಾಲಿಕ' ವಾರಪತ್ರಿಕೆಯಲ್ಲಿ ನಾಕು ವರುಷದ ಹಿಂದೆ ಪ್ರಕಟವಾಗುತ್ತಿದ್ದಾಗ, ಧಾರಾವಾಹಿಗಳನ್ನು ಓದುವುದನ್ನು ಎಂದೋ ನಿಲ್ಲಿಸಿದ್ದ ನಾನು ಆರಂಭದಿಂದಲೂ 'ಹೊಳೆಯ ಹಾದಿ'ಯ ಓದುಗಳಾಗಿದ್ದೆ. ಕಾರಣ–ಸಂವೇದನಾಶೀಲ ಕತೆಗಾರ್ತಿ/ಕವಿಯಾಗಿರುವ ಭಾಗೀರಥಿಯವರು ಹೇಗೆ ಬರೆದಿರಬಹುದು ಎಂಬ ಕುತೂಹಲ. ಒಂದೆರಡು ಕಂತುಗಳನ್ನು ಕುತೂಹಲದಿಂದ ಗಮನಿಸುತ್ತಿರುವಂತೆಯೇ ಕೊನೆಕೊನೆಗೆ ಬಿಡಲಾರದವಳಾಗಿ ವಾರ ವಾರ ಕಾದು ಕುಳಿತು 'ಸಕಾಲಿಕ' ಅಂಚೆಯಲ್ಲಿ ಬಂದ ಕೂಡಲೇ ಓದಿ ಮುಗಿಸುತ್ತಿದ್ದುದು ನೆನಪಾಗುತ್ತಿದೆ. ತದನಂತರ ಮೈಸೂರಿನಿಂದ ಶಿವಮೊಗ್ಗೆಗೆ ವಾಸಸ್ಥಳ ಬದಲಾಯಿಸಿದಾಗ ಪತ್ರಿಕೆ ಕೈ ಸೇರದೆ, ಕೊನೆಗೆ ಪತ್ರಿಕೆಯೂ ನಿಂತು ಕೊನೆಯ ಕಂತುಗಳನ್ನು ಓದಲಾಗಿರಲಿಲ್ಲ. ಧಾರಾವಾಹಿಯ ಅಂತ್ಯ ಹೇಗಾಯಿತೋ ಎಂಬ ಕುತೂಹಲ ನನ್ನಲ್ಲಿ ಹಾಗೆಯೇ ಉಳಿದು ಇತ್ತೀಚೆಗೆ ಬೇರೊಂದು ಕೆಲಸದ ನಿಮಿತ್ತ ಅವರನ್ನು ಫೋನ್ ಮೂಲಕ ಸಂಪರ್ಕಿಸಿದಾಗ ಅವರ ಬರಹ ಕುರಿತು ನನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದೆ. ಭಾಗೀರಥಿ ಅವರ 'ಹೊಳೆಯ ಹಾದಿ' ಅಂದು ನಾನು ಓದಿದ ಕಂತುಗಳ ಮಟ್ಟಿಗಾದರೂ ತುಂಬಾ ಸತ್ವಯುತವಾದ ಬರವಣಿಗೆ ಎಂದು ನನಗನ್ನಿಸಿದ್ದರಿಂದ ಅದಿನ್ನೂ ಯಾಕೆ ಪುಸ್ತಕ ರೂಪದಲ್ಲಿ ಬಂದಿಲ್ಲ ಎಂದೂ ಕೇಳಿದೆ. ಶಿರಸಿಯ ಮೂಲೆಯಲ್ಲೆಲ್ಲೋ ಕೂತು ಬರೆಯುವ ತಮ್ಮ ಬರಹಕ್ಕೆ ಇನ್ನೂ ಪ್ರಕಟಣೆಯ ಭಾಗ್ಯ ದೊರೆತಿಲ್ಲ ಎಂದವರು ಹೇಳಿದರು. ಆದರೆ ತೀರಾ ಇತ್ತೀಚೆಗೆ, ತಡವಾಗಿಯಾದರೂ ಬೆಳಕು ಕಾಣುತ್ತಿರುವ 'ಹೊಳೆಯ ಹಾದಿ' ಯ ಬಗ್ಗೆ ನಾಕು ಮಾತು ಬರೆದುಕೊಡಿ ಎಂದು ಕೇಳಿದಾಗ ನಾನು ಈ ಮೊದಲೆ ಮೆಚ್ಚಿಕೊಂಡಿದ್ದ ಕೃತಿಯಾದ್ದರಿಂದ 'ಹೂಂ' ಎಂದು ಒಪ್ಪಿಕೊಂಡೆನಾದರೂ ವಿಮರ್ಶೆಯ ಪರಿಭಾಷೆಯಲ್ಲಿ ಅದನ್ನು ವ್ಯಕ್ತಪಡಿಸಲು ಸಮರ್ಥಳಿಲ್ಲದೆ ತಡಕಾಡುತ್ತಿದ್ದೇನೆ.

ನಾನು ಐದನೆಯ ಇಯತ್ತೆಯಲ್ಲಿದ್ದಾಗ, 'ಕೆರೆಗೆ ಹಾರ'ದ ಒಂದು ಭಾಗವನ್ನು ಕನ್ನಡ ಪಠ್ಯಪುಸ್ತಕದಲ್ಲಿ ಅಳವಡಿಸಿದ್ದರಿಂದ ಓದಿದ್ದೆ. ನನ್ನಲ್ಲಿನ 'ಸ್ತ್ರೀ ಪ್ರಜ್ಞೆ'ಯನ್ನು ಮೊಟ್ಟ ಮೊದಲಿಗೆ ಆ ಎಳೆಯ ವಯಸ್ಸಿನಲ್ಲಿ ಉದ್ದೀಪಿಸಿದ ಕೃತಿ ಅದೆಂದು ಹೇಳಬಹುದು. ಭಾಗೀರಥಿ ಅವರ 'ಹೊಳೆಯ ಹಾದಿ' ಓದಿದಾಗಲೂ ನನ್ನಲ್ಲಿ ಮತ್ತೆ ಮರುಕಳಿಸಿದ್ದು ಅದೇ 'ಕೆರೆಯ ಹಾರ'ದ

ಭಾಗೀರಥಿ. ಓರ್ವ ಮಹಿಳೆಯ ಹೋರಾಟದ, ವಾಸ್ತವ ಬದುಕಿನ ತಲ್ಲಣಗಳನ್ನು ಕಟ್ಟಿಕೊಡುತ್ತಲೇ ಭಾರತೀಯ ಮಹಿಳೆಯರು ಸಾಗಿಬಂದ ಹಾದಿಯನ್ನು (ಚರಿತ್ರೆಯನ್ನು) ನಿರೂಪಿಸಿದಂತೆ ನನಗನಿಸುತ್ತಿತ್ತು. ಕನ್ನಡ ಮಹಿಳಾ ಕಾದಂಬರಿಯ ಚರಿತ್ರೆಯಲ್ಲಿ ಮಹತ್ವದ ಮೈಲಿಗಲ್ಲುಗಳಾದ ಫಣಿಯಮ್ಮ (ಎಂ.ಕೆ. ಇಂದಿರಾ ೧೯೭೬) ಚಂದ್ರಗಿರಿಯ ತೀರದಲ್ಲಿ (ಸಾರಾ ಅಬೂಬಕರ್– ೧೯೮೪) ಇವುಗಳ ಹಾದಿಯಲ್ಲಿ ಭಾಗೀರಥಿ ಅವರ 'ಹೊಳೆಯ ಹಾದಿ' ಕೂಡ ಸಾಗುತ್ತದೆ ಎಂಬುದು ನನ್ನ ಪ್ರಾಮಾಣಿಕ ಅನಿಸಿಕೆ. ಈ ಮೂರು ಕಾದಂಬರಿಗಳ ಭಿತ್ತಿ ಒಂದೇ... ಅದುವೆ 'ಹೆಣ್ಣಿನ ಅಳಲು'. ಅಳು ಒಂದೇ. ಅಳುವವರು ಮಾತ್ರ ಬೇರೆ ಬೇರೆ. 'ಮದುವೆ' ಈ ಮೂವರ ಅಂದರೆ (ಫಣಿಯಮ್ಮ, ನಾದಿರಾ, ಸುಕನ್ಯ) ಬದುಕಿನ ಗತಿಯನ್ನೆ ಬದಲಾಯಿಸಿ ತೇಲಿಸುವ ಬದಲು ಮುಳುಗಿಸುವುದು. ಇದು, ಈ ಮೂರೂ ಕಾದಂಬರಿಯಲ್ಲಿನ ಸಮಾನ ಅಂಶ. ಕುಟ್ಟು–ಬೀಸು–ಕುದಿಸು–ಹುರಿ–ಕರಿ–ಬೇಯಿಸು–ಬಡಿಸು–ತೊಳಿ–ಬಳಿ–ಹೊರು–ಹೆರು–ಮಾಡು–ಮಟ್ಟು–ಮಡಗು ಇದರ ಹೊರತಾಗಿ ಇನ್ನೊಂದರಿಯದ ಹೆಂಗಸರು ಸವೆಸಿದ ಹಾದಿ ತೋರುವುದಲ್ಲದೆ, ಅಂದಿನಿಂದ ಇಂದಿನವರೆಗೆ ಹೊಳೆಯಲ್ಲಿ ಸಾಕಷ್ಟು ನೀರು ಹರಿದಿದ್ದರೂ ಅದು ಕಣ್ಣೀರಿನ ಹೊಳೆ ಎಂಬ ವಿಷಾದದ ಭಾವವನ್ನು ಮನದಲ್ಲಿ ಉಂಟುಮಾಡುತ್ತದೆ.

ನಿಜ. ಭಾಗೀರಥಿ ಅವರು ಬರೆದಿರುವುದು ಮುಳುಗಡೆಯ ಕತೆ. ಹಾವೆನ್ನದೆ, ಪಕ್ಕಿಯನ್ನದೆ, ಹುಲಿಯೆನ್ನದೆ, ಮೊಲವೆನ್ನದೆ, ಮರವೆನ್ನದೆ, ಮೊಳಕೆಯೆನ್ನದೆ ಎಲ್ಲವನ್ನೂ ಮುಳುಗಿಸಿದ ಕತೆ. ಮರಮಟ್ಟುಗಳ ಜತೆಜತೆಗೇ ಒಂದು ಸಂವೇದನಾಶೀಲ ಸೂಕ್ಷ್ಮ ಚೇತನ ಮುಳುಗಿಹೋದ ಕತೆ. ಮುಳುಗಡೆಯ ಕತೆಯಾದರೋ... ಹೆಣ್ಣಿನ ಬಿಡುಗಡೆಯ ಹಂಬಲದ ಜತೆ ತಳುಕು ಹಾಕಿಕೊಂಡಿರುವುದರಿಂದ, ಅನೇಕ ಕೊರತೆಯ ಹೊರತಾಗಿಯೂ ಹೃದಯಕ್ಕೆ ಹತ್ತಿರವಾಗುವ ಕೃತಿ ಎಂದು ದಾಖಲಿಸಲು ಸಂತೋಷವಾಗುತ್ತದೆ.

(ಭಾಗೀರಥಿ ಹೆಗಡೆ ಅವರ 'ಹೊಳೆಯ ಹಾದಿ' ಕಾದಂಬರಿಗೆ
ಬರೆದ ಮುನ್ನುಡಿಯ ಮಾತುಗಳು – ೨೦೦೮)



# ಹಿತ್ತಲ ಹೂವು

ಹೂವಿನ ಮಾರುಕಟ್ಟೆಯಲ್ಲಿ ಕನಕಾಂಬರ, ಸೇವಂತಿಗೆ, ಮಲ್ಲಿಗೆ, ಸಂಪಿಗೆ, ಗುಲಾಬಿ ನೋಡಿ ನೋಡಿ ಅಭ್ಯಾಸವಾದ ಕಣ್ಣುಗಳಿಗೆ ಹೂವಿನ ಪ್ರಪಂಚವೆಂದರೆ ಇಷ್ಟೇ ಎಂಬ ಮಾಯೆ ಆವರಿಸುವ ಸಾಧ್ಯತೆ ಇದೆ. ಕವಿತೆ ಎಂದರೆ ಕುವೆಂಪು, ಬೇಂದ್ರೆ, ಪು.ತಿ.ನ., ಅಡಿಗ, ಕೆ.ಎಸ್.ನ., ಜಿ.ಎಸ್.ಎಸ್., ಕಣವಿ ಹೀಗೆ ಗೆರೆ ಕೊರೆದುಕೊಂಡು ನಿಂತಿದ್ದ ನನಗೆ ಹಿರಿಯ ಕವಿಗಳಾದ ವೀಚಿಯವರ 'ಮಹಾಯಾನದ' ಕವಿತೆಗಳು ಹೂವಿನ ಮಾರುಕಟ್ಟೆಗೆಂದೂ ಬಾರದ, ಹಿತ್ತಲ ಹೂವುಗಳಾದ ರಂಜ, ಸುರಗಿ, ದಾಸವಾಳ, ದೇವಕಣಗಿಲೆಯ ನೆನಪು ತಂದವು.

ಕಳೆದ ಐವತ್ತು ವರ್ಷಗಳಿಂದ ಕವಿತೆ ಬರೆಯುತ್ತಿರುವವರಾದರೂ ಎಲೆ ಮರೆಯ ಕಾಯಂತೆ ಮರೆಯಲ್ಲೇ ಇರಬಯಸುವ ವೀಚಿಯವರ 'ಕಾಳು ಕಣಜಕ್ಕೆ ಬಂದೀತು ಹೇಗೆ?' ಕವಿತೆಯ ಈ ಕೆಳಕಾಣಿಸಿದ ಸಾಲುಗಳು ನನ್ನನ್ನು ಆತ್ಮ ನಿರೀಕ್ಷಣೆಗೆ ಒಡ್ಡಿದವು.

> **ಬಿತ್ತದಯೆ ಬೆಳೆಗಾಗಿ ಕಾಯ್ದು ಕುಳಿತಿರುವಾಗ**
> **ಪಾಳು ಬಿದ್ದಿದೆ ಹೊಲವು**
> **ಹಾಳು ಸುರಿಯುವ ಮುಗಿಲು**
> **ಸುತ್ತಲೂ ಬೋಳಾದ ಬಯಲು ವಿಸ್ತಾರ**
> **ಕಾಳು ಕಣಜಕ್ಕೆ ಬಂದೀತು ಹೇಗೆ?**

ವೀಚಿಯವರು ಕೃಷಿಯನ್ನು ಗಮನದಲ್ಲಿ ಇರಿಸಿಕೊಂಡು ಈ ಕವನ ಬರೆದಿರುವರಾದರೂ, ಕವಿಗೆ, ಪರದತ್ತ ಕಣ್ಣು ನೆಟ್ಟಿರುವ ಸಾಧಕನಿಗೆ, ಯಾರಿಗೆಲ್ಲ ಇದನ್ನು ಅನ್ವಯಿಸಬಹುದಲ್ಲಾ ಎಂದು ನನಗೆ ತೋರಿತು.

ವೀಚಿ ಪ್ರಕೃತಿಯ ಮಾಯಾಜಾಲದಲ್ಲಿ ಸಿಲುಕಿರುವ ಕವಿ. ಅವಳ ಚೆಲುವಿಗೆ, ಮಮತೆಗೆ ವಿವಶರಾದಂತೆ ತೋರುವ ಅವರು ಆಕೆಯ ತಲ್ಲಣಕ್ಕೆ ಆದ್ಯತೆ ನೀಡಿದಂತೆ ತೋರುವುದಿಲ್ಲ. ಪ್ರಕೃತಿ, ಪ್ರಣಯ ಹಾಗೂ ಆಧ್ಯಾತ್ಮ ಇವು ವೀಚಿಯವರ ಕಾವ್ಯದ ಕೇಂದ್ರಬಿಂದುಗಳು. ಪ್ರಕೃತಿಯಲ್ಲಿ ಪ್ರೇಮವನ್ನೂ, ಪ್ರೇಮದಲ್ಲಿ ಅನುಭಾವವನ್ನೂ ಅರಸುವ ಅವರು,

> **ನಕ್ಷತ್ರ ಹೊದಿಕೆಯಿಂದ**
> **ಮಾತಾಡಿದೆ ನೀನು**

**ಸುಪ್ತಕ್ಕೂ ಜಾಗೃತಕ್ಕೂ**
**ಸಂಚರಿಸಿದೆ ನಾನು** (ಅನುಗ್ರಹ)

ಎಂದು ಇನಿದನಿಯಲ್ಲಿ ಮನಮುಟ್ಟುವಂತೆ ಬರೆಯಬಲ್ಲರು.

ವೀಚಿ ಸೂರ್ಯನ ಬೆಳಕಲ್ಲಿ, ಬೆಳದಿಂಗಳ ತಂಪಲ್ಲಿ, ಮಣ್ಣನ್ನು ನೆಚ್ಚಿಕೊಂಡು ಕಾವ್ಯ ಕೃಷಿ ಮಾಡಿದ ಕವಿ. ಉಳುಮೆ ಯಂತ್ರ, ರಾಸಾಯನಿಕ ಗೊಬ್ಬರ, ಕ್ರಿಮಿನಾಶಕಗಳ ಹಂಗಿಲ್ಲದೆ ರಾಗ, ಭಾವ, ಜೀವ ಬಿತ್ತಿ ಬೆಳೆ ತೆಗೆದ ಸಹಜ ಕೃಷಿಕಾರ. ಅಂತೆಯೇ "ಕುದಿವ ಮೈ ಸಲಾಕೆ ನೀರಿಗೆ ಬಿದ್ದ ಕಿಡಿಯಂತೆ ಶಾಂತ", ನಾವೂ ಇವರ ಕವಿತೆಗಳ ಸನ್ನಿಧಿಯಲ್ಲಿ.

**ಇಳೆಯೊಂದೆ**
**ಮಳೆಯೊಂದೆ**
**ಗಾಳಿ ಬೆಳಕುಗಳೊಂದೆ**
**ಹುಟ್ಟಿದೆಲ್ಲಕ್ಕೂ**
**ಸೃಷ್ಟಿಯೊಡಲಿಂದ ಸುರಿವ**
**ಪ್ರೇಮ ಫಲವೊಂದೇ**
**ಇಲ್ಲಿ ಸರ್ವಕ್ಕೂ...**

ಎಂದು ಹೃದಯ ನಂಬಿ ಬರೆಯುವ ಕೃಷಿಕ ವೀಚಿಯವರ ಕವಿತೆಗಳು ಭತ್ತ, ರಾಗಿ, ಅವರೆ, ಕಡಲೆಯಂತೆಯೇ ದೇಹದ–ಜೀವದ ಪೋಷಣೆಗೆ ಅವಶ್ಯ ಎನಿಸುವಂತಹವುಗಳು.

(ವೀಚಿ ಅವರ ಅಭಿನಂದನ ಗ್ರಂಥ 'ಹಣ್ಣು ಮೆಟ್ಟದ ಅವರೆ'ಗಾಗಿ
ಬರೆದ ಲೇಖನ–೨೦೦೧)

●

# ಸ್ಥಿತಪ್ರಜ್ಞ ಸಂವೇದನೆ

ಎಂಭತ್ತರ ದಶಕದ ಪೂರ್ವಾರ್ಧದಲ್ಲಿ ಕನ್ನಡ ಕಾವ್ಯಲೋಕಕ್ಕೆ ನನ್ನಂತಹ ಎಳೆಯರು ಕಣ್ಣುಬಿಡುವ ಹೊತ್ತಿನಲ್ಲಿ ಅದಾಗಲೇ ಹೆಚ್.ಎಸ್.ವಿ.ಯವರು ಜನಪ್ರಿಯ ಕವಿಯಾಗಿದ್ದರು. ಅವರು ನನ್ನ ಜಿಲ್ಲೆಯವರು (ಅವಿಭಜಿತ ಶಿವಮೊಗ್ಗ) ಎಂಬ ಕಾರಣದಿಂದ ವಿಶೇಷ ಅಭಿಮಾನದಿಂದಲೇ ನಾನು ಆ ಹೊತ್ತು ಅವರ ಕಾವ್ಯವನ್ನು ಹೆಚ್ಚು ಓದಿದೆ ಎಂದು ಹೇಳಬಹುದು. ಆ ಹೊತ್ತು ನವ್ಯ ಬೂದಿ ಮುಚ್ಚಿದ ಕೆಂಡದಂತೆ ಬೆಚ್ಚಗಿತ್ತು... ಬಂಡಾಯದ ಆವೇಶ, ಆಕ್ರೋಶ ಏರುಗತಿಯಲ್ಲಿತ್ತು. 'ಅತ್ತ ದರಿ ಇತ್ತ ಪುಲಿ' ನಡುವೆ ದಿಗ್ಭ್ರಮೆಯಿಂದ ನಿಲ್ಲುವ ಪರಿಸ್ಥಿತಿ. ಅಂತೆಯೆ ಹೆಚ್.ಎಸ್.ವಿ.ಯವರ ಹೆಚ್ಚು ಅಬ್ಬರವಿಲ್ಲದ ಸರಳ, ಸುಂದರ, ನೇರ ಬರವಣಿಗೆ ಸಹಜವಾಗಿಯೆ ನನ್ನಂತಹ ಅನೇಕ ಹೊಸಕವಿಗಳಿಗೆ ಅಂದು ದಾರಿತೋರಿತು.

ತದನಂತರ ಕಳೆದ ಇಪ್ಪತ್ತು ವರುಷಗಳಲ್ಲಿ ನಾನು ಅನೇಕ ಬಾರಿ ಅವರ ಅಧ್ಯಕ್ಷತೆಯಲ್ಲಿ ಕವಿಗೋಷ್ಠಿಗಳಲ್ಲಿ ಕವನ ವಾಚಿಸಿರುವೆ. ಸಹಕವಿಯಾಗಿ ಅನೇಕ ಕವಿಗೋಷ್ಠಿಗಳಲ್ಲಿ ಭಾಗವಹಿಸಿರುವೆ. ಆ ಮೂಲಕ ಅನೇಕ ಸಲ ಅವರನ್ನು ಭೆಟ್ಟಿಯಾಗುವ, ಕಂಡು ಮಾತನಾಡುವ ಅವಕಾಶ ಒದಗಿ ಬಂದಿದೆ. ಓರ್ವ ಹಿರಿಯ ಕವಿಯಾಗಿ ಕಿರಿಯ ಕವಿಯಲ್ಲಿ ಎಷ್ಟು ವಿಶ್ವಾಸ ತುಂಬಬಹುದೊ, ಎಷ್ಟು ಅಕ್ಕರೆ ಸೂಸಬಹುದೊ ಅದನ್ನವರು ನಿರ್ವಂಚನೆಯಿಂದ ಮಾಡಿದ್ದಾರೆ.

ಹೆಚ್.ಎಸ್.ವಿ. ಅವರದ್ದು ಸ್ನೇಹಪೂರ್ಣ ಸಾತ್ವಿಕ ವ್ಯಕ್ತಿತ್ವ. ಅವರ ವ್ಯಕ್ತಿತ್ವದಂತೆಯೆ ಅವರ ಕಾವ್ಯ ಕೂಡ. ಅವರು ಕೇಡನ್ನು ಕಾವ್ಯದ ಬಳಿ ಸುಳಿಯಗೊಡರು. ಸೇಡನ್ನೂ ನಿರ್ಮಮಕಾರದಿಂದ ನೋಡಬಲ್ಲರು. ಘಾಟು, ಒಗರು, ಕಹಿಗೆ ಅವರ ಕಾವ್ಯದಲ್ಲಿ ಜಾಗವಿಲ್ಲ. ಹಾಗೆಯ ತೀವ್ರವಾದ ವಿಷಾದ, ದುಗುಡ, ವ್ಯಾಮೋಹ, ತಲ್ಲಣವೂ ಅಲ್ಲಿ ಕಾಣಸಿಗದು. ಒಟ್ಟಿನಲಿ ಮಂದ್ರಸ್ವರದ ಸ್ಥಿತಪ್ರಜ್ಞ ಸಂವೇದನೆ ಅವರ ಕಾವ್ಯದಲ್ಲಿ ಗೋಚರಿಸುವುದು. ಕಾಲ ಮತ್ತು ದೇಶವನ್ನು ಬೆಸೆಯುವ ಅವರ 'ಹಕ್ಕಿಯ ಗರಿ', ಚೈತನ್ಯದೆದುರು ಬಾಗುವ ವಸ್ತು ಪ್ರಪಂಚವನ್ನು ಕಾಣಿಸುವ 'ಸೇಕ್ರೆಡ್ ಹಾರ್ಟಿನ' ಮುಂತಾದ ಕವಿತೆಗಳು ಅವರಿಗೇ ಅನನ್ಯವೆನಿಸುವಂತಹ ರಚನೆಗಳು. ಅವರ ಕಾವ್ಯ ವ್ರತವಂತೂ 'ತನ್ನ ಪಾಡಿಗೆ ತಾನು ಮೂಲೆಯಲ್ಲಿ ಸುಟ್ಟುಕೊಂಡ, ಒಂದೇ ಹದದಲ್ಲಿ ಎದೆಯಲ್ಲೊಂದು ಕಿಡಿಗೆಂಡ ಹಿಡಿದ' ಪರಿಮಳ ಸೂಸುವ ಗಂಧದ ಕಡ್ಡಿಯಂತೆ...

'ಲೋಕದ ಕಣ್ಣಿಗೆ ರಾಧೆಯು ಕೂಡ
ಎಲ್ಲರಂತೆ ಒಂದು ಹೆಣ್ಣು
ನನಗೊ ಆಕೆ ಕೃಷ್ಣನ ನೋಡಲು
ಪ್ರೀತಿಯ ನೀಡಿದ ಕಣ್ಣು' *(ಲೋಕದ ಕಣ್ಣಿಗೆ)*

ಮೇಲಿಂದ ಮೇಲೆ, ಬೇರೆ ಬೇರೆ ಗಾಯಕಿಯರ ದನಿಗಳಲ್ಲಿ ಹೆಚ್.ಎಸ್.ವಿ. ಯವರ ಈ ಭಾವಗೀತೆಯನ್ನು ನಾನು ಕೇಳಿರುವೆ. ಅತ್ಯಂತ ಅರ್ಥಪೂರ್ಣವಾದ ಈ ಕವಿತೆಯನ್ನು ಕೇಳಿದಾಗೆಲ್ಲ... ಕವಿಯನ್ನು ಜನಮನದಲ್ಲಿ ನೆಲೆಗೊಳಿಸಲು ಒಂದು ಸಾರ್ಥಕ ಕವಿತೆ ಸಾಕಲ್ಲವೆ ಎಂದು ಅನಿಸುತ್ತದೆ. 'ಲೋಕದ ಕಣ್ಣಿಗೆ' ಕವಿತೆಯ ಈ ಸಾಲುಗಳು ನನಗೆ ಗೊತ್ತಿಲ್ಲದಂತೆಯೆ ಆಗಾಗ್ಗೆ ನನ್ನ ನಾಲಿಗೆ ನುಡಿದು ಅದರ ಮಧುರ ಭಾವ ನನ್ನೊಳಗಿಳಿದು, ನನ್ನೊಳಗಣ ಸಹೃದಯ ಮುದಗೊಳ್ಳುವಂತೆ ಮಾಡುತ್ತದೆ. ಆಗೆಲ್ಲ ಕವಿಯ ಬಗ್ಗೆ ಗೌರವ-ಮೆಚ್ಚುಗೆ ಇಮ್ಮಡಿಯಾಗುತ್ತದೆ.

(ಹೆಚ್.ಎಸ್. ವೆಂಕಟೇಶಮೂರ್ತಿ ಅವರ ಅಭಿನಂದನ ಗ್ರಂಥ
'ಗಂಧವ್ರತ'ಕ್ಕಾಗಿ ಬರೆದ ಲೇಖನ - ೨೦೦೪)

●

# ಮೌನ ಮೊಗ್ಗೆಯನೊಡೆದು ಮಾತರಳಿ ಬಂದಂತೆ...

ಒಂದು ಉತ್ಕಟವಾದ, ತೀವ್ರವಾದ ಭಾವನೆ, ಸಂವೇದನೆಯೇ ಕಾವ್ಯ ಎಂದು ತಿಳಿಯುವುದಾದರೆ ಆದಿ ಅನಾದಿ ಕಾಲದಿಂದಲೂ ಕಾವ್ಯ ಮನುಷ್ಯನ ಒಡನಾಡಿ ಎಂದು ಹೇಳಬಹುದಷ್ಟೇ. ಬದುಕಿದ್ದು, ಬಾಳಿದ್ದು, ಅನುಭವಿಸಿದ್ದು ದಾಖಲೆಯ ರೂಪದಲ್ಲಿ ಕಣ್ಮುಂದೆ ಇಲ್ಲ ಎಂದು ಮಾತ್ರಕ್ಕೆ ಅವು ಅಸ್ತಿತ್ವದಲ್ಲೇ ಇರಲಿಲ್ಲ ಎಂದು ತಿಳಿಯುವುದು ಅಷ್ಟು ಉಚಿತವಾಗಲಾರದು. ಹಾಗಾಗಿ ಶತಶತಮಾನಗಳ ಕಾಲ ಕವಯಿತ್ರಿಯರೇ ಇರಲಿಲ್ಲ! ಎಂಬ ಹೇಳಿಕೆಯನ್ನು ಅದರ ವಾಚ್ಯಾರ್ಥದಲ್ಲಿ ತೆಗೆದುಕೊಳ್ಳುವ ಮುನ್ನ ಎರಡು ಬಾರಿ ಯೋಚಿಸಬೇಕು ಎಂದೆನಿಸುತ್ತದೆ.

'ಮಿಕ್ಕ ಗಂಡರನ್ನು ಒಲೆಯೊಳಗಿಕ್ಕು' ಎಂದ ಅಕ್ಕಮಹಾದೇವಿ (೧೨ನೇ ಶತಮಾನ) 'ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು' ಎಂದ ಸಂಚಿ ಹೊನ್ನಮ್ಮ (೧೭ನೇ ಶತಮಾನ) 'ನುಡಿಯೊಳು ಗಿಳಿಯಂತೆ ಸಖಿಯರೊಂದಾಗಿ ಮೆಲ್ಲಡಿಯಿಡುವಳು ಹಂಸೆಯಂತೆ' ಎಂದ ಶೃಂಗಾರಮ್ಮ (೧೭ನೇ ಶತಮಾನ) 'ಯಾಕೆನ್ನ ಬ್ರಹ್ಮ ಪುಟ್ಟಿಸಿದನೊ, ಸೃಷ್ಟಿಸಿದನೊ, ಮಾತಿನ್ಯಾಕೆ ಪಡೆದಳೊ, ಸಾಕಿನ್ನು ಹೆಣ್ಣು ಜನ್ಮದ ಬಾಳು, ಯಾಕೆ ಪೇಳು ತಾಕಲೆನ್ನಯ ಗೋಳು' ಎಂದ ಹೇಳವನಕಟ್ಟೆ ಗಿರಿಯಮ್ಮ (೧೮ನೇ ಶತಮಾನ) 'ಇಷ್ಟು ಘಾತಕತನವಿಟ್ಟು ನಿನ್ಹೊಟ್ಟೆಯಲೆಷ್ಟುಪಚಾರ ಮಾತುಗಳೋ ಸಕ್ಕರೆಯಂದದಿ ಸುರಿವರೇನೋ ನಡೆ ನಿನ್ನ ಪಟ್ಟದರಾಣಿ ಮಂದಿರಕೆ' ಎಂದ ಹರಪನಹಳ್ಳಿ ಭೀಮವ್ವ (೧೯ನೇ ಶತಮಾನ) 'ಹಲಗೆಯ ಹಿಡಿದಿಲ್ಲ, ಬಳಪದಿ ಬರೆದಿಲ್ಲ, ಶ್ರೀಗುರು ನಮಗೆ ಬರೆಸಿಲ್ಲ ಕೇಳಿರವ್ವ ಲೆಕ್ಕಣಿಕೆ ನಮಗೆ ಗೊತ್ತಿಲ್ಲ' ಎಂದ ಸಾವಂತ್ರಾದೇವಿ (೧೯ನೇ ಶತಮಾನ) 'ಘಟ್ಟಿ ತೊಟ್ಟಿಲವ್ವ, ತೂಗು ತೊಟ್ಟಿಲವ್ವ, ತೊಟ್ಟಿಲದೊಳಗೆ ದಿಟ್ಟನೆ ಮಲಗಿಸಿ ಮುಟ್ಟಿ ತೂಗಿನವ್ವ, ಹೆಸರ ಇಟ್ಟೆನವ್ವ' ಎಂದ ಶಿವಲಿಂಗ ಜತ್ತಿ (೧೯ನೇ ಶತಮಾನ) ಹೀಗೆ ಹಾಡಿನ ಹುಚ್ಚನ್ನು ಅಂಟಿಸಿಕೊಂಡ ಹಲವರಲ್ಲಿ... ಕೆಲವರು ಅಚ್ಚಳಿಯದೆ ಸಾಕ್ಷಿಯಾಗಿ ಈ ಹೊತ್ತಿಗೆ ನಮ್ಮ ಮುಂದೆ ಇರುವರು.

ಹೂಬತ್ತಿ ಹೊಸೆಯುತ್ತಾ, ಹಿಡಿ ಅವಲಕ್ಕಿಗೆ, ಪುರಾಣಕ್ಕೆ ಸಂದು ಹೈರಾಣದವರು, ಗಾಣದೆತ್ತಿನಂತೆ ದುಡಿದು ಹಪ್ಪಿಟ್ಟು ಹಾಗೆಯೆ ನಿದ್ದೆಯಲ್ಲೇ ಕರಗಿಹೋದವರು, ತುತ್ತು ಅನ್ನಕ್ಕಾಗಿ ದುಡಿದುಡಿದು ಸತ್ತು, ಜೀಸತ್ತು ಪಾಡ ಎದೆಯಲ್ಲೆ ಮಡಗಿ ಮಣ್ಣಾದವರು... ಮನೆಮಂದಿ, ಮಕ್ಕಳು, ಮನೆವಾರ್ತೆಯ ನಡುವೆ ಕಳೆದು ಹೋದವರು, ಇವರ ಪಾಡು

ಹಾಡಾಗಲಿಲ್ಲ ಎಂದರೆ ಹೇಗೆ ನಂಬುವುದು? ಹಾಡಿಕೊಂಡವರು ಇದ್ದಿರಬಹುದು... ಕೇಳಿಸಿಕೊಂಡವರು? ಕೇಳಿಸಿಕೊಂಡವರೂ ಇದ್ದಿರಬಹುದು... ಕೇಳಿದುದನು ಜತನದಿಂದ ಕಾಪಿಟ್ಟವರು? ಹಗಲಿನಲ್ಲಿ ನಕ್ಷತ್ರಗಳು ಕಾಣವು ಇರುಳಿನಲ್ಲಿ ಫಳಫಳ ಮಿನಿಗಿದರೂ ನೋಡರು! ತೀವ್ರವಾದ ಪ್ರಗತಿಶೀಲವಾದ ಮಹಿಳಾಲೋಕವನ್ನು ಗುರುತಿಸುವಲ್ಲಿ ಜಗತ್ತು ಹೀಗೆಯೇ ಸೋತಿರಬಹುದು.

ಹೀಗೆ ಮೌನದಲ್ಲಿ ಹುದುಗಿಹೋದ ಲೋಕದ ವಾರಸುದಾರಿಕೆಯನ್ನು ಹೊತ್ತು ಅಕ್ಷರ ರೂಪದಲ್ಲಿ ತಮ್ಮ ನೋವು ನಲಿವುಗಳನ್ನು ದಾಖಲಿಸುವ ಭಾಗ್ಯ ದೊರೆತ ಕವಯಿತ್ರಿಯರ ಸಾಲಿನಲ್ಲಿ ಮಾಲತಿ ಪಟ್ಟಣಶೆಟ್ಟಿಯವರೂ ಇದ್ದಾರೆ ಎನ್ನುವುದೇ ಹೆಗ್ಗಳಿಕೆಯ ಸಂಗತಿ.

ಶಿಕ್ಷಣ, ಉದ್ಯೋಗದಲ್ಲಿ ಸಿಕ್ಕ ಸಮಾನ ಅವಕಾಶಗಳು, ರಾಜಕೀಯ, ಸಾಮಾಜಿಕ ಕ್ಷೇತ್ರಗಳಲ್ಲಿ ಆದ ಬದಲಾವಣೆಗಳು, ಚಾಲ್ತಿಯಲ್ಲಿದ್ದ ಸಾಹಿತ್ಯ ಚಳುವಳಿಗಳು, ಸ್ತ್ರೀವಾದದ ಪ್ರಭಾವ, "ಸ್ವ" ಎಂಬ ಅರಿವು –ಇವೆಲ್ಲದರ ಪರಿಣಾಮವಾಗಿ ಅಕ್ಷರದ ಬಗ್ಗೆ ಪ್ರೀತಿ ತೋರಿದ ಕವಯಿತ್ರಿಯರ ದಂಡೇ ಎಪ್ಪತ್ತರ ದಶಕದಲ್ಲಿ ಕನ್ನಡ ಸಾಹಿತ್ಯ ಲೋಕಕ್ಕೆ ಲಗ್ಗೆ ಇಟ್ಟಿತು.

ಸಿಟ್ಟು, ಸೆಡವು, ಆವೇಶ, ಉಲ್ಲಾಸ, ಹರ್ಷ, ವ್ಯಂಗ್ಯ, ಹೊಸ ಆಲೋಚನೆ ಈ ಎಲ್ಲ ಮೇಳೈಸಿದಂತಿದ್ದ ಹೊಸ ಮಹಿಳಾ ಕಾವ್ಯ ಭದ್ರ ಬುನಾದಿಯನ್ನಂತೂ ಹಾಕಿತು. ಕೆಲವು ಪ್ರಾತಿನಿಧಿಕ ಕವನಗಳ ಮೂಲಕ ವಿವರಿಸುವುದಾದರೆ–

> **ತನ್ನ ಮನೆಯಾಕೆ**
> **ಹೊರಗೆ ದುಡಿದು**
> **ಕಯ್ಯ ಬಟ್ಟಲು ತೆಗೆದು ತೊಳೆದು**
> **ನರಳಿ ಹೆರುವುದನ್ನು ಕಂಡು**
> **ಈ ಸೋಷಿಯಲಿಸ್ಟ್ ಪಕ್ಷದ ಕಾರ್ಯದರ್ಶಿ**
> **ಆಯ್ಯೋ ಎಂದಿದ್ದಾನೆ**
> **ಹೊರಗು ಒಳಗಿನ ದುಡಿತದ ಮಧ್ಯೆ**
> **ಆರುಮಕ್ಕಳ ತಾಯಿ ಅವನೇನು**
> **ಕೃತಘ್ನನಲ್ಲ–ಸದ್ಯದಲ್ಲೇ ಬಂದೀತು**
> **ಅವಳಿಗರ್ಪಿಸಿದ ಕವನ ಸಂಕಲನ** *('ಪ್ರಗತಿ', ವಿಜಯಾ ದಬ್ಬೆ)*

ಎಂದು ಹರಿತವಾದ ವ್ಯಂಗ್ಯದಿಂದ ವಿಜಯಾ ತಿವಿದರೆ–

> **ನಾನು ಕುರಿಮರಿಯಲ್ಲ**
> **.........................**
> **.........................**
> **ನೀನು ಹೆದರಿಸಿದರೆ ಬೆದರಿಸಿ**
> **ನಿನ್ನ ಬೇಟೆಯಲಿ ಪಾಲು ಪಡೆದು**

ಪಾಲು ಕೊಟ್ಟು
ಎದೆಗೆ ಜೋಡಿ ಪಾರಿವಾಳ ಕಾವಿತ್ತು...

.....................................

ಬೇಡವೆಂದು ಮುಖ ತಿರುಗಿಸಿದರೆ
ಝಾಡಿಸಿ ಹೋಗಬಲ್ಲ ಸಿಂಹಿಣಿ ನಾನು ('ಕಾಡಿನಲ್ಲಿ', ಎನ್.ವಿ. ಭಾಗ್ಯಲಕ್ಷ್ಮಿ)

ಎಂದು ಝಾಡಿಸಿದಂತೆ ಬರೆದಿದ್ದರು ಎನ್.ವಿ. ಭಾಗ್ಯಲಕ್ಷ್ಮಿ.

'ಬಸವನಿಗೆ ಕೋಡಿದ್ದರೇನು?
ಕಮಲ ಅರಳುವುದಿಲ್ಲವೆ ಬೆಳೆಯುತ್ತ?
ಅರಳಿದ ಕಮಲಳ ಮುಂದೆ ಜಿನುಗಿ
ಸೋರುವುದಿಲ್ಲವೆ ಕೋಡಿನ ಬಿಗುಮಾನ?
ಬಸವನ ಗಂಡಸ್ತನಕ್ಕೆ ಒತ್ತಿ ಮುದ್ರೆ
ಚಲಾವಣೆಗೆ ತರೋಳು ಕಮಲ ಅಲ್ಲವೆ?' ('ಅವನು ಬಸವ', ಸರ್ವಮಂಗಳಾ)

ಎಂದು ಚ. ಸರ್ವಮಂಗಳಾ ಛೇಡಿಸಿದರೆ;

'ಬೇಡಮ್ಮ ಬೇಡ
ಆಕಾಶದಗಲಕ್ಕು ನಿನ್ನ ಸೆರಗು ನೆರಿ ಹರಡಿ
ಬಿಸಿಲ ಮರೆಸಿ ಬದುಕಿನ ಹಸಿರು ಬಿಳಚಿಸಬೇಡ

.................................

.................................

ಈಗ ತಾನೆ ಹೆಡೆಯಾಡಿಸುತ್ತಿದ್ದೇನೆ
ಯಾರನ್ನಾದರೂ ಕಚ್ಚಿ ವಿಷವಿಳಿಸಿಕೊಳ್ಳುತ್ತೇನೆ
ನನಗೆ ದಾರಿ ಬಿಡು' ('ಅಮ್ಮನಿಗೆ', ಸ. ಉಷಾ)

ಎಂದು ತನ್ನ ಹಕ್ಕನ್ನು ಒತ್ತಾಯಪೂರ್ವಕವಾಗಿ ಮಂಡಿಸಿದ್ದರು ಉಷಾ.

'ಧರ್ಮ–ಭೀರುವಿನ
ತಣ್ಣನೆಯ ರಕ್ತದಲ್ಲಿ ತೊಯ್ದು
ಒದ್ದೆ ಮುದ್ದೆಯಾಗಿ
ಸದ್ದಿಲ್ಲದೆ ಉಸಿರ ಬಿಡುವವಳು'
('ಪಂಚಾಗ್ನಿಗಳ ನಡುವೆ', ಸುಕನ್ಯಾ ಮಾರುತಿ)

ಎಂದು ಒಳಗೊಳಗೆ ನರಳಿ ಸತ್ತವಳ ಕತೆಯನ್ನು ಸುಕನ್ಯಾ ಅರುಹಿದರೆ–

'ನನ್ನ ಸಾರಥ್ಯವನ್ನು
ನಾನೇ ವಹಿಸಿಕೊಂಡು ಗೆಲ್ಲಬಲ್ಲೆನೆಂಬ
ವಿಶ್ವಾಸ–

ಇದೋ ಕೈಯ ಮುಗಿವೆ
ಲಗಾಮುಗಳನ್ನು ನನ್ನ ಕೈಗೊಪ್ಪಿಸು' ('ವಿಶ್ವಾಸ', ಲೀಲಾವತಿ ತೋರಣಗಟ್ಟಿ)

ಎಂದು ಕೇಳಿದ್ದವರು ಲೀಲಾವತಿ.

.........................
'ಆದರೆ ಮೇಲೆ ನಗುನಗುತ್ತಾ 'ಅವನ'
ಹೆಂಡತಿ ಮಕ್ಕಳ ಯೋಗಕ್ಷೇಮ ವಿಚಾರಿಸುತ್ತೇವೆ.
ಯಾಕೆಂದರೆ ಅವಳದೂ ಅದೇ ಕಥೆಯಲ್ಲವೇ?
ನಾವು ಹುಡುಗಿಯರೇ ಹೀಗೆ...'
('ನಾವು ಹುಡುಗಿಯರೇ ಹೀಗೆ', ಪ್ರತಿಭಾ ನಂದಕುಮಾರ್)

ಎಂದು ಮುಖವಾಡ ಹಂಗಿಲ್ಲದಂತೆ ಬದುಕು ಬದುಕುವ ತುರ್ತು ವ್ಯಕ್ತಪಡಿಸಿದ್ದರು ಪ್ರತಿಭಾ.

ಕಮಲಾ ಹೆಮ್ಮಿಗೆ, ಶಶಿಕಲಾ, ಹೇಮಾ, ಮುಕ್ತಾಯಕ್ಕ, ಭಾಗ್ಯ ಜಯಸುದರ್ಶನ ವಿಭಿನ್ನ ಧ್ವನಿಗಳು ಏಕಕಾಲಕ್ಕೆ ನವನವೀನ ರಾಗ ಹೊರಡಿಸುತ್ತಿದ್ದ ಕಾಲವದು.

ಈ ವೈವಿಧ್ಯತೆಗಳ ನಡುವೆಯೇ, ಶಕ್ತ ಕವಯಿತ್ರಿಯರ ನಡುವೆ ಸರಿಸಮನಾಗಿ ಅನನ್ಯವಾಗಿ, ತೀವ್ರವಾಗಿ ಕಾವ್ಯಕರ್ಮದಲ್ಲಿ ತಮ್ಮನ್ನು ತಾವು ತನ್ಮಯತೆಯಿಂದ ತೊಡಗಿಸಿಕೊಂಡು 'ಸ್ವ'ದಲ್ಲಿ ನಂಬಿಕೆ ಇರಿಸಿ ತಮ್ಮದೇ ರೀತಿಯಲ್ಲಿ ಕವನಗಳನ್ನು ಮಂಡಿಸಿದ್ದರು ಮಾಲತಿ ಪಟ್ಟಣಶೆಟ್ಟಿ.

'ಎಂದಿನಿಂದಲೋ ಸತಿ
ನಾ ಚಿತೆ ಏರಿದವಳು
ಬದುಕು ಗಂಡ-
ನ ಉರಿ ಹೊತ್ತು
ಸುಟ್ಟುಕೊಂಡಾಗಲೂ
ಬೂದಿಯಾಗದ ಕೆಂಡ
ಸಿಡಿಲುಗಳ ಉಂಡುಂಡು
ಅಗ್ನಿಧರೆಯಾದವಳು' *(ಸಹಗಮನ)*

ಬೂದಿ ಮುಚ್ಚಿದ ಕೆಂಡದ ಕೋಪ-ತಾಪ ಇದಾದರೆ;

'ಇವರಿಗಾಗಿ ನನ್ನ
ವಸಂತಗಳ ತೇಯ್ದು
ಗಾಯಗಳ ತೀಡಿ
ರೆಕ್ಕೆಗಳನ್ನೆ ಕಿತ್ತು ಗಾಳಿ
ಬೀಸುತ್ತ ಒಳಗೊಳಗೆ

ಕೊರಗುತ್ತ ಸೊರಗಿದರೂ
ಬನದ ಕೋಗಿಲೆಯಾಗಿ
ಕೂಗಬೇಕು'                    (ನಮ್ಮ ಹಾಡು)

ಹಾಡಲೊಲ್ಲದ ಕೋಗಿಲೆ, ಹಾಡಲೇಬೇಕಾದ ಸಂದಿಗ್ಧತೆ ಇದು.

'ಒಲವಿನೊಂದೊಂದು ಕಣ
ಮತ್ಸ್ಯವಾಗಿಸಿ ನಿನ್ನೊಳು
ನಾ ಬಾಳ ಪ್ರೀತಿಸಿದೆ...
ನನ್ನಲ್ಲಿ ನೀ ಸುರಿದೆಯೊ
ನಿನ್ನಲ್ಲಿ ನಾ ಹರಿದೆನೊ
ಪರಿವೆ ಯಾರಿಗಿದೆ ಪ್ರೀತಿ
ಸಮಾಗಮದಲ್ಲಿ?!'

ಎನ್ನುವಲ್ಲಿನ ನಿರ್ವ್ಯಾಜ್ಯ ಪ್ರೇಮ ದೃಷ್ಟಿ–

'ಮೆಟ್ಟಿ ಎರಡೆರಡು ಹೆಡೆ
ತೊಟ್ಟು ಮುಳ್ಳು ಆವುಗೆ
ನಡೆಯಲೇ ಬೇಕಿದೆ ಘಾತುಕದಾರಿ
ಎಡಬಲದಲ್ಲಿ ಪರಿಮಳ
ಪೂಸಿದ ಖಡ್ಗದ ಸಾಲು
ಸಾಲಾಗಿ ಸೊಕ್ಕಿ ನಿಂತಿವೆ
ಕತ್ತರಿಸಲು ಉಳಿದ ನನ್ನ ಎರಡೇ
ಎರಡು ತೋಳು!'                    (ಪ್ರಾರ್ಥನೆ)

ಎಂಬಲ್ಲಿನ ಸಹನೆ – ಛಲ – ಅಸಹಾಯಕತೆ...

'ನನ್ನ ಮರೆವು
ನನ್ನ ಹಾಗೆ ನಿಷ್ಕ ಸರಳ
ನೆರಳಿನಂತೆ ನಡೆದ
ಇಷ್ಟಮಿತ್ರ, ಎಂಥ ಕಷ್ಟದಲ್ಲೂ
ಯಾರು ಕೈ ಬಿಟ್ಟರೂ
ಇನ್ಯಾರು ಕೈ ಕೊಟ್ಟರೂ
ಬೆಂಬಿಡದೆ ನನ್ನ ಹದ್ದಿನಲ್ಲೆ
ಹುಂಬನಂತೆ ಸುತ್ತುವ ಕಾಯಾ
ವಾಚಾ ಮನಸಾ ಕೈ ಹಿಡಿದ
ಸಾಚಾ ಗಂಡ!'                    (ಅನನ್ಯ)

ಎಂಬಲ್ಲಿನ ಸಾತ್ವಿಕತೆ, ಆತ್ಮನಿವೇದನೆ–

ಹೀಗೆ ತಮ್ಮದೇ ಆದ ರೀತಿಯಲ್ಲಿ ಕವನ ಬರೆದು ಕನ್ನಡ ಕಾವ್ಯ ಪರಂಪರೆಯಲ್ಲಿ ವಿಶಿಷ್ಟರಾಗಿ ನಿಲ್ಲುತ್ತಾರೆ ಮಾಲತಿ.

ಅವರ 'ಬಾ ಗಂಗೆ' ನನ್ನ ಫೇವರಿಟ್ ಪದ್ಯ.

**'ಬಾ ಗಂಗೆ, ಬಾ ತಂಗಿ**
**ನನ್ನಂತರಂಗೆ, ಮನಬಿಚ್ಚಿ**
**ಒಂದಿಷ್ಟು ಮಾತಾಡೋಣ**
**ಉಡಿಯು ನನ್ನದು**
**ಉಡಿಯ ಬೆಂಕಿ ನನ್ನದು**
**ಹೇಳಲಾರೆ, ಹೇಳದಿರಲಾರೆ ತಂಗಿ**
**ನಿನ್ನ ದಡದಲ್ಲಿ ನನ್ನ ಕತೆ**
**ನನ್ನ ದಡದಲ್ಲಿ ನಿನ್ನದು**
**ದೇಹವೆರಡು ಆತ್ಮವೊಂದೆಂಬಂತೆ...'**

ಎಂದು ಮಾತಿಗೆ ಮೊದಲಾಗುವ ಈ ಕವನ ಸುದೀರ್ಘ ಮೌನದಲ್ಲಿ ಕೊನೆಗೊಳ್ಳುತ್ತದೆ.

ಆರೇಳು ವರುಷದ ಹಿಂದೆ ಚಿತ್ರದುರ್ಗದಲ್ಲಿದ್ದಾಗ ಪ್ರತಿಭಾ, ಎಂ.ಆರ್. ಕಮಲ, ಮಾಲತಿ 'ಅಭಿರುಚಿ' ಕಾರ್ಯಕ್ರಮಕ್ಕೆ ಬಂದಿದ್ದರು. ಆವೊತ್ತಿನ ವಿಷಯ: ಕವನ ವಾಚನ ಹಾಗೂ ಲೇಖಕಿಯ ಬದುಕು–ಬರಹ ಕುರಿತಂತೆ ಸಂವಾದ. ಪ್ರತಿಭಾ ಎಗ್ಗಿಲ್ಲದೆ ಮಾತನಾಡಿದರೆ ಕಮಲಾ ಅಳೆದೂ–ತೂಗಿ ನಿವೇದಿಸಿಕೊಂಡರು. ಅಧ್ಯಕ್ಷತೆ ವಹಿಸಿದ್ದ ಮಾಲತಿ ಪಟ್ಟಣಶೆಟ್ಟಿ ತಮ್ಮ ಸರದಿ ಬಂದಾಗ... ಒಂದು ನೋವಿತ್ತು... ಎಂದು ಶುರುಮಾಡಿ ಅದೇನದು ನೋವು ಎಂದು ಹೇಳದೆ ಸುದೀರ್ಘ ಮೌನಕ್ಕೆ ಶರಣಾದರು. ತಮ್ಮ ೪–೫ ಕವನಗಳನ್ನು ಓದಿ ಮುಕ್ತಾಯ ಹಾಡಿದರು.

'ಮೌನ ಮೊಗ್ಗೆಯನೊಡೆದು ಮಾತರಳಿ ಬಂದಂತೆ' ಎಂಬ ಕವಿ ಕಣವಿ ಅವರ ಕವನದ ಸಾಲಿನಂತೆ ಮಾಲತಿ ಅವರ ಜೀವನ–ಕವನ–ಯಾನ ಎಂದು ಈ ಹೊತ್ತು ನನಗೆ ಅನಿಸುತ್ತಿರುವುದಕ್ಕೆ ಅಂದಿನ ಆ ಸುದೀರ್ಘ ಮೌನವೇ ಕಾರಣ!

(ಮಾಲತಿ ಪಟ್ಟಣಶೆಟ್ಟಿ ಅವರ ಅಭಿನಂದನ ಗ್ರಂಥ
'ಮಂದಾರ'ಕ್ಕಾಗಿ ಬರೆದ ಲೇಖನ–೨೦೦೭.)

●

# ಕಣವಿಯೆಂಬ ಪಾರಿಜಾತದ ಹೂವು...

**ಮಾತು**

ಮುಂಜಾವದಲಿ ಹಸಿರು ಹುಲ್ಲು ಮಕಮಲ್ಲಿನಲಿ
ಪಾರಿಜಾತದ ಹೂವ ಸುರಿಸಿದಂತೆ,
ಮುಟ್ಟಿದರೆ ಮಾಸುತಿಹ ಮಂಜು ಹನಿ ಮುತ್ತಿನಲಿ
ಸೃಷ್ಟಿ ಸಂಪೂರ್ಣತೆಯ ಬಿಂಬಿಪಂತೆ,

ಮೆಲ್ಲೆದೆಯ ಸವಿಯೊಲುಮೆ ಕರಗಿ ಕಂಬನಿಯಾಗಿ
ಹೆಣ್ಣ ಕಣ್ಣಂಚಿನಲಿ ತುಳುಕುವಂತೆ,
ಸುಳಿಗಾಳಿಯೊಂದಿನಿತು ಸೂಸಿ ಬಂದರು ಸಾಕು
ಮರವನಪ್ಪಿದ ಬಳ್ಳಿ ಬಳುಕುವಂತೆ,

ನಾವು ಆಡುವ ಮಾತು ಹೀಗಿರಲಿ ಗೆಳೆಯ
ಮೃದುವಚನ ಮೂಲೋಕ ಗೆಲ್ಲುವುದು ತಿಳಿಯ;
ಮೌನ ಮೊಗ್ಗೆಯನೊಡೆದು ಮಾತರಳಿ ಬರಲಿ
ಮೂರು ಗಳಿಗೆಯ ಬಾಳು ಮಗಮಗಿಸುತಿರಲಿ.

ಕವಿ ಕಣವಿಯವರು ಎಳವೆಯಲ್ಲೇ ನನ್ನ ಭಾವಕೋಶದಲ್ಲಿ ಸೇರಿ ಹೋದ ಕವಿ. ಈ ಹೊತ್ತು ನಾನು ಕವಿಯಾಗಿರುವುದಕ್ಕೆ ಅವರ ಕವಿತೆಗಳೂ ಕಾರಣ ಎಂದರೆ ತಪ್ಪೇನೂ ಆಗಲಾರದು.

ನನಗೆ ಬಾಲ್ಯದಿಂದಲೂ ಹೂಗಳೆಂದರೆ ಇಷ್ಟ. ಶಿವಮೊಗ್ಗೆಯಲ್ಲಿ ಹೂಗಳಿಗೇನೂ ಬರವಿರಲಿಲ್ಲ. ಸಂಪಿಗೆ, ಮಲ್ಲಿಗೆ, ಸೇವಂತಿಗೆ, ಸುಗಂಧರಾಜ, ಕಣಗಿಲೆ, ದಾಸವಾಳ, ಕನಕಾಂಬರ, ಸ್ಫಟಿಕ, ಗೊರಟೆ, ರಂಜ, ಸುರಗಿ, ಸುರುಳಿ, ದೇವಕಣಗಿಲೆ, ಬೆಟ್ಟದಾವರೆ, ಸೀರಸ್ಯೆದಿಲೆ, ನಿತ್ಯಪುಷ್ಪ, ಶಂಖಪುಷ್ಪ, ರತ್ನಗಂಧಿ, ಕರವೀರ, ರಾತ್ರಿರಾಣಿ, ಸೂಜಿ, ಜಾಜಿ, ಮಧ್ಯಾಹ್ನ ಮಲ್ಲಿಗೆ, ಕಾಕಡ, ಗುಲಾಬಿ, ಡೇರಾ, ಚೆಂಡು, ಗೊಂಡೆ, ಬೋಗನವಿಲ್ಲ, ನಂದಬಟ್ಟಲು, ಆಕಾಶ ಮಲ್ಲಿಗೆ, ಮುತ್ತುಗ, ಮಂದಾರ, ಕಾಸ್ಮಾಸ್, ಜೀನಿಯಾ – ಇವಿಷ್ಟು

ಸಾಲದೆಂಬಂತೆ; ನೀಲಿಬೇಲಿ ಹೂ, ಹಳದಿ ತಂಗಡಿ ಹೂ, ಕೆಂಪು ತೇರಿನ ಹೂ ಆಯಾ ಕಾಲದಲ್ಲಿ ಕಿಕ್ಕಿರಿದಿರುತ್ತಿದ್ದವು. ಶಾಲೆಯ ಹಾದಿ ಸವೆಸುವಾಗ–ಎರಡು, ಮೂರು ಮೈಲಿ–ನಾವು ಗೆಳತಿಯರು, ಯಾರ ಯಾರ ಮನೆಯ ಕಾಂಪೌಂಡಿನಲ್ಲಿ ಯಾವ ಯಾವ ಹೂವು ಅರಳಿದೆ ಎಂದು ಸಮೀಕ್ಷೆ ಮಾಡುತ್ತಾ, ಅವುಗಳ ಅಂದ ಚೆಂದಗಳನ್ನು ಕಣ್ಣಲ್ಲಿ ತುಂಬಿಕೊಂಡು ಸಾಗುತ್ತಿದ್ದೆವು. ಈ ನನ್ನ ಹೂವಿನ ಪ್ರೇಮವೇ ನನ್ನನ್ನು ಕಣವಿಯರ ಕವಿತೆಗಳ ಬಳಿ ತಂದಿತು!

ತೀರಾ ಎಳವೆಯಲ್ಲಿ ನನ್ನ ಕಿವಿಯ ಮೇಲೆ ಬಿದ್ದ ಕವಿತೆಗಳೆಂದರೆ, ಹಳೆಯ ಚಿತ್ರಗೀತೆಗಳೇ. ಇನ್ನು ಶಾಲೆಯ ಪ್ರಾರ್ಥನಾ ಪದ್ಯಗಳಾದ 'ವನಸುಮದೊಳೆನ್ನ ಜೀವನವು...', 'ದೇವಿ ಭುವನ ಮನಮೋಹಿನಿ...', 'ಜಯ ಭಾರತ ಜನನಿಯ ತನುಜಾತೆ...' ಇತ್ಯಾದಿ. ಎಂಟನೆಯ ಇಯತ್ತೆಯಲ್ಲಿರುವಾಗ ಎಂದು ಕಾಣುತ್ತದೆ, ಶಾಲೆಯ ಪ್ರತಿಭಾ ಪ್ರದರ್ಶನ ದಿನದಂದು ಅನೇಕ ಹುಡುಗಿಯರಿಂದ ಚಿತ್ರಗೀತೆ, ಭಾವಗೀತೆ, ಜನಪದ ಗೀತೆಗಳ ಗಾಯನವಿತ್ತು. ಆ ದಿನ ನೆನಪಿಟ್ಟುಕೊಳ್ಳುವಂತೆ ಮಾಡಿದ್ದು, 'ಮುಂಜಾವದಲಿ ಹಸಿರು ಹುಲ್ಲು ಮಕಮಲ್ಲಿನಲಿ...' ಎಂಬ ಕವಿತೆ. ಆ ಹುಡುಗಿ ಸುಶ್ರಾವ್ಯವಾಗಿ ಹಾಡಿದ್ದರಿಂದಲೋ ಅಥವಾ ಆ ಪುಟ್ಟ ಕವಿತೆಯೊಳಗಣ ಹೂರಣ ಸವಿಯಾದುದಾದ್ದರಿಂದಲೋ ಅದು ನನ್ನನ್ನು ಮುಟ್ಟಿತು.

ಆ ಹೊತ್ತು ಆ ಕವಿತೆ ಚೆನ್ನವೀರ ಕಣವಿಯವರದು ಎಂದಾಗಲಿ, ಆ ಕವಿತೆ 'ಮಾತು' ಕುರಿತಾಗಿದೆ ಎಂದೇನೂ ನನಗೆ ತಿಳಿದಿರಲಿಲ್ಲ. ಅದು ಪಾರಿಜಾತದ ಹೂವನ್ನು ಕುರಿತಾಗಿ ಎಂದೇ ಭಾವಿಸಿದ್ದೆ! ಶಿವಮೊಗ್ಗೆಯಲ್ಲಿ ಪಾರಿಜಾತದ ಹೂವಿನ ಮರಗಳು ಅತಿ ವಿರಳವಾಗಿದ್ದು, ಆ ತನಕ ನನಗದರ ದರುಶನವಾಗಿರಲಿಲ್ಲ. ಅದರ ಹೂವನ್ನೇನೋ ರಾಮಮಂದಿರವಲ್ಲಿ ಕಂಡಿದ್ದೆ. ತೀರ್ಥ ಪ್ರಸಾದವಾಗಿ ಅದು ನನ್ನ ಅಂಗೈಯನ್ನು ಮುಟ್ಟಿ, ಅದರ ಘಮಘಮ ನನ್ನ ಮೂಗಿನಲ್ಲಿ ನೆಲೆಸಿ ನನ್ನ ಮುಡಿಯೇರಿತ್ತು! ಇಂತಹ ಒಂದು ಹೂ ಇದ್ದಕ್ಕಿದ್ದ ಹಾಗೆ ಹಾಡಿನಲಿ ಮೈದಳೆದು ನನಗೆ ಪುಳಕ ಉಂಟುಮಾಡಿತ್ತು! ಆ ಪುಟ್ಟ ಹೂವಿನ ಪರಿಮಳದ ಪರಿಣಾಮವನ್ನು ನಾನು ಆ ಹಾಡಿನಲ್ಲಿ ಕಂಡೆ. ಅಷ್ಟೇ ಅಲ್ಲ, ಆ ಕವಿತೆಯನ್ನು ಆ ಕ್ಷಣದಲ್ಲೇ ನನ್ನ ಭಾವಕೋಶದಲ್ಲಿ ಸೇರಿಸಿಕೊಂಡೆ. ಮುಂದಿನ ದಿನಗಳಲ್ಲಿ ರೇಡಿಯೋದಲ್ಲಿ ಆ ಹಾಡು ಪ್ರಸಾರವಾದಾಗಲೆಲ್ಲಾ, ನನ್ನ ಕಿವಿ ವಿಶೇಷವಾಗಿ ಅದರತ್ತ ಚಾಚಿಕೊಳ್ಳುತ್ತಿತ್ತು. ಆ ದಿನಗಳಲ್ಲೇ ನನಗೆ ಅದು ಕಣವಿಯವರ ಕವಿತೆ ಎಂದು ಗೊತ್ತಾದದ್ದು. ನಂತರ ೧೯೮೫ರಲ್ಲಿ ದಸರಾ ಕವಿಗೋಷ್ಠಿಯಲ್ಲಿ ನಾನು ಪ್ರಪ್ರಥಮವಾಗಿ ಈ ಪಾರಿಜಾತದ ಕವಿಯನ್ನು ಭೇಟಿಯಾದೆ.

ಚೆನ್ನವೀರ ಕಣವಿಯವರದ್ದು ಎತ್ತರದ ನಿಲುವು, ಸೌಮ್ಯ ಮುಖಭಾವ, ಮಂದಸ್ಮಿತ, ಮೃದುವಚನ. ನೋಡಿದಾಕ್ಷಣ 'ಕವಿ' ಎನ್ನಿಸುವರು. ಹಮ್ಮು ಬಿಮ್ಮುಗಳಿಲ್ಲದ ನಡೆ ನುಡಿ. ಕವಿಯಾಗಿ ಹೇಗಿರಬೇಕೆಂದು ಎಂಬುದನ್ನೂ ಅವರು ಸಹಕವಿಗಳಿಗೆ ಕಲಿಸಿದ್ದಾರೆ. ನನ್ನ ಮಟ್ಟಿಗೆ ಕಣವಿಯರ 'ಮಾತು' ಎಂಬ ಕವಿತೆ, ಬಸವಣ್ಣನವರ 'ನುಡಿದರೆ ಮುತ್ತಿನ ಹಾರದಂತಿರಬೇಕು...' ಎಂಬ ವಚನದಷ್ಟೇ ಶಕ್ತಿಶಾಲಿ ರಚನೆ.

ಮೈಸೂರಿನಲ್ಲಿ ಪಾರಿಜಾತದ ಮರಗಳು ಹೇರಳವಾಗಿವೆ. ೨೦೦೩ರಿಂದ ೨೦೦೬ರವರೆಗೆ

ನಾವು ಮೈಸೂರಿನಲ್ಲಿ ಇದ್ದಷ್ಟು ದಿನವೂ ಪ್ರತಿದಿನ ಎಂಬಂತೆ ಅದು ಕಣ್ಣಿಗೆ ಬೀಳುತ್ತಿತ್ತು. ನಮ್ಮ ಮನೆಯಿದ್ದ ಬೀದಿಯಲ್ಲೇ ನಾಲ್ಕು ಮರಗಳಿದ್ದವು. ಬೀಸುವ ತಂಗಾಳಿಗೆ ತುಸುವೇ ಅಲುಗಿ ತೇಲುತ್ತಾ ಒಂದೊಂದೇ ಒಂದೊಂದೇ ಪಾರಿಜಾತದ ಹೂವು ನೆಲದ ಎದೆಯ ಮೇಲೊರಗುವುದನ್ನು ನೋಡಿಯೇ ತೀರಬೇಕು. ನನ್ನ ಪಾಲಿಗೆ ಕಣವಿಯವರ ಕವಿತೆಗಳೆಂದರೆ–

**ಮುಂಜಾವದಲಿ ಹಸಿರು ಹುಲ್ಲು ಮಕಮಲ್ಲಿನಲಿ**
**ಪಾರಿಜಾತದ ಹೂವ ಸುರಿಸಿದಂತೆ...**

(ಕಣವಿಯವರಿಗೆ ಎಂಬತ್ತು ತುಂಬಿದ ಸಂದರ್ಭಕ್ಕಾಗಿ ಬರೆದ ಬರಹ)

●

# ಭೀಮಾಲಾಪ: ಒಂದು ವಿಶ್ಲೇಷಣೆ

ಮಹಾಭಾರತದ ವಿರಾಟಪರ್ವದ ಕಥಾವಸ್ತುವನ್ನು ಆಧರಿಸಿ ರಚಿಸಿರುವ 'ಭೀಮಾಲಾಪ' ಜಿ.ಎಸ್.ಎಸ್. ಅವರ ಅತ್ಯುತ್ತಮ ಕವನಗಳಲ್ಲಿ ಒಂದು. ಜೂಜಿನಲ್ಲಿ ಎಲ್ಲವನ್ನೂ ಕಳೆದುಕೊಂಡು ಕಾಡುಪಾಲಾಗಿ ಹನ್ನೆರಡು ವರುಷ ವನವಾಸ ಮುಗಿಸಿ ಹದಿಮೂರನೆಯ ವರುಷ ಅಜ್ಞಾತವಾಸಕ್ಕಾಗಿ ಪಾಂಡವರು ಆರಿಸಿಕೊಳ್ಳುವುದು ಮತ್ಸ್ಯ ದೇಶವನ್ನು. ಅದರ ರಾಜನಾದ ವಿರಾಟ ಬಲಿಷ್ಠ, ಧರ್ಮಶೀಲ, ಉದಾರಿ, ಧನವಂತ, ವಿವೇಕಿ ಎಂದು ಪಾಂಡವರ ನಂಬುಗೆ. ಅಷ್ಟೇ ಅಲ್ಲ ಅವನ ದೇಶ ಸುಂದರ, ಶುಭಕರ, ಸುಖಕರ, ಭಯರಹಿತ ಎಂಬುದು ಅವರ ಕಲ್ಪನೆ. ವ್ಯವಸ್ಥೆ ಎಂಬ ವಾಸ್ತವವನ್ನು ಎದುರುಗೊಂಡಾಗ ಈ ನಂಬುಗೆ–ಕಲ್ಪನೆ ಛಿದ್ರಗೊಳ್ಳುವ ಬಗೆಯನ್ನು, ವಿರಾಟನ ನಾಡಿನಲ್ಲಿ ಮಾರುವೇಷದಲ್ಲಿದ್ದ ಪಾಂಡವರು – ದ್ರೌಪದಿ ಪಡುವ ಪಾಡನ್ನು 'ಭೀಮಾಲಾಪ' ಅನಾವರಣಗೊಳಿಸುತ್ತದೆ.

ಭೀಮನ ಆಲಾಪಕ್ಕೆ ಕಾರಣ ಇಲ್ಲದಿಲ್ಲ. ಯಾಕೆಂದರೆ ವೀರಾಧಿವೀರ–ಶೂರರಾದ ಅವನ ಸಹೋದರರ ಪಾಡು ನೋಡಿ:

**ಸೀರೆ ಉಟ್ಟು, ಬಳೆ ತೊಟ್ಟು, ಕಾಲಿಗೆ**
**ಗೆಜ್ಜೆ ಕಟ್ಟಿದ್ದಾನೆ ಒಬ್ಬ;**
**ಇನ್ನೊಬ್ಬ ಕಾವಿ ಉಟ್ಟು ಮೂಲೆಗೆ ಕೂತಿದ್ದಾನೆ.**
**ದನದ ಕೊಟ್ಟಿಗೆಯಲ್ಲಿ ಒಬ್ಬ, ಕುದುರೆ ಲಾಯದಲ್ಲಿ**
**ಮತ್ತೊಬ್ಬ.**
**ಇದ್ದಾಳೆ ಇವಳು ಅವರಿವರ ತಲೆಯ ಹೇನು ಹೆಕ್ಕುತ್ತಾ...**

ಇನ್ನು ಆವೇಶ, ಆಕ್ರೋಶ, ಆರ್ಭಟಗಳಿಗೆ ಹೆಸರುವಾಸಿಯಾದ ಭೀಮ ಕಡಗೋಲು, ಸೌಟು, ಸಟ್ಟುಗದ ಜತೆ ಮಸಿಬಟ್ಟೆಯಲ್ಲಿ ಅಡಿಗೆಮನೆಯಲ್ಲಿ ಉರಿವ ಒಲೆಗಳ ಮುಂದೆ ತಾನೂ ಉರಿಯುತ್ತಿದ್ದಾನೆ. ಕುದಿವ ತಪ್ಪಲೆಯೊಳಗಿನ ಎಸರಿನಂತೆ ತಾನೂ ಕೊತ ಕೊತ ಕುದಿಯುತ್ತಿದ್ದಾನೆ. ಬಿಲ್ಲು–ಬಾಣಗಳು ಹೆಣದ ಹಾಗೆ ಮಸಣದಲ್ಲಿ ಮಲಗಿರಲು, ನೂರಾರು ಧೀರ–ವೀರ–ಶೂರರನ್ನು ಮಣಿಸಬಲ್ಲ ಭೀಮನ ತೋಳು, ತೊಡೆಗಳು ಜಡವಾಗಿ ಚೈತನ್ಯ ಕಳೆದುಕೊಂಡು ನಿರುಪಯುಕ್ತವಾಗಿವೆ. ಗತಕಾಲದ ಒಂದೊಂದೇ ಚಿತ್ರಗಳು ಕಣ್ಮುಂದೆ ತೇಲಿ ಬರುತ್ತಿವೆ. ಭೀಮನ ಅಂತಃಕರಣ, ಅಂತಃಪ್ರಜ್ಞೆ, ಅಂತಃಸಾಕ್ಷಿಗಳು ಘಾಸಿಗೊಂಡು ಒಣ ಕಟ್ಟಿಗೆಗಳಂತಾಗಿ ಸುಡುಸುಡುತ್ತಾ ಭೀಮನ ಎದೆತುಡಿತವನ್ನು ಹೆಚ್ಚಿಸಿವೆ.

ಕುದ್ದು ಕುದ್ದು ಹದಗೊಳ್ಳುತ್ತಲೇ ಗತಕಾಲದ ಘಟನೆಗಳನ್ನು ಸಂಯಮದಿಂದ ಪರೀಕ್ಷಿಸುತ್ತಲೇ ಹೇರಲ್ಪಟ್ಟಿರುವ ಬಲಹೀನತೆಯನ್ನು ಕೊಡವಿಕೊಂಡು ವ್ಯವಸ್ಥೆಗೆ ಬಲಿ ತಾನಾಗದೆ ಕಲಿಯಂತೆ ಕಾದಾಡಬಲ್ಲ ಶಕ್ತಿಯನ್ನು ಸಂಚಯಿಸಿಕೊಳ್ಳುವತ್ತ ಭೀಮನ 'ಸ್ವ' ಸ್ವರೂಪ ದಿವ್ಯಾಗ್ನಿಯ ಮುಂದೆ ನಿಮಗ್ನವಾಗಿದೆ.

ಗೆರೆ ದಾಟುವ ತವಕ, ಆದರೆ ದಾಟಲಾರದ ಅಸಹಾಯಕತೆ, ಇದು ಅಂದಿನ ಕತೆ ಹೇಗೋ, ಇಂದಿನ ಕತೆಯೂ ಹೌದು. ಭೀಮನ ಸೂಕ್ಷ್ಮತೆ ಇನ್ನೂ ಮುಕ್ಕಾಗದೆ ಉಳಿದಿರುವುದರಿಂದಲೇ ಜೀವ ಹಿಂಡುವ ವ್ಯವಸ್ಥೆಯಲ್ಲೂ ಭೀಮ ತನ್ನ ಸರದಿಗಾಗಿ ಸಂಯಮದಿಂದ ಕಾದಿದ್ದಾನೆ. ತನ್ನ ಮೇಲೆ ಹೇರಿರುವ, ತಾನೇ ಹೇರಿಕೊಂಡಿರುವ ಸಂಹಿತೆಯನ್ನು ಉಲ್ಲಂಘಿಸಲು ತನ್ನದೇ ದಾರಿ ಹುಡುಕಿಕೊಳ್ಳುತ್ತಿದ್ದಾನೆ. ಭೀಮನ ಆಲಾಪ ಮರುಕದಲ್ಲಿ ಮುಕ್ತಾಯಗೊಳ್ಳದೆ ಸದ್ಯದ ದೈನೇಸಿ ಸ್ಥಿತಿಯನ್ನು ಮೀರುವತ್ತ, ಕರಾಳ ವ್ಯವಸ್ಥೆಯನ್ನು ಎದುರಿಸಲು ಸಜ್ಜಾಗುವಂತೆ ಭೀಮನನ್ನು ಸನ್ನದ್ಧಗೊಳಿಸುವತ್ತ ಕವನ ತುಡಿಯುವುದರಿಂದಲೇ ಕವಿತೆ ಸಹೃದಯ ಓದುಗನಲ್ಲಿ ಹೊಸ ಎಚ್ಚರ ಮೂಡಿಸುತ್ತದೆ.

ಭಗ್ನಗೊಂಡ ಮನಸ್ಸಿನಲ್ಲೂ 'ಭರವಸೆ' ಬೆಳಕು ಹಾಯಿಸುವುದರಿಂದ 'ಭೀಮಾಲಾಪ' ಸಮಕಾಲೀನ ಪದ್ಯವೂ ಆಗಿ ಸಹೃದಯ ಓದುಗನಲ್ಲಿ ಮತ್ತೆ ಮತ್ತೆ ಅನುರಣಿಸುತ್ತದೆ.

### ಭೀಮಾಲಾಪ

ಸೀರೆ ಉಟ್ಟು, ಬಳೆ ತೊಟ್ಟು, ಕಾಲಿಗೆ
ಗೆಜ್ಜೆ ಕಟ್ಟಿದ್ದಾನೆ ಒಬ್ಬ;
ಇನ್ನೊಬ್ಬ ಕಾವಿ ಉಟ್ಟು ಮೂಲೆಗೆ ಕೂತಿದ್ದಾನೆ.
ದನದ ಕೊಟ್ಟಿಗೆಯಲ್ಲಿ ಒಬ್ಬ, ಕುದುರೆ ಲಾಯದಲ್ಲಿ
ಮತ್ತೊಬ್ಬ.
ಇದ್ದಾಳೆ ಇವಳು ಅವರಿವರ ತಲೆಯ
ಹೇನು ಹೆಕ್ಕುತ್ತಾ
ಆಗಾಗ ನಮ್ಮನ್ನೂ ಕುಕ್ಕುತ್ತಾ.

ನಾನೂ ಇದ್ದೇನೆ–ಅಡುಗೆ ಮನೆಯಲ್ಲಿ
ಉರಿವ ಸೌದೆಗಳ ಜೊತೆಗೆ
ಪಾತ್ರೆಗಳಲ್ಲಿ ಕೊತ ಕೊತ ಕುದಿದು
ಹಳೆಯ ನೆನಪುಗಳನ್ನು ರುಬ್ಬುತ್ತಾ:

ಕಣ್ಣೆದುರು ತೇಲಿಬರುತ್ತವೆ:
ಕಂಡದ್ದು, ಕಲಿತದ್ದು; ಬೆಂಕಿಗೆ ಬಿದ್ದು ಪಾರಾದದ್ದು;
ಪಗಡೆ ದಾಳದ ಜೊತೆಗೆ ಉರುಳಿ ಬಿದ್ದದ್ದು; ಬಿಚ್ಚಿದ
ಜಡೆಯ ನೆರಳಿನ ಕೆಳಗ ಭುಸುಗುಟ್ಟಿ ನರಳಿದ್ದು;
ಕಾಡು ಪಾಲಾಗಿ ಅಲೆದದ್ದು.

ನಿಟ್ಟುಸಿರಲ್ಲಿ ಪಟಬಿಚ್ಚಿ ತೇಲುತ್ತವೆ; ಊರುಗಳು;
ಮಹಾರಣ್ಯಗಳು; ಋಷಿಗಳು; ರಾಕ್ಷಸರು;
ಬೆಳಗು ಬೈಗುಗಳು; ಇನ್ನೂ ಏನೇನೋ
ಸುರುಳಿ ಬಿಚ್ಚುತ್ತವೆ.
ಜೀವ ಹಿಂಡುತ್ತವೆ.

ಅಲ್ಲಿ ಊರಾಚೆ ಮಸಣದಲ್ಲಿ
ಇದ್ದ ಪೌರುಷವನ್ನು ದುಂಡಗೆ ಸುತ್ತಿ
ಹೆಣವಾಗಿ ಮಲಗಿಸಿದ್ದೇವೆ, ಮರದ
ಕೊಂಬೆಯ ಮೇಲೆ.

ನೋಡುತ್ತಿದ್ದೇನೆ, ಸುತ್ತಲೂ ಎಂತೆಂಥವೋ
ವಿಜೃಂಭಿಸಿ ಮೀಸೆ ತಿರುವುತ್ತವೆ.
ಏರಬಾರದ ಕಡೆಗೆ ಏರಿ, ಇಳಿಯಬಾರದ ಕಡೆಗೆ
ಇಳಿದು, ಕೆಡಿಸಿ ಹೊಲಸೆಬ್ಬಿಸಿವೆ.
ಗೆರೆದಾಟಬಾರದ ನಾನು ಕಾಯುತ್ತಿದ್ದೇನೆ
ಉರಿವ ಸೌದೆಗಳ ಜೊತೆಗೆ
ಪಾತ್ರೆಗಳಲ್ಲಿ ಕೊತ ಕೊತ ಕುದಿದು ಕಾಯುತಿದ್ದೇನೆ.

('ಜಿಎಸ್‌ಎಸ್ ಕಾವ್ಯಾಂತರಂಗ' ಗ್ರಂಥಕ್ಕಾಗಿ)

●

# ‘ಒಡಲಾಳ’ ಸಿದ್ಧಿ – ‘ಕುಸುಮಬಾಲೆ’ ಕಣ್ಕಟ್ಟು

‘ಕುಸುಮಬಾಲೆ’ ಒಂದು ಡೆಲಿಬರೇಟ್ ಅಟೆಂಪ್ಟ್. ಆದ್ದರಿಂದ ನನ್ನ ಪ್ರಕಾರ ಅದು ಒಳ್ಳೆಯ ಕೃತಿಯಲ್ಲ. ಕನ್ನಡದ ಕಥೆಗಳು ಅಂದ ತಕ್ಷಣ ನನ್ನ ಮನಸ್ಸಿಗೆ ತಟ್ಟನೆ ಗೋಚರಿಸುವುದು ಎರಡು ಕಥೆಗಳು – ಬಾಗಲೋಡಿ ದೇವರಾಯರ ‘ರುದ್ರಪ್ಪನ ರೌದ್ರ’ ಹಾಗೂ ದೇವನೂರ ಮಹಾದೇವರ ‘ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ...’

‘ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ...’ ಕಥೆ ಎಮೋಷನಲ್ ಕಥೆಯೆಂದೂ ಅದು ಒಳ್ಳೆಯ ಕಥೆಯಲ್ಲವೆಂದು ಮಹಾದೇವ ಅದನ್ನು ತಳ್ಳಿಹಾಕ್ತಾರೆ. ಆದರೆ ಅದು ನನಗೆ ತುಂಬಾ ಪ್ರಿಯವಾದ ಕಥೆ. ಏಕೆಂದರೆ ನಾನು ಎಮೋಷನಲ್ ವ್ಯಕ್ತಿತ್ವದವಳಲ್ಲ. ಆ ಕಥೆ ನನ್ನಲ್ಲಿ ಇಲ್ಲದೇ ಇರುವ ಎಮೋಷನ್ ಅನ್ನು ತುಂಬುತ್ತದೆ. ಇಲ್ಲದೇ ಇರುವುದನ್ನು ಪಡೆದುಕೊಳ್ಳುವುದು ಎಷ್ಟು ಕಷ್ಟ? ಅಂತಹ ಕಷ್ಟ ಸಾಧ್ಯವಾದುದ್ದನ್ನು ಕೇವಲ ಒಂದು ಕತೆಯ ಮೂಲಕ ಪಡೆಯೋದು ಭಾಗ್ಯವಲ್ಲವೇ?

ಬಾಗಲೋಡಿಯವರ ‘ರುದ್ರಪ್ಪನ ರೌದ್ರ’ ಕಥೆಯಲ್ಲಿ ಒಂದು ಕೊಲೆ ನಡೆಯುತ್ತೆ. ಆದರೆ ಆ ಕಥೆ ಓದುತ್ತಾ ಹೋದ ಹಾಗೆ ಆ ರೀತಿ ಒಂದು ಕೊಲೆ ನಡೆದಿದೆ ಅನ್ನುವುದನ್ನು ನಂಬಿಲಿಕ್ಕೆ ಮನಸ್ಸು ನಿರಾಕರಿಸುತ್ತದೆ. ಆ ಕೊಲೆ ನಡೆದೇ ಇಲ್ಲ ಅಂತ ಹೃದಯ ಮನಸ್ಸನ್ನು ನಂಬಿಸಲಿಕ್ಕೆ ಪ್ರಯತ್ನಪಡುತ್ತೆ. ಅದೇ ಮಹಾದೇವರ ‘ಮೂಡಲ ಸೀಮೇಲಿ ಕೊಲೆಗಿಲೆ...’ ಕಥೆಯಲ್ಲಿ ಅಕ್ಷರಶಃ ಎಲ್ಲೂ ಕೊಲೆ ನಡೆಯುವುದಿಲ್ಲ. ಆದರೆ ಆ ಕಥೆ ಓದಿ ಮುಗಿಸಿದಾಗ ದಾರುಣವಾಗಿ ಕೊಲೆ ನಡೆದಿರುವ ಅನುಭವವಾಗುತ್ತದೆ. ಪ್ರತ್ಯಕ್ಷ ಕೊಲೆಯಲ್ಲಿ ಭಾಗಿಯಾದ ಅನುಭವವಾಗುತ್ತದೆ. ಹೃದಯ ತಪ್ತವಾಗುತ್ತದೆ. ಇದು ಪವಾಡವಲ್ಲವೇ?

ಮಹಾದೇವರ ಕತೆಗಳು ಮತ್ತು ‘ಒಡಲಾಳ’ ನೀಳ್ಗತೆ ಸಿದ್ಧಿ ಪಡೆದವನು ಮಾಡಿದ ಪವಾಡ ಇದ್ದ ಹಾಗಿದ್ದರೆ, ‘ಕುಸುಮಬಾಲೆ’ ಮೋಡಿ ವಿದ್ಯೆ ಬಲ್ಲವನು ಮಾಡಿದ ಕಣ್ಕಟ್ಟು ಇದ್ದ ಹಾಗಿದೆ. ದೇವನೂರ ಮಹಾದೇವ ಅವರು ಚಾಣದಿಂದ ಕೆತ್ತಿ ಕೆತ್ತಿ ಕಲ್ಲನ್ನು ಸುಂದರವಾದ ಶಿಲಾಬಾಲಿಕೆಯನ್ನಾಗಿಸಿ ‘ಕುಸುಮಬಾಲೆ’ ಅಂತ ಕರೆದಿದ್ದಾರೆ. ರೂಪ ಇದೆ, ತಕ್ಕಮಟ್ಟಿಗೆ ಸ್ಪರ್ಶವೂ ಇದೆ. ಆದರೆ ರಸ ಮತ್ತು ಗಂಧ ಇಲ್ಲ. ನಾನು ಓಹೋ ಇಷ್ಟು ಚಂದ ಇದ್ದಾಳೆಂದು ಮುಟ್ಟಿ ಮುಟ್ಟಿ ನೋಡುತ್ತೇನೆ. ಆದರೆ ಅವಳು ನನ್ನನ್ನು ಮುಟ್ಟುವುದಿಲ್ಲ. ಏಕೆಂದರೆ ಅವಳಲ್ಲಿ ಜೀವ ಇಲ್ಲ. ಅವಳು ಮಹಾದೇವರ ಮಾನಸ ಪುತ್ರಿ. ಅವಳು ಅವರ

ನಾಭಿಯಿಂದ ಹುಟ್ಟಿದ ಮಗಳಲ್ಲ. ಲೇಖಕನ ನಾಭಿಯಿಂದ ಹುಟ್ಟಿದ ಜೀವಂತವಾದ ಕಾದಂಬರಿ ಏನಾದರೂ ಕನ್ನಡದಲ್ಲಿ ಇದ್ದರೆ ಅದು ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಮಾತ್ರ. 'ಕುಸುಮಬಾಲೆ' 'ಮಲೆಗಳಲ್ಲಿ ಮದುಮಗಳು' ಎಂಬ ಬೃಹತ್ ಕಾದಂಬರಿಯ ಒಂದು ಅನುಬಂಧ ಇದ್ದಹಾಗಿದೆ ಅಷ್ಟೆ!

(ದೇವನೂರ ಮಹಾದೇವ ಅವರ ವ್ಯಕ್ತಿತ್ವ ಮತ್ತು ಸಾಹಿತ್ಯ ಕುರಿತ
ವಿಶೇಷ ಸಂಪುಟ 'ಯಾರ ಜಪ್ತಿಗೂ ಸಿಗದ ನವಿಲುಗಳು'ನಲ್ಲಿ ಪ್ರಕಟ – ೨೦೦೦)

●

# ಆತ್ಮ ಮಿಡಿದರೆ... ಕೊರಳು ನುಡಿದರೆ... ಅದುವೆ ಭಾವಗೀತ

## ಕನ್ನಡದ ಹತ್ತು ಅತ್ಯುತ್ತಮ ಭಾವಗೀತೆಗಳು

೧. ಆನಂದಮಯ ಈ ಜಗಹೃದಯ – ಕುವೆಂಪು
೨. ಬಂಗಾರ ನೀರ ಕಡಲಾಚೆಗೀಚೆಗಿದೆ – ಬೇಂದ್ರೆ
೩. ದೀಪವೂ ನಿನ್ನದೆ, ಗಾಳಿಯೂ ನಿನ್ನದೆ – ಕೆ.ಎಸ್. ನರಸಿಂಹಸ್ವಾಮಿ
೪. ಹೂವು ಹೊರಳುವವು ಸೂರ್ಯನ ಕಡೆಗೆ – ಚನ್ನವೀರ ಕಣವಿ
೫. ಉಡುಗಣವೇಷ್ಟಿತ ಚಂದ್ರಸುಶೋಭಿತ – ಜಿ.ಎಸ್. ಶಿವರುದ್ರಪ್ಪ
೬. ಅಳುವ ಕಡಲೊಳು ತೇಲಿ ಬರುತಲಿದೆ – ಗೋಪಾಲಕೃಷ್ಣ ಅಡಿಗ
೭. ಜೋಗದ ಸಿರಿ ಬೆಳಕಿನಲ್ಲಿ – ನಿಸಾರ್ ಅಹಮದ್
೮. ನಿಲ್ಲಿಸದಿರು ನೀ ವನಮಾಲಿ – ಪು.ತಿ.ನ.
೯. ಹಚ್ಚೇವು ಕನ್ನಡದ ದೀಪ – ಡಿ.ಎಸ್. ಕರ್ಕಿ
೧೦. ಹುಣ್ಣಿಮೆ ಆಗಸದ ಬಣ್ಣದ ಛತ್ರಿಯ – ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ

ಏನದು ಭಾವಗೀತೆ?

**ತುಂಬಿದೆಗೆ ಸೋತು ಕೂತು**
**ತಂಬೂರಿ ಹಾಗೆ ಆತು**
**ಬರತಾವ ತಾನೆ ತಾನಾ**
**ಹರದಾಡತಾವ ಗಾನಾ**

ಇದೇ ಏನು ಭಾವಗೀತೆ?

**ಹೂತ ಚೈತ್ರದ ಮಾತು**
**ಕೋಗಿಲೆಯ**
**ಎದೆಯಲಿ ಕೂತು**
**ಸರ್ವರೂಪ ತಾ... ತೋರಿತು**
**ಪಾಡು ಹಾಡಾಯಿತು**

ಇದಲ್ಲವೆ ಭಾವಗೀತ?

**ಜೀವ ಮಿಡಿದ ಸದ್ದು**
**ನಾಲಗೆ**
**ನುಡಿಯಿತು ಕದ್ದು!**

ಇದೇ ಇದೇ...

**ಥಳುಕಿಲ್ಲದೆ, ಬಳುಕಿಲ್ಲದೆ...**
**ಅಳುಕಿಲ್ಲದೆ...**
**ತುಂಬಿ ತುಳುಕಿದೆ ಭಾವ**
**ನಂಬಿ ದಾಟಿದೆ ನೋವ**

ಅದೇ ಅದೇ...

**ಮೌನದಲಿ ಮೊಗ್ಗೊಂದು**
**ಬಿರಿದು ಸುರಿದ**
**ಪರಿಮಳದ ಜಾಡ ಹಿಡಿದು**
**ಬಂತು ದುಂಬಿ ಮೈದುಂಬಿ**
**ಝೇಂ... ಝೇಂಕರಿಸಿ**
**ಹೂಂ... ಹೂಂಕರಿಸಿ...**

ಏನಿದ ಭಾವಗೀತೆ? 'ತನ್ನಿಂದ ತಾನೇ ಹುಟ್ಟಿ, ತಾನೆ ಬೆಳೆದು ತನ್ನ ಹಿಗ್ಗಿನಿಂದಲೇ ಎಲ್ಲವನ್ನೂ ಹಿಗ್ಗಿಸಿ ಪರಾರ್ಥವನ್ನು ಅಪೇಕ್ಷಿಸದೆ ಆತ್ಮ ತೃಪ್ತಿಯನ್ನು ಕಾಣುವ ಭೃಂಗ ಮಾರ್ಗವೆ?'

ಹಲವು ವರುಷಗಳಿಂದ ಕನ್ನಡದ ಭಾವಗೀತೆಗಳನ್ನು ಕೇಳುತ್ತಾ, ಹಾಡುತ್ತಾ ಬೆಳೆದಿರುವೇನಾದರೂ ನಿಜಾರ್ಥದಲಿ ಭಾವಗೀತೆ ಎಂದರೇನು ಅರಿಯಲಾರದವಳಾಗಿದ್ದೇನೆ. ಕವಿತೆ ಎಂಬುದೇ ತೀವ್ರವಾದ ಭಾವನೆ; ಸಂವೇದನೆ. ಹಾಗಾಗಿ ಕಾವ್ಯವೆಲ್ಲವೂ ವಿಶಾಲಾರ್ಥದಲ್ಲಿ ಭಾವಗೀತೆಯೇ... ಇರಬಹುದೆ?

ನಿಜ. 'ಹೊಳೆದದ್ದೆಲ್ಲ ವಜ್ರವಲ್ಲ' ಎನ್ನುವಂತೆ ಹಾಡಲು ಸಾಧ್ಯವಾಗುವ ಸರಿಗಮದ... ಅಂದಾಜು ಸ್ಕೇಲಿಗೆ ಹೊಸೆದದ್ದು ಎಲ್ಲವೂ ಭಾವಗೀತೆಯಲ್ಲ. 'ಆತ್ಮದ ತುಣುಕು, ಕೊರಳಿನ ಪಲುಕು', ಸತ್ವ ತತ್ವ ತುಂಬಿದ ಕಾವ್ಯ ನಿವೇದನೆಗೆ ಸಂಗೀತ ಸಾಥಿಯಾಗಿ ಭಾವ ಇಮ್ಮಡಿಯಾಗುವುದಾದರೆ... ಅದೂ ಸೊಗಸೇ...

ಪ್ರತಿಯೊಂದು ಜೀವಿಗೂ ತನ್ನಿಷ್ಟ, ತನ್ನಿಚ್ಛೆ ಎಂಬುದು ಇದ್ದೇ ಇರುವುದರಿಂದ; ಎಲ್ಲವೂ ಆಪ್ತ ಎನಿಸಿದಾಗ್ಯೂ, ಪರಮಾಪ್ತ ಎಂಬುದೂ ಇರುವುದರಿಂದ ನನ್ನಿಷ್ಟದ ಹತ್ತು ಆಯ್ಕೆಗಳನ್ನು ನಿಮ್ಮ ಮುಂದೆ ಇರಿಸುತ್ತಿದ್ದೇನೆ. ಆಯುವವನು ಬದುಕಿ ಬಾಳಿದ ಕಾಲ–ದೇಶ, ಅವನೊಳಗೆ ರೂಪುಗೊಂಡ ಭಾವಕೋಶ, ಸುತ್ತಣ ದಿಗಿಣ ಹಾಕಿದ ವೇಷ, ಆವೇಶ ಎಲ್ಲವೂ ಅವನ/ ಅವಳ ಆಯ್ಕೆಯನ್ನು ಪ್ರಭಾವಿಸುತ್ತದೆಯಾದರೂ ಆಯ್ದವನಿಗೆ/ಳಿಗೆ, ಕಾವ್ಯಪ್ರೇಮಿಗಳ ಸಹಮತ ದೊರಕಿದ್ದಾದರೆ 'ಲಿಂಗ ಮೆಚ್ಚಿ ಅಹುದಹುದೆಂದಂತೆ' ಸಂತಸವಾಗುತ್ತದೆ. ನಾನು ಆಯ್ದ ಕವಿತೆಗಳ ಬಗ್ಗೆ ಅಷ್ಟಿಷ್ಟು ಭಿನ್ನಮತ ಇರಬಹುದು ಆದರೆ ಕವಿಗಳ ಬಗ್ಗೆ ಅಷ್ಟೇನೂ ತಕರಾರು ಇಲ್ಲದೆ ಕಾವ್ಯರಸಿಕರು ಬೆಂಬಲ ಸೂಚಿಸಬಹುದು ಎಂಬ ನಂಬಿಕೆಯಿಂದ ಈ ಕೆಳಗಿನ ಹತ್ತು ಅತ್ಯುತ್ತಮ ಭಾವಗೀತೆಗಳನ್ನು ಕಾವ್ಯ–ಪ್ರೇಮಿಗಳ ಮುಂದೆ ಇಡಬಯಸುವೆ.

### ೧. ಆನಂದಮಯ ಈ ಜಗಹೃದಯ –ಕುವೆಂಪು

ಅಗಣಿತ ತಾರಗಣಗಳಂತೆ ಕಿಕ್ಕಿರಿದಿರುವ ಕುವೆಂಪು ಕಾವ್ಯ ಭಂಡಾರದಿಂದ ಒಂದು ಭಾವಗೀತೆಯನ್ನು ಆಯುವುದು ಕಷ್ಟದ ಕೆಲಸವೇ. ಆದಾಗ್ಯೂ... 'ಆನಂದಮಯ ಈ ಜಗಹೃದಯ' ನನ್ನ ಫೇವರಿಟ್. ಸೃಷ್ಟಿಕರ್ತನ ವಿರಾಟ್ ಸ್ವರೂಪವನ್ನು ಕೆಲವೇ ಶಬ್ದಗಳಲ್ಲಿ ಕವಿ ಬಣ್ಣಿಸುವ ಬಗೆ ಶಬ್ದರೂಪಿ ಬೀಜದಲ್ಲಿ ಅಡಗಿರುವ ಹೆಮ್ಮರವನ್ನು ಬಣ್ಣಿಸಿದಂತಿದೆ. ಕುವೆಂಪು ಅವರ ಗೀತೆಗಳು ದಾಸವಾಳ, ಕಣಗಿಲ ರೀತಿಯವು. ಕಿಕ್ಕಿರಿದು ಮರದಲ್ಲಿ ನಿತ್ಯವೂ ಅರಳಿ ಕಣ್ಮನ ಸೆಳೆಯುವಂತಹವು. ನಿತ್ಯ ಪೂಜೆಗೆ ಸಲ್ಲುವಂತಹವುಗಳು. ಶ್ರೀಸಾಮಾನ್ಯನಿಗೂ ಎಟಕುವಂತಹವು. ಸಹೃದಯನ ಕಣ್ಣಳತೆಯಲ್ಲೇ ಇರುವ ಇವುಗಳನ್ನು ಮುಟ್ಟಬಹುದು, ಮೂಸಬಹುದು. ಗಾಢ ಬಣ್ಣ... ತುಸುವೇ... ಇದೆಯೋ ಇಲ್ಲವೋ ಎಂಬಂತಹ ಆಹ್ಲಾದಕರ ಪರಿಮಳ, ಮೃದು–ಮಂದಸ್ಮಿತ – ಮನುಜನ ಜತೆಜತೆಯಲ್ಲೇ ಬಾಳಿ ಬದುಕಿ ಬೆಳಗಿ ಇಲ್ಲವಾಗುವುದು... ಅಲ್ಲಲ್ಲ... ಪುನರಪಿಜನನಂ... ಮತ್ತೆ ಅರಳುವುದು... ಕತ್ತಲ ಜತೆ ಹೊರಳುವುದು...

> **'ಶಿವ ಕಾಣದೆ ಕವಿ ಕುರುಡನೊ**
> **ಶಿವ ಕಾವ್ಯದ ಕಣ್ಣೊ'**

ಶಿವಮೊಗ್ಗ ಸುಬ್ಬಣ್ಣ ಅವರ ಭೋರ್ಗರೆವ ದನಿಯಲ್ಲಿ ಈ ಭಾವಗೀತೆ ಕೇಳಿದ ಮೇಲೆ ಅದು ಅಲ್ಲಿಗೇ ಮುಗಿಯುವುದೇ ಇಲ್ಲ... ಕವಿತೆ ಅಲ್ಲೇ ಅಲ್ಲೇ ಸುಳಿದಾಡಿದಂತೆ... ಮತ್ತೊಮ್ಮೆ ಮಗದೊಮ್ಮೆ ಕೇಳಿದಾಗಲೂ ಹೊಚ್ಚ ಹೊಸದೆಂಬಂತೆ ಎದುರುಗೊಳ್ಳುವುದು ಈ ಕವಿತೆ.

### ೨. ಬಂಗಾರ ನೀರ ಕಡಲಾಚೆಗೀಚೆಗಿದೆ ನೀಲ ನೀಲ ತೀರ –ಬೇಂದ್ರೆ

ಮುಟ್ಟಿದ ಅಕ್ಷರಗಳನ್ನೆಲ್ಲ ಕಾವ್ಯವಾಗಿಸಿದ್ದು ಬೇಂದ್ರೆ, ಬೇಂದ್ರೆ ಮಾತ್ರವೇ. ಶಬ್ದಗಾರುಡಿಗ,

ಶಬ್ದ ಮಾಂತ್ರಿಕ. ಹೀಗೆ ಕವಿಯನ್ನು ಬಣ್ಣಿಸುವವರಾದರೂ ಕೇವಲ ಶಬ್ದಗಳಿಂದ ಬೇಂದ್ರೆಯನ್ನು ಹಿಡಿಯುವುದು ಅಸಾಧ್ಯ. ಸಿದ್ಧನೋ, ಬುದ್ಧನೋ... ತಂತ್ರವೋ, ಮಂತ್ರವೋ... ಬಿಡಿಸಲಾಗದ ಒಗಟು. ಬಿಡಿಸಹೋದಷ್ಟು ಜಿಗುಟು! ಬೇಂದ್ರೆ ಮರವಲ್ಲ ಬಳ್ಳಿ. ಬರೇ ಬಳ್ಳಿಯಲ್ಲ... ಸಡಗರದಿಂದ ಸಂಭ್ರಮಿಸಿ ಅತ್ತಲೋ, ಇತ್ತಲೋ ಎತ್ತೆತ್ತಲೋ ಎಗ್ಗಿಲ್ಲದೆ ಹಬ್ಬಿರುವ ಬಳ್ಳಿ. ತುದಿಯೆಲ್ಲಿ ಮೊದಲೆಲ್ಲಿ ತಿಳಿಯದಂತಹ ಮಾಯಾಜಾಲ. ಇನ್ನು ಕವಿತೆಗಳೋ ಗಮಗಮ – ಮಲ್ಲಿಗೆ ಹೂವು. ಕೊಯ್ದಷ್ಟೂ ಬುಟ್ಟಿ ತುಂಬುವುದು, ಬಿಡಿಸಿ ಬಿಡಿಸಿ ಕೈ ಸೋಲುವುದು. ಬಿಡಿಸ ಹೋದವನು ಬಿರಿದ ಹೂವಿಗೆ ಸೋತು, ಬಳ್ಳಿಗಾತು ಕುಳಿತು ಸಂಭ್ರಮಿತನಾಗಿ ಅಲ್ಲೇ ಸುತ್ತಿಸುಳಿದು ಘಮದೊಳಗೆ ಲಯವಾಗಬಲ್ಲ!

**ಇದೆ ಸಮಯವಣ್ಣಾ ಇದೆ ಸಮಯ ತಮ್ಮ**
**ನಂ ನಿಮ್ಮ ಆತ್ಮಗಳಿಗೆ**
**ಅಂಬಿಗನು ಬಂದ ನಂಬಿಗನು ಬಂದ**
**ಬಂದಾಥ ದಿವ್ಯಗಳಿಗೆ**

**ಸಿಕ್ಕಿಲ್ಲ ಅಲ್ಲ ಸಿಕ್ಕಲ್ಲೆ ಮಾತ್ರ**
**ಒಡೆಯುವುದು ಇದರ ಸೆಲೆಯು**

ಭಾವ–ಅನುಭಾವ ಸಮನಾಗಿ ಬೆರೆತ ಈ ಕವಿತೆ ನನ್ನ ಎರಡನೆಯ ಆಯ್ಕೆ.

### ೩. *ದೀಪವೂ ನಿನ್ನದೆ, ಗಾಳಿಯೂ ನಿನ್ನದೆ ಆರದಿರಲಿ ಬೆಳಕು* –ಕೆ.ಎಸ್.ನ.

**ಕಡಲೂ ನಿನ್ನದೆ, ಹಡಗೂ ನಿನ್ನದೆ**
**ಮುಳುಗದಿರಲಿ ಬದುಕು!**
**ನಿನ್ನಂತ ರಾಜ ಒಳಗಿದ್ದೂ ದೂರ;**
**ಇನ್ನೆಲ್ಲೋ ನೀನು!**
**ರಾಜರಹಿತ ರಾಜ್ಯಾಂಗ ಶಾಸನದ**
**ಪ್ರಾಣಶಕ್ತಿಯೇ ನೀನು!**

ಗುರಿಯಿಟ್ಟು ಬಾಣ ಬಿಟ್ಟು ನಿರಾಯಾಸವಾಗಿ ಸಹೃದಯದಲ್ಲಿ ನೆಲೆಸುವ ಕವಿ ಕೆ.ಎಸ್.ನ. ನೆಟ್ಟ ಹೂ–ಬಾಣವನ್ನು ಕಾಪಿಟ್ಟುಕೊಂಡ ಹಿರಿಮೆ ಕನ್ನಡ ಕಾವ್ಯ ರಸಿಕರದ್ದು. ಕೆ.ಎಸ್.ನ. ಭಾವಗೀತೆಗಳು ಸಿಹಿಯಾದ ರಸದುಂಬಿದ ದ್ರಾಕ್ಷಿಯ ಗೊಂಚಲಿನಂತೆ. ಬಿಡಿಯಾಗಿ, ಇಡಿಯಾಗಿ ಹೇಗೆ ಆಸ್ವಾದಿಸಿದರೂ ಮಧುರ, ಅತಿ ಮಧುರ. 'ಪ್ರಥಮ ರಾಜನಿಗೆ' ಈ ಮಧುರ ಭಾವಗೀತೆ – ನನ್ನ ಮೂರನೆಯ ಆಯ್ಕೆ.

### ೪. *ಹೂವು ಹೊರಳುವವು ಸೂರ್ಯನ ಕಡೆಗೆ, ನಮ್ಮ ದಾರಿ ಬರೆ ಚಂದ್ರನವರೆಗೆ*

**–ಚನ್ನವೀರ ಕಣವಿ**

**ಬಿಸಿಲ ಧಗೆಯ ಬಸಿರಿಂದಲೆ ಸುಳಿವುದು**
**ಮೆಲು ತಂಗಾಳಿಯು ಬಳಿಗೆ**
**ಸಹಿಸಿಕೊಂಡ ಸಂಕಟವನು ಸೋಸಲು**
**ಬಂದೆ ಬರುವುದಾ ಗಳಿಗೆ**

ಕಣವಿಯವರ ಕವಿತೆಗಳೆಂದರೆ ಯಾವತ್ತೂ 'ಮುಂಜಾವದಲಿ ಹಸಿರು ಹುಲ್ಲು ಮಕಮಲ್ಲಿನಲಿ ಪಾರಿಜಾತದ ಹೂವು ಸುರಿಸಿದಂತೆ' ಮೃದುವಚನ, ಮೃದುಭಾವ, ಮೌನ ಮೊಗ್ಗೆಯನೊಡೆದು ಮಾತರಳಿ ಬಂದಂತೆ; 'ಸುಳಿಗಾಳಿಯೊಂದಿನಿತು ಸೂಸಿ ಬಂದರು ಸಾಕು ಮರವನಪ್ಪಿದ ಬಳ್ಳಿ ಬಳುಕಿದಂತೆ...'

ವೈಣಿಕ ಮಾತ್ರ ವೀಣೆ ನುಡಿಸಬಲ್ಲ... ಮಿಕ್ಕವರು ಮೀಟುವರು ನಾದವಿಲ್ಲ! ಅಕ್ಷರಗಳನು ನುಡಿಸಿ ಭಾವ ಮಿಡಿಯುವಂತೆ ಮಾಡಲು ಯಶಸ್ವಿಯಾಗಿರುವ ಕವಿ ಕಣವಿಯವರ ಈ ಕವಿತೆ ನನ್ನ ನಾಲ್ಕನೆಯ ಆಯ್ಕೆ.

### ೫. *ಉಡುಗಣವೇಷ್ಟಿತ ಚಂದ್ರಸುಶೋಭಿತ ದಿವ್ಯಾಂಬರ ಸಂಚಾರಿ*

**– ಜಿ.ಎಸ್. ಶಿವರುದ್ರಪ್ಪ**

ಬಾಲ್ಯಕಾಲದ ಸ್ಮೃತಿಕೋಶದಲ್ಲಿ ಭದ್ರವಾಗಿ ಬೇರುಬಿಟ್ಟಿರುವ ಜಿ.ಎಸ್.ಎಸ್. ರವರ ಉಡುಗಣವೇಷ್ಟಿತ... ನನ್ನ ಐದನೆಯ ಆಯ್ಕೆ. ಚಿತ್ರಗೀತೆ–ಭಾವಗೀತೆ–ಜನಪದಗೀತೆ ಎಂದು ಭೇದ ಮಾಡದೆ ಎಲ್ಲ ಹಾಡುಗಳನ್ನು ಒಂದೇ ಎಂದು ತಿಳಿದು ಹಾಡುತ್ತಿದ್ದ ಕಾಲವದು. ಉಡುಗಣವೇಷ್ಟಿತ... ನಮ್ಮ ಪಾಲಿಗೆ ಎಚ್.ಆರ್. ಲೀಲಾವತಿಯವರ ಹಾಡಾಗಿತ್ತು! ಶಾಲೆಯ ಆ ದಿನಗಳಲ್ಲಿ ಆ ಹಾಡು ಹಾಡದ ಹೆಣ್ಣುಮಕ್ಕಳೇ ಇಲ್ಲ ಎಂದು ಹೇಳಿದರೆ ಅದು ಅತಿಶಯೋಕ್ತಿಯೇನೂ ಅಲ್ಲ. ಈ ಭಾವಗೀತೆ ನನ್ನ ಪಾಲಿಗೆ ಕೇವಲ ಒಂದು ಕವಿತೆ, ಗೀತೆ... ಅಲ್ಲ. ಬದಲು ಒಂದು ಚಿರಂತನ ಮಧುರ ಸ್ಮೃತಿ.

**ಕಣ್ಣ ನೀರಿನಲಿ**
**ಮಣ್ಣ ಧೂಳಿನಲಿ**
**ಹೊರಳುತ್ತಿರುವ ಸಹಚಾರಿ!**
**ಬಾಂದಳ ಚುಂಬಿತ**
**ಶುಭ್ರ ಹಿಮಾವೃತ**
**ತುಂಗಶೃಂಗದಲಿ ಗೃಹವಾಸಿ**
**ದೀನ ಅನಾಥರ**

ದುಃಖಿ ದರಿದ್ರರ
ಮುರುಕು ಗುಡಿಸಿಲಲಿ ಉಪವಾಸಿ!

## ೬. ಅಳುವ ಕಡಲೊಳು ತೇಲಿ ಬರುತಲಿದೆ ನಗೆಯ ಹಾಯಿದೋಣಿ...

**– ಗೋಪಾಲಕೃಷ್ಣ ಅಡಿಗ**

ಭಾವಗೀತೆಯೋ, ಪ್ರಗಾಥವೋ... ಛಂದೋಬದ್ಧವೋ... ಮುಕ್ತ ಬಂಧವೋ ಅದು ಎಲ್ಲಕ್ಕಿಂತ ಕಾವ್ಯವಾಗುವುದು ಅಗತ್ಯ. ನಿಜವಾದ ಕವಿ ಏನ... ನುಡಿಯಲಿ ಅದು ಕಾವ್ಯವಾಗಿ ಸಂಭವಿಸುವುದು. ಅಡಿಗರ ಪುಟ್ಟ ಪದ್ಯವನ್ನು ಆತ್ಮಗೀತದಂತೆ ಹಾಡಿ ಅದನ್ನು ಯಶಸ್ವಿ ಭಾವಗೀತೆಯನ್ನಾಗಿಸಿದ ಕೀರ್ತಿ ಪಿ. ಕಾಳಿಂಗರಾವ್ ಅವರಿಗೆ ಸಲ್ಲುತ್ತದೆ.

## ೭. ಜೋಗದ ಸಿರಿ ಬೆಳಕಿನಲ್ಲಿ... ತುಂಗೆಯ ತೆನೆ ಬಳುಕಿನಲ್ಲಿ...

**–ಕೆ.ಎಸ್. ನಿಸಾರ್ ಅಹಮದ್**

ನಿತ್ಯ ಹರಿದ್ವರ್ಣವನದ ತೇಗ ಗಂಧತರುಗಳಲ್ಲಿ
ನಿತ್ಯೋತ್ಸವ ತಾಯಿ, ನಿತ್ಯೋತ್ಸವ ನಿನಗೆ...

'ನಿತ್ಯೋತ್ಸವ' ಕನ್ನಡದ ಮೊದಲ ಭಾವಗೀತೆಗಳ ಕ್ಯಾಸೆಟ್. ಭಾರತೀಯ ಭಾಷೆಯಲ್ಲಿಯೇ ಭಾವಗೀತೆಗಳ ಮೊದಲ ಕ್ಯಾಸೆಟ್ ಎನ್ನುವ ಗರಿಮೆ ಇದರದ್ದು. ೧೯೭೮ರಲ್ಲಿ ಹೊರಬಂದ ಈ ಕ್ಯಾಸೆಟ್‌ನ ರೂವಾರಿಗಳು ಸಂಗೀತ ಸಂಯೋಜಕ ಮೈಸೂರು ಅನಂತಸ್ವಾಮಿ – ಕವಿ ನಿಸಾರ್ ಅಹಮದ್. ಕನ್ನಡದ ಎಲ್ಲ ಕಾವ್ಯಪ್ರಿಯರ ಮನಸ್ಸಿನಲ್ಲಿ ನಿತ್ಯೋತ್ಸವಕ್ಕೆ ಒಂದು ಪ್ರತ್ಯೇಕ ಸ್ಥಾನ ಇದ್ದೇ ಇದೆ. ಕನ್ನಡದ ಐಡೆಂಟಿಟಿಯನ್ನು ಪ್ರತಿಷ್ಠಾಪಿಸಿದ ಕನ್ನಡ–ಭಾವಗೀತೆ ಇದೆಂದು ಹೇಳಿದರೆ ತಪ್ಪಾಗಲಾರದು. ಇದು ಏಕಕಾಲಕ್ಕೆ ಕನ್ನಡ ಗೀತೆಯೂ ಹೌದು ಭಾವಗೀತೆಯೂ ಹೌದು. ಕನ್ನಡ ನೆಲ, ಜಲ, ಭಾಷೆ, ಆಶೆ ಪ್ರತಿನಿಧಿಸುವ ಈ ಗೀತೆ ನನಗೆ ಯಾವತ್ತೂ ಪ್ರಿಯವಾದುದು.

## ೮. ನಿಲ್ಲಿಸದಿರು ವನಮಾಲಿ ನೀ ಕೊಳಲಗಾನ – ಪು.ತಿ.ನ.

'ಕಲೆಯೋ ನಿಡಿದು, ಕಾಲವೋ ಕಿರಿದು' 'ನಡೆದಷ್ಟೇ ದಾರಿ, ಪಡೆದಷ್ಟೇ ಭಾಗ್ಯ'. ನಾನು ಕಾವ್ಯ ಪಕ್ಷಪಾತಿ, '...ಪಂಥಾಭಿಮಾನಿಯಲ್ಲ', ಎಂದ ಹಿರಿಯ ಕವಿ ಪುತಿನ ಅವರ 'ನಿಲ್ಲಿಸದಿರು ವನಮಾಲಿ...' ನನ್ನ ಎಂಟನೆಯ ಆಯ್ಕೆ. ಪ್ರೇಮ, ಕಾಮ, ವಿದ್ರೋಹ ಎಲ್ಲವನ್ನೂ ಪದವಾಗಿ ಬೆರೆಸಿ ದೈವವನ್ನು ನಿಮಿತ್ತವಾಗಿಟ್ಟುಕೊಂಡು ಮನುಷ್ಯನ ತೊಳಲಾಟ–ತಲ್ಲಣವನ್ನು ಸರಿಸಾಟಿಯಿಲ್ಲದಂತೆ ಬಣ್ಣಿಸಿದವರು ಪು.ತಿ.ನ.

ಹಾ ನಲವೆ, ನಿನ್ನ ತಡೆದಿಡಲೆನ್ನ ಜಾಗರದೊಳಿಲ್ಲ ಜಾಗ
ಕಂಡ ಜಡಜಂಗಮಕೆ ಕೈಯ ಜೋಡಿಸುವುದೇ ಕುಶಲವೀಗ.

ಒಳ್ಳೆಯ ಕವಿತೆಯನ್ನು ಕವಿ–ಸಹೃದಯರನ್ನು ಮಮತೆಯಿಂದ ಬಂಧಿಸುವ 'ಆನಂದಗ್ರಂಥಿ' ಎಂದು ಕರೆದಿರುವರು ಪು.ತಿ.ನ. 'ನಿಲ್ಲಿಸದಿರು ನೀ... ವನಮಾಲಿ' ಅಂತಹ ಆನಂದಗ್ರಂಥಿ ಎಂದಷ್ಟೇ ಹೇಳಬಲ್ಲೆ.

## ೯. ಹಚ್ಚೇವು ಕನ್ನಡದ ದೀಪ –ಡಿ.ಎಸ್. ಕರ್ಕಿ

ತೊರೆದೇವು ಮರುಳ ತಡೆದೇವು ಇರುಳ
ಪಡೆದೇವು ತಿರುಳ ಹಿಡಿ ನೆನಪ
ಕರುಳೆಂಬ ಕುಡಿಗೆ
ಮಿಂಚನ್ನೆ ಮುಡಿಸಿ
ಹಚ್ಚೇವು ಕನ್ನಡದ ದೀಪ
ಕರುನಾಡ ದೀಪ
ಸಿರಿನುಡಿಯ ದೀಪ
ಒಲವೆತ್ತಿ ತೋರುವಾ ದೀಪ

ಅದೆಷ್ಟೋ ವರುಷಗಳಿಂದ ಈ ಕವಿತೆ ನನ್ನ ಮನಸ್ಸಿನಲ್ಲಿ ನಿಂತಿದೆ. ಪ್ರತಿ ಬಾರಿ ಆಲಿಸಿದಾಗಲೂ ಎಂತಹ ಭವ್ಯ ಕನ್ನಡದ ಪರಂಪರೆ ನನ್ನ ಬೆನ್ನಿಗಿದೆ ಎಂಬ ಹೆಮ್ಮೆ ನನ್ನದಾಗುತ್ತದೆ. ಭಾವ ಉಕ್ಕಿಸುವ ಗುಣ ಈ ಕನ್ನಡ ಗೀತೆಗಿದೆ.

## ೧೦. ಹುಣ್ಣಿಮೆ ಆಗಸದ ಬಣ್ಣದ ಛತ್ರಿಯು

–ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ

ಹುಣ್ಣಿಮೆ ಆಗಸದ
ಬಣ್ಣದ ಛತ್ರಿಯು
ಮೆಲ್ಲಗೆ ತಾನಾಗಿ ಬಿಚ್ಚಿದೆ!
ದಿನವೆಲ್ಲ ಧಗೆಯಲ್ಲಿ
ಹೊರಳಿದ ಭೂಮಿಯು
ತಂಪಾಗಿ ಕನಸಾಗಿ ಹೊಚ್ಚಿದೆ.

ಕನ್ನಡ ಭಾವಗೀತೆಗಳಿಗೆ ಪುನಃಶ್ಚೇತನ ನೀಡಿದವರಲ್ಲಿ ಭಟ್ಟರು ಅಗ್ರಗಣ್ಯರು. ಕಾವ್ಯಸತ್ವದ ದೃಷ್ಟಿಯಿಂದ ಮೇಲೆ ಕಾಣಿಸಿದ ಕನ್ನಡ ಕವಿಗಳಿಗೆ ಹೋಲಿಸಿದರೆ ಭಟ್ಟರ ಭಾವಗೀತೆಗಳಲ್ಲಿ ಭಾವಚಂದಿರ ಕೊಂಚ ಪೇಲವವಾಗಿ ತದಿಗೆ, ಬಿದಿಗೆಯ ಚಂದಿರನಂತೆ ಗೋಚರಿಸಿದಾಗ್ಯೂ... ಚಂದ್ರಮನ ಹಾಜರಿಯಂತು ಇದ್ದೇ ಇದೆ ಎಂಬ ಸಮಾಧಾನ. ಕನ್ನಡ

ಜನಮಾನಸದಲ್ಲಿ ಭದ್ರವಾಗಿ ನೆಲೆಸಿರುವ ಭಟ್ಟರು ಬಹುಸಂಖ್ಯೆಯಲ್ಲಿ ಚೆಲುವಾದ ಭಾವಗೀತೆಗಳನ್ನು ಬರೆದಿರುವುದನ್ನು ಮರೆಯುವಂತಿಲ್ಲ.

ಎಸ್.ವಿ. ಪರಮೇಶ್ವರ ಭಟ್ಟರ 'ಪ್ರೀತಿಯ ಕರೆಕೇಳಿ', ತೀನಂಶ್ರೀ ಅವರ 'ಒಲವೊ ಹಗೆಯೊ', ಹೆಚ್.ಎಸ್. ವೆಂಕಟೇಶ ಮೂರ್ತಿಯವರ 'ಲೋಕದ ಕಣ್ಣಿಗೆ', ಸಿದ್ಧಲಿಂಗಯ್ಯ ಅವರ 'ಗುಡಿಸಿಲಿನಲ್ಲಿ ಅರಳಿದ ಗುಲಾಬಿ' ಮೇಲಿನ ಹತ್ತು ಭಾವಗೀತೆಗಳಷ್ಟೇ ನನಗೆ ಪ್ರಿಯವಾದವುಗಳು. ಹತ್ತು ಎಂದು ಗೆರೆ ಹಾಕಿರುವುದರಿಂದ ಇವನ್ನು ಸೇರಿಸಲಾಗಿಲ್ಲ ಅಷ್ಟೇ.

ಆಯ್ಕೆಯ ಮಾನದಂಡ: ಕವಿಯ/ಕವಿತೆಯು ಸ್ವಾನುಭೂತಿ, ಸ್ವದರ್ಶನ, ಸ್ವರೂಪ ದರ್ಶನ ಎಂದಷ್ಟೇ ನನ್ನ ನಮ್ರ ಅರಿಕೆ.

ಕವಿಯ ಪಾಡನ್ನು ಭಾವಕ್ಕೆ ತಕ್ಕುದಾಗಿ ಹಾಡಿ ಕವಿ ಮತ್ತು ಸಹೃದಯನನ್ನು ಬೆಸೆದವರು ಸುಗಮ ಸಂಗೀತ ಸಂಯೋಜಕರು ಮತ್ತು ಗಾಯಕರು. ಇಪ್ಪತ್ತನೆಯ ಶತಮಾನದಲ್ಲಿ ಕನ್ನಡ ಕಾವ್ಯದಲ್ಲಿ ಭಾವಗೀತೆಗಳ ಯುಗ ಆರಂಭವಾದಾಗ ಈ ಹೊಸ ಯುಗದ ಕವಿತೆಯನ್ನು ಸಂಗೀತದ ಆಸರೆಯಲ್ಲಿ ಪ್ರಸ್ತುತಪಡಿಸುವ ಹೊಸ ಶೈಲಿ ಬಾಳಪ್ಪ ಹುಕ್ಕೇರಿ, ಕಾಳಿಂಗರಾವ್, ಎಚ್.ಆರ್. ಲೀಲಾವತಿ ಇವರ ಮೂಲಕ ಅನಾವರಣಗೊಂಡಿತು, ಕವಿತೆ ತನಗೆ ತಾನೇ ಸತ್ವಶಾಲಿ ಅಹುದು. ಆದರೆ ಸಂಗೀತ ನಿಸ್ಸಂಶಯವಾಗಿ ಅದನ್ನು ಬೆಳಗುವುದು. ಮೇಲೆ ನಾನು ಉಲ್ಲೇಖಿಸಿರುವ ಹತ್ತು ಕವಿತೆಗಳನ್ನು ಆಯುವಾಗ ಅದರ ಹಿಂದೆ ಅದಕೆ ಜೀವ ತುಂಬಿದ ಗಾಯಕ, ಸಂಗೀತ ಸಂಯೋಜಕ ಇದರಿಂದ ಬೇರ್ಪಡಿಸಿ ನೋಡಲಾಗದು. ಕನ್ನಡದ ಭಾವಲೋಕವನ್ನು ಉಜ್ವಲವಾಗಿ ಬೆಳಗಿದವರು ಪಿ. ಕಾಳಿಂಗರಾವ್, ಮೈಸೂರು ಅನಂತಸ್ವಾಮಿ, ರತ್ನಮಾಲ, ಸಿ. ಅಶ್ವಥ್, ಎಚ್.ಕೆ. ನಾರಾಯಣ, ಶಿವಮೊಗ್ಗ ಸುಬ್ಬಣ್ಣ, ಎಚ್.ಆರ್. ಲೀಲಾವತಿ, ಪದ್ಮಚರಣ್, ಜಯಶ್ರೀ ಅರವಿಂದ್, ಬಿ.ಆರ್. ಛಾಯಾ ಮುಂತಾದವರು. ನಾನು ಆಯ್ದ ಕವಿತೆಗಳ ಹಿಂದೆ ಇರುವ ಇವರನ್ನು ನೆನೆದು ಈ ಲೇಖನ ಮುಗಿಸುವೆ.

(ವಿಕ್ರಾಂತ ಕರ್ನಾಟಕ, ದೀಪಾವಳಿ ವಿಶೇಷಾಂಕ – ೨೦೦೭)

●

# ಕನ್ನಡ ಮಹಿಳಾ ಸಾಹಿತ್ಯದ ದಿಕ್ಕು–ದೆಸೆ: ಒಂದು ಮಾತುಕತೆ

**ಸವಿತಾ ನಾಗಭೂಷಣ:** ಮಹಿಳಾ ಸಾಹಿತ್ಯದ ದಿಕ್ಕು ದೆಸೆ ಕುರಿತು ನಮಗೆ 'ಉಳುಮೆ' ಪತ್ರಿಕೆಯ ಸಂಪಾದಕರು ಚರ್ಚೆಮಾಡಿ ಬರೆದುಕೊಡ್ರಿ ಅಂದ್ರು. ಕಳೆದ ಹಲವಾರು ದಿನಗಳಿಂದ ಈ ಕುರಿತು ಚರ್ಚೆ ನಡೆಸಬೇಕು ಎಂದು ಪ್ರಯತ್ನಿಸ್ತಿದ್ರು, ನಾವಿಬ್ಬರೂ ಒಂದು ಗಂಟೆ ಒಟ್ಟಿಗೆ ಸೇರಿ ಚರ್ಚಿಸೋದಕ್ಕೆ ಆಗಿರಲಿಲ್ಲ. ಬಹುಶಃ ನಮ್ಮ ಬರವಣಿಗೆಗೂ ಇದನ್ನೇ ಅನ್ವಯಿಸಬಹುದೇನೋ. ಎಲ್ಲಾ ಕೆಲಸ ಮುಗಿದ ಮೇಲೆ ನಾವು ನಮ್ಮ ಬರವಣಿಗೆಗಾಗಿ ಒಂದಿಷ್ಟು ಜಾಗ ಇಟ್ಕೋತೀವಿ. ಆದರೆ ನಮ್ಮೆಲ್ಲಾ ಕೆಲಸ ಮುಗಿದು, ಇನ್ನು ಬರವಣಿಗೆ ಮಾಡೋಣ ಅಂತ ಅನ್ಕೊಂಡಾಗ ನಮ್ಮಲ್ಲಿ ಬರೆಯುವ ಚೈತನ್ಯವೇ ಉಳಿದಿರೋಲ್ಲ. ಯಾಕೆಂದರೆ ಹೆಣ್ಣುಮಕ್ಕಳ ಜೀವನದಲ್ಲಿ ಬರವಣಿಗೆ ಪ್ರಿಯಾರಿಟಿನೇ ಅಲ್ವೇನೊ ಅಂತ ಅನ್ನಿಸ್ತದೆ. ನಮಗೆ ನಮ್ಮ ಕುಟುಂಬ, ನಮ್ಮ ಮಕ್ಕಳು, ಗಂಡ, ಅತ್ತೆ–ಮಾವಂದಿರು, ನಮ್ಮ ವೃತ್ತಿ ನಮ್ಮ ನಾಯಿ, ಬೆಕ್ಕುಗಳು, ದನಕರುಗಳು, ಈ ಎಲ್ಲವೂ ನಮ್ಮ ಪ್ರಿಯಾರಿಟಿಗಳು. ಅದಾದ ನಂತರ ಒಂದಿಷ್ಟು ಜಾಗ ಉಳಿದಿದ್ದರೆ ಅದನ್ನ ನಾವು ನಮ್ಮ ಸೃಜನಶೀಲತೆಗೆ ಕಾಪಿಡೋದು.

**ಸಬಿತಾ ಬನ್ನಾಡಿ:** ನಾನು ಆ ಬಗ್ಗೆ ಬೆಳಿಗ್ಗೆಯಿಂದ ಆಲೋಚನೆ ಮಾಡ್ತಾ ಇದೀನಿ. ಒಬ್ಬ ಗಂಡಸು ತನ್ನ ಪ್ರವೃತ್ತಿ ಮತ್ತು ವೃತ್ತಿ ಬಗ್ಗೆ ಎಷ್ಟೊಂದು ಗಮನ ಕೊಡ್ತಾನೆ ಮತ್ತು ಅವುಗಳಿಗೆ ಎಷ್ಟೊಂದು ಮಹತ್ವ ಕೊಡ್ತಾನೆ. ಹಾಗೂ ಒಂದು ಸೊಸೈಟಿಯಲ್ಲಿ ಯಾವ ರೀತಿ ಪ್ರೊಜೆಕ್ಟ್ ಮಾಡಬೇಕು, ಹೇಗೆ ಮಂಡಿಸಬೇಕು ಎನ್ನುವುದರ ಬಗ್ಗೆ ಆಲೋಚನೆ ಮಾಡ್ತಾನೆ. ಆದರೆ ಹೆಣ್ಣುಮಕ್ಕಳು ಈ ಬಗ್ಗೆ ಆಲೋಚನೆ ಮಾಡೋಕೆ ಹೋಗೋದೆ ಇಲ್ಲ. ನಾವು ಹೆಣ್ಮಕ್ಕಳು ಕಾಯ್ತಾ ಇರ್ತೀವಿ. ನಾವು ಮಾಡಿರೋ ಕೆಲಸವನ್ನ ಬೇರೆಯವರು ಗುರುತಿಸಲಿ ಅಂತ ಕಾಯ್ತಾನೇ ಇರ್ತೀವಿ.

**ಸವಿತಾ:** ನಮ್ಮಲ್ಲಿ ಬಹಳ ದೊಡ್ಡ ಬರವಣಿಗೆ ಬಂದಿಲ್ಲ ಅನ್ನೋ ಆರೋಪ ಇದ್ಯಲ್ಲ ಅದನ್ನ ನಾನು ಒಪ್ಪಲ್ಲ. ಇಷ್ಟು ಸಣ್ಣ ಸಮಯವನ್ನೇ ಬರವಣಿಗೆಗೆ ಮೀಸಲಾಗಿಟ್ಟರೂ ಕೂಡ ನಮ್ಮ ಮಹಿಳೆಯರು ಎಷ್ಟು ಒಳ್ಳೆಯ ಬರವಣಿಗೆ ಮಾಡಿದ್ದಾರೆ ಅಂತ ಆಲೋಚಿಸಿದಾಗ ನನಗೆ ತುಂಬಾ ಖುಷಿಯಾಗ್ತದೆ. ಅಯ್ಯೋ ಅಂಥದ್ದೇನಿದೆ ಅಂತಾರೆ... ನಮ್ಮ ಮಹಿಳೆಯರು

ಕಳೆದ ನೂರು ವರ್ಷದಲ್ಲಿ ಏನು ಬರೆದಿದ್ದಾರೆ ಎಂದು ಖುಷ್ಬಾಗಿ ನೋಡಿದಾಗ ತುಂಬಾ ದೊಡ್ಡ ಕೊಡುಗೆ ನೀಡಿದ್ದಾರೆ ಅಂತಾನೆ ನನಗೆ ಅನಿಸತ್ತೆ.

**ಸಬಿತಾ:** ಆಧುನಿಕ ಮಹಿಳಾ ಸಾಹಿತ್ಯವನ್ನು ಗಮನಿಸಿದಾಗ ನಮಗೆ ಕಾಣಸುವುದೇನೆಂದರೆ ನಮ್ಮ ಲೇಖಕಿಯರು ಪ್ರಾರಂಭಿಕ ಘಟ್ಟದಲ್ಲಿ ತಮ್ಮ ಗುರುತಿಸುವಿಕೆಗಾಗಿ ಕಾದರು. ಆದರೆ ಅವರ ನಿರೀಕ್ಷೆಯಂತೇನೂ ಅವರಿಗೆ ಪ್ರೋತ್ಸಾಹ ದೊರೆಯಲಿಲ್ಲ. ಲೇಖಕಿಯರು ಕೂಡ ತಮ್ಮದೇ ಆದ ಸಾಂಸ್ಥಿಕ ಬಲ ಮಾಡಿಕೊಂಡು ಬರವಣಿಗೆಯನ್ನು ಪ್ರೊಜೆಕ್ಟ್ ಮಾಡುವ ಪ್ರಯತ್ನ ನಡೆಸಲಿಲ್ಲ. ತಿರುಮಲಾಂಬ ಅವರು ಪ್ರಕಟಣಾ ಕಾರ್ಯಕ್ಕೆ ಮುಂದಾಗಿದ್ದರು ಅನ್ನೋದು ನಿಜ. ಅದಕ್ಕೆ ಅವರಿಗೆ ಪ್ರಾರಂಭದಲ್ಲೇ ತೊಡಕು ಉಂಟಾಯಿತು ಅನ್ನೋದು ಸತ್ಯ. ಸಾರ್ವಜನಿಕ ಬದುಕಿನಲ್ಲಿ ಮಹಿಳಾ ಬರವಣಿಗೆಗೆ ದೊಡ್ಡ ಸ್ಥಾನ ಕಲ್ಪಿಸಿಕೊಂಡ ನಿರಂತರವಾದ ಶ್ರಮ ಕಾಣುವುದಿಲ್ಲ. ಆದ್ದರಿಂದ ನಮ್ಮ ಎಷ್ಟೋ ಪ್ರಮುಖ ಲೇಖಕಿಯರು ತಮ್ಮ ಬರವಣಿಗೆಯಲ್ಲಿ ನಿರಂತರತೆ ಕಾಪಾಡಿಕೊಳ್ಳುವುದಿಲ್ಲ. ಬರೀತಾರೆ, ನಿಲ್ಲಿಸ್ತಾರೆ. ಅದು ಗಹನವಾದ ಕೃತಿಯಾಗಿದ್ದರೂ ಅನೇಕರ ಗಮನಕ್ಕೆ ಬರುವುದಿಲ್ಲ. ಕನ್ನಡ ಮಹಿಳಾ ಸಾಹಿತ್ಯದ ಮಟ್ಟಿಗೆ ಹೇಳುವುದಾದರೆ ಈ ಗುರುತಿಸುವಿಕೆಯನ್ನು ಗಂಡಸರು ಮಾಡಬೇಕು ಅಂತ ನಾವು ಬಯಸಿದ್ವಿ. ಅವರು ಗುರುತಿಸಬೇಕು, ಅವರು ಗಮನಿಸಬೇಕು ಅಂತ. ಹೀಗಾಗಿ ಆರಂಭದ ಗಂಭೀರ ಲೇಖಕಿಯರು ತಮ್ಮ ಬರವಣಿಗೆ ವಸ್ತುವಿನ ಬಗ್ಗೆ ಯೋಚನೆ ಮಾಡುವಾಗ ಕೂಡ ಅವರು ಸುಧಾರಣಾವಾದಿ ಮಾದರಿಯ ವಸ್ತುವನ್ನು ಯಾಕೆ ಆಯ್ದುಕೊಂಡರು ಎಂದರೆ ಅದರ ಹಿನ್ನೆಲೆಯಲ್ಲಿ ಇಂಥದೊಂದು ಕಾರಣ ಕೆಲಸ ಮಾಡಿದೆ ಅಂತ ಅನ್ನಿಸುತ್ತೆ.

ನಾನು ಈ ತರ ಯಾಕೆ ಯೋಚಿಸ್ತಿದೀನಿ ಅಂದ್ರೆ ನನ್ನ ವೈಯಕ್ತಿಕ ಅನುಭವದಿಂದ ಹೇಳುವುದಾದರೆ ನಾನೇನೋ ಬರೀತಿದೀನಿ, ನಾನು ಎಲ್ಲಿಗಾದರೂ ಮಾತಾಡ್ಲಿಕ್ಕೆ ಹೋಗ್ತಿದೀನಿ ಅಂದ್ರೆ ನನ್ನನ್ನ ಆ ಬಗ್ಗೆ ನಿರ್ದೇಶಿಸುವವರು ಇರ್ತಾರೆ. ಆ ನಿರ್ದೇಶಿಸುವವರು ಏನು ತಿಳ್ಕಂಡಿರ್ತಾರೆ ಅಂದ್ರೆ ನಾವಿವರನ್ನ ಸರಿಯಾದ ದಾರಿಯಲ್ಲಿ ನಡೆಸುತ್ತಿದ್ದೀವಿ ಅಂತ. ದುರದೃಷ್ಟವಶಾತ್ ನಾವು ಸಹ ಅವರು ನಿರ್ದೇಶಿಸಿದ್ದೇ ಸರಿಯಾದ ದಾರಿ ಅಂತ ತಿಳ್ಕಂಡಿದೀವಿ. ಹಾಗಾಗಿ ಗಂಡಸರು ಮೆಚ್ಚುವ, ಅವರು ಗಮನಿಸುವ, ಅವರು ಪ್ರೋತ್ಸಾಹಿಸುವ ಕೃತಿಗಳನ್ನೇ ಬರೆಯೋಕೆ ಹೋದ್ವಿ. ನಾನ್ಯಾಕೆ ಇಂತಹ ಪ್ರಕ್ರಿಯೆ ಕನ್ನಡದಲ್ಲೇ ನಡೆದಿದ್ದು ಅಂತ ಹೇಳ್ತಾ ಇದೀನಿ ಅಂದ್ರೆ ಬೇರೆ ಕೆಲವು ಭಾಷೆಗಳಲ್ಲಿ ಬರೆಯೋ ಕೆಲವು ಲೇಖಕಿಯರಿಗೆ ಈ ರೀತಿಯಾಗಿಲ್ಲ. ಬಹುಶಃ ಅವರು ಇದನ್ನೆಲ್ಲ ಮೀರಿ, ಧಿಕ್ಕರಿಸಿ ತಮ್ಮ ಸ್ವಂತ ಅನುಭವಗಳನ್ನೆಲ್ಲ ಎಗ್ಗಿಲ್ಲದೆ ಹೇಳಲು ಹೊರಟ್ರು. ಆದರೆ ಕನ್ನಡದಲ್ಲಿ ಇಂಥದ್ದೊಂದು ಜಾಯಮಾನ ಇದುವರೆಗೆ ಹೆಚ್ಚಾಗಿ ಕಂಡು ಬಂದಿಲ್ಲ. ಹೆಚ್ಚಿನಂಶ ಕಂಡು ಬಂದಿಲ್ಲ ಅಂತ್ಲೇ ಹೇಳಬಹುದು... ಆಮೇಲೆ ಇದರಲ್ಲಿ ನನಗೊಂದು ರಾಜಕೀಯವು ಕಂಡು ಬರುತ್ತಿದೆ. ನಮ್ಮ ಜನಪ್ರಿಯ ಲೇಖಕಿಯರಿಗೆ ಪ್ರೋತ್ಸಾಹ ದೊರಕಿದೆ. ಅವರಿಗೆ ಯಾವ ವಲಯದಿಂದ

ಪ್ರೋತ್ಸಾಹ ದೊರಕಿದೆ ಅಂದ್ರೆ ನಮ್ಮ ಗಂಭೀರ ವಿಮರ್ಶಕರ ವಲಯದಿಂದಲ್ಲ. ಬದಲಿಗೆ ಸಾರ್ವಜನಿಕ ವಲಯದಲ್ಲಿ ಪತ್ರಿಕೆಗಳು, ಮಾಧ್ಯಮಗಳು ಜನಪ್ರಿಯ ಬರಹಗಾರ್ತಿಯರಿಗೆ ಸಂಪೂರ್ಣ ಬೆಂಬಲ ಕೊಟ್ಟು ಇದೇ ನಿಜವಾದ ಬರವಣಿಗೆ ಎಂಬ ಭ್ರಮೆಯಲ್ಲಿರುವ ಹಾಗೆ ಮಾಡಿದ್ದಾರೆ. ಲೇಖಕಿಯರು ಕೂಡ ಈ ಭ್ರಮೆಯನ್ನೇ ನಂಬಿಕೊಂಡು ಜನಪ್ರಿಯ ಬರವಣಿಗೆಯನ್ನು ನೆಚ್ಚಿಕೊಂಡು ಬಂದಿದ್ದಾರೆ. ಇಂದು ಜನಪ್ರಿಯ ಬರಹಗಾರ್ತಿಯರು ಮೂಲೆಗುಂಪಾಗಿರಬಹುದು. ಆದರೆ ತತ್ಕಾಲದಲ್ಲಿ ಅವರಿಗೆ ಸಂಪೂರ್ಣ ಬೆಂಬಲ ಸಿಕ್ಕಿದೆ ಅಂದರೆ ಧಾರವಾಹಿ ನಿರ್ಮಾಣ ಮಾಡೋರಿಗಲ್ಲ. ಅದನ್ನ ನೋಡೋದಿಕ್ಕೆ ಹೆಂಗಸರಿಗೆ ಮನೆಯಲ್ಲಿ ಬೆಂಬಲ ಸಿಕ್ತದೆ.

**ಸವಿತಾ:** ಕನ್ನಡದ ಮಹಿಳಾ ಕಾದಂಬರಿ ಬರವಣಿಗೆಗೆ ನೂರು ವರ್ಷ ತುಂಬ್ತಾ ಇರೋ ಈ ಸಂದರ್ಭದಲ್ಲಿ ಯೋಚಿಸಿದಾಗ ಮಹಿಳಾ ಕಾದಂಬರಿ ಕ್ಷೇತ್ರ ಅಗಾಧ ಪ್ರಮಾಣದಲ್ಲಿ ಬೆಳೆದಿದೆ. ಒಂದು ಕಾಲಘಟ್ಟದಲ್ಲಂತೂ ಒಬ್ಬೊಬ್ಬ ಮಹಿಳೇನೂ ಹತ್ತು, ಇಪ್ಪತ್ತು ಕಾದಂಬರಿ ಬರೆದು ಹಾಕ್ಬಿಟ್ಟರು. ಆವಾಗ ಅದನ್ನ ಜನಪ್ರಿಯ ಬರವಣಿಗೆ ಅಂತ ವಿಮರ್ಶಕರು ತಮಾಷೆ ಮಾಡಿರಬಹುದು. ಆದರೆ ಇವತ್ತಿನ ಈ ಹಿನ್ನೆಲೆಯಲ್ಲಿ ಯೋಚಿಸಿದಾಗ ಮಹಿಳಾ ಕಾದಂಬರಿಗಳು ದೊಡ್ಡ ಕ್ಯಾನ್ವಾಸ್‌ನ್ನೇ ಕಟ್ಟಿಕೊಟ್ಟಿವೆ. ಬಹುಸಂಖ್ಯಾತ ಮಹಿಳೆಯರಲ್ಲಿ ಅಕ್ಷರದ ಬಗ್ಗೆ ಅವರು ಪ್ರೀತಿ ಹುಟ್ಟಿಸಿದ್ದು ಕಡಿಮೆ ಸಾಧನೆ ಏನಲ್ಲ. ಆಮೇಲೆ ಜನಪ್ರಿಯ ಬರಹಗಾರರಿಗೆ ತಿಳಿದಿತ್ತು, ವಿಮರ್ಶಕರು ತಮ್ಮ ಬರವಣಿಗೆಯನ್ನ ಮಹತ್ವದ್ದಾಗಿ ಪರಿಗಣಿಸೋಲ್ಲ ಅಂತ. ಅದಕ್ಕೆ ಅವರು ಜನ ಸಾಮಾನ್ಯರ ಎದುರು ತಮ್ಮ ಕೃತಿಗಳನ್ನಿಟ್ಟು ಈ ನೆಲೆಯಿಂದ ಬಂದ ಪ್ರತಿಕ್ರಿಯೆಗಳಿಂದ ಆತ್ಮವಿಶ್ವಾಸ ಪಡೆದ್ರು. ಈ ರೀತಿ ಆತ್ಮವಿಶ್ವಾಸದ ಗಳಿಸ್ಕೊಂಡು ಅವರು ತಮ್ಮ ಬರವಣಿಗೆ ಮುಂದುವರೆಸಿದ್ದೆ ಬಹುಶಃ ನಾವು ಇವತ್ತು ಸಣ್ಣಪುಟ್ಟ ಪ್ರಮಾಣದಲ್ಲಾದರೂ ಅಕ್ಷರ ಪ್ರೀತಿಯನ್ನು ಉಳಿಸಿಕೊಂಡು ಕಾವ್ಯ, ಕತೆ, ಸಂಶೋಧನೆ, ವಿಮರ್ಶೆ ಮತ್ತಿತರ ಕ್ಷೇತ್ರಗಳಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಯ್ತು ಅನ್ನಿಸುತ್ತೆ. ವಿಮರ್ಶಕರು ಮಹಿಳಾ ಜನಪ್ರಿಯ ಸಾಹಿತ್ಯವನ್ನು ತೀರಾ ಕನಿಷ್ಟ ಅಂತ್ಹೇಳಿ ಸಾರಾಸಗಟಾಗಿ ತಳ್ಳಿ ಹಾಕಿದ್ದಾರೆ. ಆದರೆ ಆ ದೊಡ್ಡ ಕಾದಂಬರಿ ರಾಶಿಯಲ್ಲಿ ಮಧ್ಯೆ ಮಧ್ಯೆ ನಮ್ಮ ಎಂ.ಕೆ. ಇಂದಿರಾ, ಅನುಪಮಾ ನಿರಂಜನ ಕಾಣಿಸ್ತಾರೆ ಅನ್ನೋ ಅಂಶವನ್ನು ನಾವು ನೆನಪಿಟ್ಕೋಬೇಕು.

**ಸಬಿತಾ:** ಜನಪ್ರಿಯ ಕಾದಂಬರಿಗಳನ್ನು ಕುರಿತಂತೆ ಇನ್ನೊಂದು ಅಂಶವನ್ನು ಗುರುತಿಸಲು ನಾನು ಇಷ್ಟಪಡ್ತೀನಿ. ಹ್ಯಾಗೆ ಮಹಿಳೆಯರು ಜನಪ್ರಿಯ ಸಾಹಿತ್ಯವನ್ನು ಬರೆದಿದ್ದಾರೋ ಅಷ್ಟೇ ಪ್ರಮಾಣದಲ್ಲಿ, ಅಷ್ಟೇ ಸಂಖ್ಯೆಯಲ್ಲಿ ಜನಪ್ರಿಯ ಸಾಹಿತ್ಯವನ್ನು ಪುರುಷರು ಬರೆದಿದ್ದಾರೆ. ಅವರಿಗೆ ಈ ರೀತಿ ಅಟ್ಯಾಕ್ ಆಗಿಲ್ಲ. ಅಂದರೆ ಜನಪ್ರಿಯ ಸಾಹಿತ್ಯ ಬರೆದ ಹೆಣ್ಣುಮಕ್ಕಳದ್ದು ಎಂಥ ಸಾಹಿತ್ಯ ಅದು, ಉಪಯೋಗವಿಲ್ಲದ್ದು ಅಂತ. ಆದರೆ ಗಂಭೀರ ಸಾಹಿತ್ಯ ಬರೆದ ಹೆಣ್ಣುಮಕ್ಕಳ ಬಗ್ಗೆಯೂ ಗುರುತಿಸುವಿಕೆ ಇಲ್ಲ. ಯಾಕೆಂದ್ರೆ ಅವರಿನ್ನೂ ನಮ್ಮ ಮಟ್ಟಕ್ಕೆ ಬಂದಿಲ್ಲ

ಅಂತ. ಆದರೆ ಎಷ್ಟೋ ಪತ್ತೇದಾರಿ ಕಾದಂಬರಿಗಳನ್ನ ಬರೆದ ನರಸಿಂಹಯ್ಯನಂತವರು ಅಷ್ಟು ಪಾಪ್ಯುಲರ್ ಆಗಿದ್ದಾಗ್ಯೂ ಅವರ ಬಗ್ಗೆ ಇಂಥ ಆರೋಪಗಳು ಬರ್ಲಿಲ್ಲ. ಇವೆಲ್ಲದರ ನಡುವೇನೂ ತಿರುಮಲಾಂಬರಿಂದ ತಗೊಂಡ್ರು ಕೂಡ, ಮಹಿಳೆಯರು ಮಾಡಿದ ಯಾವ ಬರವಣಿಗೆಯು ಕಡಿಮೆಯದ್ದಲ್ಲ. ಈ ಕಾಲದ ಹಿನ್ನೆಲೆಯಲ್ಲಿ ಮತ್ತು ಅವರು ಬರೆಯುತ್ತಿದ್ದ ಒಂದು ಪರಿಮಿತಿಯೊಳಗೆ ಅವರ ಕೃತಿಯನ್ನ ಇಟ್ಟು ನೋಡ್ಬೇಕೆ ವಿನಃ ಅದೇ ಕಾಲದ ದೊಡ್ಡ ಪುರುಷ ಲೇಖಕರೊಂದಿಗೆ ಹೋಲಿಸಬೇಕಾದ ಅವಶ್ಯಕತೆ ಇಲ್ಲ. ಉದಾಹರಣೆಗೆ ಕಾರಂತರು ಊರೂರು ಸುತ್ತುತ್ತಿದ್ದರು. ಅಂತ ಒಂದು ಸಾಧ್ಯತೆ ನಮ್ಮ ಯಾವ ಹೆಣ್ಣುಮಕ್ಕಳಿಗೂ ಇಲ್ಲ. ಅಕ್ಕಮಹಾದೇವಿಗೆ ಅದು ಸಾಧ್ಯವಾಗಿತ್ತು. ಅದಕ್ಕೆ ಅವಳು ಬರೆದು, ಸಾಬೀತು ಮಾಡಿದ್ಲು. ಆದ್ದರಿಂದ ಆಧುನಿಕ ಸಮಾಜ ನಿರ್ಮಿಸಿದ ಹೊಸ ಕುಟುಂಬದ ಪರಿಕಲ್ಪನೆಯೊಳಗೆ ಹೆಣ್ಣನ್ನ ಆದರ್ಶಸತಿ, ಆದರ್ಶತಾಯಿಯಾಗಿ ಒಪ್ಕಂಡು ಚಿತ್ರಿಸಿ ಅವಳನ್ನ ಹಾಗಂತ ನಂಬಿಸಲಾಗಿದೆ. ಅವಳು ಸಹ ಅದನ್ನ ನಂಬಿಕೊಂಡು ಬಿಟ್ಟಿದ್ದಾಳೆ. ಈ ಎಲ್ಲ ತೊಡಕುಗಳ ಮಧ್ಯೆಯು ಮಹಿಳಾ ಸಾಹಿತ್ಯ ಬೆಳೆದಿದೆ. ಆದ್ದರಿಂದ ಮಹಿಳಾ ಸಾಹಿತ್ಯದಲ್ಲಿ ಏನೂ ಇಲ್ಲ ಅನ್ನೋ ಪೂರ್ವಾಗ್ರಹ ಬಿಟ್ಟು ಅವರ ಪರಿಮಿತಿಯೊಳಗೆ ಎಷ್ಟು ಬರೆದಿದ್ದಾರೆ ಅದನ್ನ ಗೌರವ ಕೊಟ್ಟು ಗುರುತಿಸುವ ಕೆಲಸ ಆಗ್ಬೇಕಿದೆ.

**ಸವಿತಾ:** ಆಯಾ ಕಾಲದೇಶದಲ್ಲಿ ಬದುಕಿದ ಮಹಿಳೆ ತನ್ನ ಸುತ್ತಮುತ್ತಲಿನ ಪರಿಸ್ಥಿತಿಗೆ ಪ್ರತಿಕ್ರಿಯಿಸಿ ತನ್ನ ಮಿತಿಯಲ್ಲಿ ಬರವಣಿಗೆ ಮಾಡ್ತಾ ಬಂದಿದ್ದಾಳೆ. ಜನಪ್ರಿಯವಾಗಿ ಬರೆದಿರೋರು ನೂರಾರು ಜನ ಇದಾರೆ... ಅದನ್ನ ಬಿಟ್ಟು ನೋಡಿದ್ರೂ... ಬೇಕಾದಷ್ಟು ಮಹಿಳೆಯರು ಸಿಗ್ತಾರೆ... ತಿರುಮಲಾಂಬ ಇರಬಹುದು, ಶ್ಯಾಮಲಾದೇವಿ, ಸಾವಿತ್ರಮ್ಮ, ದೇವಾಂಗನಾಶಾಸ್ತ್ರಿ, ಸರಸ್ವತಿಬಾಯಿ ರಾಜವಾಡೆ, ಕಲ್ಯಾಣಮ್ಮ, ಕೊಡಗಿನ ಗೌರಮ್ಮ, ಶಾಂತಾದೇವಿ ಮಾಳವಾಡ ನಂತರದಲ್ಲಿ ಅನುಪಮಾ ನಿರಂಜನ, ಎಂ.ಕೆ. ಇಂದಿರಾ, ವೀಣಾ ಶಾಂತೇಶ್ವರ, ವೈದೇಹಿ, ರಾಜಲಕ್ಷ್ಮಿ ಎನ್.ರಾವ್. ವಿಜಯಾ ದಬ್ಬೆ, ಗೀತಾ ನಾಗಭೂಷಣ, ಸಾರಾ ಅಬೂಬಕರ್, ನಾಗವೇಣಿ, ನೇಮಿಚಂದ್ರ, ಬಾನು ಮುಷ್ತಾಕ್, ಭಾಗೀರಥಿ ಹೆಗಡೆ... ಹೀಗೆ ಹೆಸರು ಹೇಳ್ತಾನೇ ಹೋಗಬಹುದು... ಮಹಿಳಾ ಸಾಹಿತಿಗಳೇ ಇಲ್ಲ ಅಂತಾ ಹೇಳ್ತಾರೆ... ನೋಡಿ ಎಷ್ಟೊಂದು ಜನ ಇದ್ದಾರೆ... ಜನಪ್ರಿಯ ಲೇಖಕಿಯರು ತಮಗೇನು ಅನಿಸತ್ತೆ ಅದನ್ನ ಅನಾವರಣ ಮಾಡೋ ಧೈರ್ಯ ಮಾಡಿದ್ದಿದ್ರೆ ಎಂಥ ದೊಡ್ಡ ಬರವಣಿಗೆ ಸಿಕ್ತಿತ್ತು! ಅವರು ತಮ್ಮ ನಿಜವಾದ ಒಳತೋಟಿಯನ್ನ ತೆರೆದಿಡ್ಲಿಲ್ಲ. ಅವರಿಗೆ ಸ್ವಲ್ಪ ಮಾರ್ಗದರ್ಶನ ಸಿಕ್ಕಿದ್ರೆ ಚಿತ್ರ ಬೇರೇನೇ ಇರ್ತಿತ್ತು...

**ಸಬಿತಾ:** ಮಹಿಳೆಯರು ಹಾಗೆ ಬರೆಯೋ ವಾತಾವರಣವೇ ಸೃಷ್ಟಿಯಾಗ್ಲಿಲ್ಲ ಅಂತ ನಾನು ಹೇಳ್ತೀನಿ. ಲೇಖಕ, ವಿಮರ್ಶಕರ ವಲಯ ಲೇಖಕಿಯರನ್ನ ತಮ್ಮೊಟ್ಟಿಗೆ ಸೇರಿಸಿಕೊಳ್ಳಬೇಕಾಗಿತ್ತು. ಆದರೆ ಅವರು ಅದು ತಮ್ಮ ಜವಾಬ್ದಾರಿಯೇ ಅಲ್ಲ, ಮಹಿಳೆಯರು

ಬರೆಯೋ ಅವಶ್ಯಕತೆಯೇ ಇಲ್ಲ ಅನ್ನೋ ನಿರ್ಧಾರಕ್ಕೆ ಬಂದ್ಬಿಟ್ಟಿದ್ದರು. ತಿರುಮಲಾಂಬ ಮಾಸ್ತಿ ನಡುವೆ ನಡೆದ ವಾದ ವಿವಾದದಲ್ಲೇ ನಾವದನ್ನು ಗುರುತಿಸಬಹುದು. ಅಲ್ಲಿ ಸರಿ ತಪ್ಪು ಪ್ರಶ್ನೆ ಬರೋದಿಲ್ಲ. ಆದರೆ ಮಹಿಳೆಯರು ಯಾಕೆ ಬರೀಬೇಕು? ನಾವಿದ್ದೀವಲ್ಲ ಬರೆಯೋದಕ್ಕೆ. ಅವರ ಕೆಲಸ ಅವರು ಮಾಡ್ಕಂಡು ಹೋದ್ರೆ ಸಾಕು ಅನ್ನೋ ಒಂದು ರೀತಿಯ ಯಜಮಾನಿಕೆಯ ಧೋರಣೆ ಆ ಕಾಲದಲ್ಲಿತ್ತು. ಅದು ನಮ್ಮ ಲೇಖಕಿಯರ ಮೇಲೆ ಗಾಢ ಪ್ರಭಾವ ಬೀರಿದೆ. ಕೊಡಗಿನ ಗೌರಮ್ಮ ಇದರಿಂದ ತಪ್ಪಿಸ್ಕಂಡಿದ್ದರು. ಆದರೆ ದುರದೃಷ್ಟವಶಾತ್ ಅವರು ಬಹಳ ಚಿಕ್ಕ ವಯಸ್ಸಿನಲ್ಲೆ ತೀರ್ಕಂಡ್ರು. ಅವರ ಎಲ್ಲ ಕಥೆಗಳನ್ನ ಒಂದೆ ಸಂಕಲನ ಮಾಡಿ ಒಟ್ಟು ಸೇರಿಸಿ ನೋಡಿದಾಗಲೂ ಗೌರಮ್ಮ ಆ ಕಾಲದ ಎಲ್ಲ ವಿಚಾರಗಳ ಬಗ್ಗೆ ನೇರವಾಗಿ, ಭಿಡೆ ಇಲ್ಲದೆ ಬರೆದಿದ್ದಾರೆ. ಶ್ರೇಷ್ಠ ಕತೆಗಳನ್ನು ಕೊಡುವ ಎಲ್ಲ ಸಾಧ್ಯತೆಗಳು ಆ ಕತೆಗಳಲ್ಲಿ ಗೋಚರಿಸುತ್ತವೆ. ಕೆಲವಂತೂ ಒಳ್ಳೆ ಕತೆಗಳೆ ಇವೆ.

**ಸವಿತಾ:** ತ್ರಿವೇಣಿಯವರು ಸಹ ಜನಪ್ರಿಯತೆ ಮತ್ತು ಗಂಭೀರತೆ ಎರಡನ್ನೂ ಹದವಾಗಿ ಬೆರೆಸಿ ತುಂಬಾ ಲವಲವಿಕೆಯಿಂದ ಮಹಿಳೆಯ ಮೂಲಭೂತ ಪ್ರಶ್ನೆಗಳನ್ನೆತ್ತಿಕೊಂಡು ಬರೆದ ಲೇಖಕಿ. ಅವರು ಸಹ ಅಕಾಲ ಮರಣಕ್ಕೀಡಾಗಿದ್ದು, ಮಹಿಳಾ ಸಾಹಿತ್ಯದ ಹರಿವಿನ ನಿಲುಗಡೆಗೆ ಎಲ್ಲೋ ಕಾರಣವಾಯ್ತು ಅಂತ ಅನ್ಕೊಂಡಿದೀನಿ. ಅನುಪಮಾ ನಿರಂಜನ ಅವರು ಹಲವು ಕಾದಂಬರಿಗಳನ್ನು ಬರೆದರು ಹಾಗೂ ಸ್ವತಃ ವೈದ್ಯೆಯಾಗಿದ್ದ ಅವರು ಬಹಳ ಒಳ್ಳೆಯ ವೈದ್ಯಕೀಯ ಸಾಹಿತ್ಯವನ್ನು ರಚಿಸಿದ್ದಾರೆ. ಅದನ್ನು ಸಹ ನಾವು ಸೃಜನಶೀಲ ಸಾಹಿತ್ಯದ ಭಾಗ ಅಂತ್ಲೇ ಪರಿಗಣಿಸಬೇಕು.

**ಸಬಿತಾ:** ನಾವು ಇವತ್ತು ಅನುಪಮಾ ನಿರಂಜನ ಅಂದ ಕೂಡ್ಲೆ ಎರಡನೆಯ ಹಂತದಲ್ಲಿ ಬಹಳ ಒಳ್ಳೆಯ ಕಥೆ ಬರೆದ್ರು, ಮೊದಲ ಹಂತದ ಕಥೆಗಳು ಜಾಳಾಗಿವೆ ಅಂತ ಚರ್ಚೆ ಮಾಡ್ತೀವಿ...

**ಸವಿತಾ:** ಅನುಪಮಾ ಅವರು ಹೆಣ್ಣುಮಕ್ಕಳ ಸಮಸ್ಯೆಗಳ ಬಗ್ಗೆ ಬರೆದ ವೈದ್ಯಕೀಯ ಲೇಖನಗಳಿವೆಯಲ್ಲ ಅವು ಸಹ ಕಥೆ ಕಾದಂಬರಿಗಳಂತೆ ನಿರೂಪಣೆ ಆಗಿವೆ. ಕನ್ನಡ ಮಹಿಳಾ ಸಾಹಿತ್ಯಕ್ಕೆ ಅದೊಂದು ದೊಡ್ಡ ಶಿಫ್ಟ್, ಬಹಳ ದೊಡ್ಡ ಕಾಂಟ್ರಿಬ್ಯೂಷನ್ ಅಂತ ನಾನು ಹೇಳ್ತೀನಿ.

**ಸಬಿತಾ:** ಮತ್ತು ಅವರು ಮಕ್ಕಳಿಗಾಗಿ ಬರೆದ ದಿನಕ್ಕೊಂದು ಕಥೆ ಬಹಳ ಮಹತ್ವ ಪಡೆದಿದೆ. ಇವತ್ತಿನ ದಿನಗಳಲ್ಲಿ ಮಕ್ಕಳಿಗಾಗಿ ಕಾರ್ಟೂನ್ ಮತ್ತೊಂದು ಇರಬಹುದು. ಆದರೆ ಆ ಕಾಲದಲ್ಲಿ ಕಥೆಗಳ ಮೂಲಕ ಮಕ್ಕಳನ್ನ ತಲುಪೋ ಪ್ರಯತ್ನ ಇತ್ತಲ್ಲ ಅದನ್ನು ಸಹ ನಾವು ಗುರುತಿಸಬೇಕು.

**ಸವಿತಾ:** ಈ ಹೊತ್ತಿನಲ್ಲಿ ಮಹಿಳೆಯರಿಗೆ ಎಷ್ಟು ಆರ್ಥಿಕ, ಧಾರ್ಮಿಕ, ರಾಜಕೀಯ ಸ್ವಾತಂತ್ರ್ಯ ಇದೆಯೋ ಅಷ್ಟರ ಮಟ್ಟಿಗೆ ಅವರ ಬರವಣಿಗೆ ಇದೆ. ನಮ್ಮಲ್ಲಿ ಪುರುಷರಷ್ಟೇ

ಮಹಿಳೆಯರು ಇದ್ದರೂ ಅದರಲ್ಲಿ ಕಾಲುಭಾಗ ಅಷ್ಟೆ ವಿದ್ಯಾವಂತರಿರೋದು. ಆ ಕಾಲುಭಾಗದಲ್ಲಿ ಸಹ ಎಷ್ಟು ಜನ ಬರೆಯೋರಿದ್ದಾರೆ ಅಂತ ಗೊತ್ತಿಲ್ಲ. ಇವತ್ತಿನ ಸಂದರ್ಭದಲ್ಲೂ ಹಲವು ಎಳೆಯ ಹುಡುಗಿಯರು ಚೆನ್ನಾಗಿ ಬರೀತಾ ಇದ್ದಾರೆ. ಆದರೆ ಬರವಣಿಗೆಗೆ ಹತ್ತು ಹದಿನೈದು ವರ್ಷಗಳ ಅಕ್ಷರ ಸಾಂಗತ್ಯ ಬೇಕೇ ಬೇಕು. ಈ ಚರ್ಚೆಗಾಗಿ ನೋಡ್ತಾ ಇದ್ದಾಗ, ನನಗ ಅನ್ನಿಸಿದ್ದು ವೈದೇಹಿ, ವೀಣಾ ಎಲ್ಲ ಎಷ್ಟು ಚೆನ್ನಾಗಿ ಬರೆದಿದ್ದಾರೆ. ಮುಸ್ಲಿಂ ಸಂವೇದನೆ ಅನ್ನೋದನ್ನ ಹೊರತುಪಡಿಸಿ ನೋಡಿದಾಗ್ಯೂ ಸುತ್ತಮುತ್ತಲ ಬದುಕನ್ನು ಸಾರಾ ಅವರು ಬಹಳ ಶಕ್ತವಾಗಿ ಪರಿಶೀಲನೆಗೆ ಒಡ್ಡಿದ್ದಾರೆ ಮತ್ತು ವಿಜ್ಞಾನಿಯಾಗಿ ನೇಮಿಚಂದ್ರ ತಮ್ಮ ಅನುಭವವನ್ನು ಚೆನ್ನಾಗಿ ಹಿಡಿದಿಟ್ಟಿದ್ದಾರೆ. ಕೃಷಿ ಕುಟುಂಬದ ಹಿನ್ನೆಲೆಯಲ್ಲಿ ಭಾಗೀರಥಿ ಹೆಗಡೆ ಇತ್ತೀಚೆಗೆ 'ಹೊಳೆಯ ಹಾದಿ' ಅನ್ನುವ ಹೊಸ ಕಾದಂಬರಿಯನ್ನು ಬರೆದಿದ್ದಾರೆ. ಅವರು ತಮ್ಮ ಇಡೀ ಜೀವನಾನುಭವವನ್ನೇ ಆ ಕಾದಂಬರಿಯಲ್ಲಿ ತಂದಿದ್ದಾರೆ. ಅಂತಹದೊಂದು ಕಾದಂಬರಿಯನ್ನ ಯಾರೂ ಗಮನಿಸಿಲ್ಲ. ಜೊತೆಗೆ ಅದನ್ನ ಪ್ರಕಟಿಸ್ಲಿಕ್ಕೂ ಅವರಿಗೆ ಸಾಧ್ಯ ಆಗ್ತಾ ಇಲ್ಲ. ನಾನು 'ಸಕಾಲಿಕ'ದಲ್ಲಿ ಓದ್ಬಿಟ್ಟು ಎಷ್ಟು ಅದ್ಭುತವಾಗಿದೆ ಅಂದುಕೊಂಡೆ. ಈ ರೀತಿ ನಮ್ಮ ಎಷ್ಟೋ ಬರಹಗಳು ಯಾರ ಗಮನಕ್ಕೂ ಬಾರದೆ ಹೋಗುತ್ತವೆ.

**ಸಬಿತಾ:** ಈಗಾಗ್ಲೇ ಸಾಹಿತ್ಯಕ್ಷೇತ್ರದಲ್ಲಿ ಮಹಿಳೆಯರು ಯಾವುದೇ ರೀತಿಯಲ್ಲೂ ನಾವು ಕಡಿಮೆಯಲ್ಲ ಅನ್ನೋದನ್ನ ಸಾಧಿಸಿ ತೋರಿಸಿದ್ದಾರೆ. ಬುರ್ರಕಥಾ ಈರಮ್ಮ ಇರಬಹುದು, ಮೂಕಜ್ಜಿ ಇರಬಹುದು, ಅಥವಾ ಸಿರಿಕಥೆಯನ್ನ ಹೆಣೆದವರು ಇರಬಹುದು. ಇವುಗಳೆಲ್ಲ ಮೂಲತಃ ಹೆಣ್ಣುಮಕ್ಕಳೇ ಹೆಣೆದ ಕಥನಗಳು. ಮತ್ತೊಂದು ಅಂಶ ನಾನು ಹೇಳಲಿಕ್ಕೆ ಹೊರಟಿರೋದು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಆಗಾಗ ಬದಲಾದ ಪಂಥಗಳೇನಿವೆ ನವೋದಯ, ನವ್ಯ, ಬಂಡಾಯ, ಪ್ರಗತಿಶೀಲ ಇತ್ಯಾದಿ ಇವುಗಳೊಂದಿಗೆ ನಮ್ಮ ಹೆಣ್ಣುಮಕ್ಕಳು ಗುರುತಿಸಿಕೊಳ್ಳದೆ ಅನುಭವನಿಷ್ಠವಾಗಿ ಬರೆಯೋ ಕಡೆಗೆ ಹೆಚ್ಚಿನ ಗಮನ ಹರಿಸಿದ್ರು. ಈ ಪಂಥಗಳಿಗೂ ನಮ್ಮ ಮಹಿಳಾ ಸಾಹಿತ್ಯಕ್ಕೂ ಎಲ್ಲೂ ಸಂಬಂಧ ಇಲ್ಲ. ಬಂಡಾಯ ಚಳವಳಿ ಪ್ರಾರಂಭವಾದ್ಮೇಲೆ ಮಹಿಳಾ ಸಾಹಿತ್ಯ ಹಾಗಾಯ್ತು... ಹೀಗಾಯ್ತು... ಅಂತ ಹೇಳ್ತಾರೆ. ಆದರೆ ನಮ್ಮ ಲೇಖಕಿಯರನ್ನ ಪ್ರಧಾನಧಾರೆಗೆ ತರುವಲ್ಲಿ ಬಂಡಾಯ ಚಳವಳಿ ಸಂಪೂರ್ಣ ವಿಫಲವಾಗಿದೆ. ಇಡೀ ಆಧುನಿಕ ಕನ್ನಡ ಸಾಹಿತ್ಯದ ಎಲ್ಲ ಸಂದರ್ಭದಲ್ಲೂ ಹೆಣ್ಮಕ್ಕಳನ್ನು ಸೈಡ್ ಲೈನ್ ಮಾಡಲಾಗಿದೆ. ಎಲ್ಲ ಹಂತಗಳಲ್ಲೂ ಯಾವ ತರ ಬರೀಬೇಕು. ಹ್ಯಾಗಿದ್ರೆ ಸರಿ ಅಂತೆಲ್ಲ ಪುರುಷರೇ ನಿರ್ಣಯಿಸೋದು. ಯಾವಾಗ ಇವರ ಚಿಂತನೆಗಳಿಗೆ ಪೂರಕವಾಗಿರದ ಕೃತಿ ರಚನೆಯಾಗತ್ತೋ ಅದನ್ನ ಗುರುತಿಸೋದಕ್ಕೆ ಹೋಗ್ಲಿಲ್ಲ ಆದರೆ ಕೆಲವೊಮ್ಮೆ ಸಾಮಾನ್ಯ ಕೃತಿಯಾಗಿದ್ದರೂ ನಿರ್ದಿಷ್ಟ ಪಂಥದ ಚಿಂತನೆಗಳಿಗೆ ಹೊಂದಿಕೊಳ್ತದೆ ಅಂತಾದ್ರೆ ಅದನ್ನ ಆಯಾ ಪಂಥದವರು ಶ್ರೇಷ್ಠ ಕೃತಿ ಅಂತ ಬಿಂಬಿಸೋಕೆ ಹೊರಟ್ರು. ಆದರೆ ಈ ಇಪ್ಪತ್ತು ವರ್ಷಗಳಲ್ಲಿ ಯಾವುದೇ ಚಳವಳಿಗಳಿಲ್ಲದ ಸ್ಥಿತಿ

ನಿರ್ಮಾಣವಾಗಿದೆ. ಈಗ ಪುರುಷರನ್ನು ಸೇರಿಸ್ಕಂಡು ಅನುಭವ ನಿಷ್ಠ ಬರವಣಿಗೆಗೆ ಮರಳ್ತಾ ಇದಾರೆ. ಜೊತೆಗೆ ಇತ್ತೀಚೆಗೆ ಬರೀತಿರೋ ಹೆಣ್ಮಕ್ಕಳಿಗೆ ಹಚ್ಚಿನ ಅವಕಾಶ ದೊರೆಯುತ್ತಿದೆ. ಅನೇಕ ಪತ್ರಿಕೆ, ಮಾಧ್ಯಮಗಳು ಇರೋದು ಅದಕ್ಕೆ ಕಾರಣ ಇರಬಹುದು.

**ಸವಿತಾ:** ೭೦ರ ದಶಕದಲ್ಲಿ ಬಹಳ ಮಹಿಳೆಯರು ಬರೆದ್ರು. ತುಂಬಾ ಚೆನ್ನಾಗಿ ಮಹಿಳೆಯರು ಬರೀತಾ ಇದ್ದಾರೆ ಅಂತಾರೆ ವಿನಃ ಯಾವುದೇ ಮಹಿಳೆಯರ ಕೃತಿಯನ್ನು ನಿರ್ದಿಷ್ಟವಾಗಿ ಹೆಸರಿಸೋ ಯೋಗ್ಯತೆ ನಮ್ಮ ಪುರುಷ ವಿಮರ್ಶಕರಲ್ಲಿಲ್ಲ. ಇಂದಿಗೂ ಸಹ ಮಹಿಳೆಯರು ಚೆನ್ನಾಗಿ ಬರೀತಿದ್ದಾರೆ ಅಂತಾರೆ ವಿನಃ ಏನು ಬರೆದಿದ್ದಾರೆ ಅನ್ನೋದನ್ನ ನೋಡ್ಲಿಕ್ಕೆ ಹೋಗೋದಿಲ್ಲ. ಒಂದ್ವೇಳೆ ಓದಿದ್ದರೆ ವೈದೇಹಿ, ವೀಣಾ, ಪ್ರತಿಭಾ, ಉಷಾ, ಭಾಗ್ಯಲಕ್ಷ್ಮಿ, ನಾಗವೇಣಿ, ಇವರೆಲ್ಲ ಎಷ್ಟು ಚೆನ್ನಾಗಿ ಬರೆದಿದ್ದಾರೆ ಅಂತ ತಿಳೀತಿತ್ತು. ನಮ್ಮ ಹೆಣ್ಣುಮಕ್ಕಳು ವಿಮರ್ಶಕಿಯರಾಗಿ ಬಂದು ಈ ನಿರ್ಲಕ್ಷ್ಯ ಧೋರಣೆಯನ್ನು ಹೋಗಲಾಡಿಸಬೇಕಾಗಿದೆ. ಮಹಿಳಾ ಸಾಹಿತ್ಯದ ಸತ್ವವನ್ನು ಶೋಧಿಸುವ ಜೊತೆಗೆ ಪುರುಷರ ಸಾಹಿತ್ಯದ ಹುಳುಕುಗಳನ್ನು ಕೂಡ ಈ ವಿಮರ್ಶಕಿಯರು ಎತ್ತಿ ತೋರಿಸಬೇಕಾಗ್ತದೆ. ಯಾಕೆಂದರೆ ಮುನ್ನುಡಿ, ಬೆನ್ನುಡಿಗಳಿಂದ ಅಲಂಕೃತವಾಗಿರುವ ದೊಡ್ಡ ಲೇಖಕರ ಕೃತಿಗಳು ನಿಜವಾಗಿ ಸತ್ವಯುತ ವಾಗಿದೆಯಾ? ಎಂಬುದನ್ನು ನೋಡಬೇಕಾಗ್ತದೆ. ನಾಗವೇಣಿಯವರ 'ಗಾಂಧಿಬಂದ' ಕೃತಿಯನ್ನು ಎಷ್ಟು ಜನ ಓದಿದಾರೆ? ಯಾರು ಪರಿಶೀಲನೆ ಮಾಡಿದಾರೆ? ದೊಡ್ಡ ಲೇಖಕರ ಬರವಣಿಗೆ ಜೊತೆಗೆ ಇದನ್ನು ಇಟ್ಟು ಯಾರು ಹೋಲಿಕೆ ಮಾಡಿದಾರೆ?

**ಸಬಿತಾ:** ಇನ್ನು ಮುಂದೆ ಬರೋ ಮಹಿಳಾ ವಿಮರ್ಶಕರಿಗಾದ್ರೂ ನಾವು ಹೇಳೋದೇನೆಂದ್ರೆ ಲೇಖಿಕರ ಜಾತಿ ಹಿನ್ನೆಲೆಯನ್ನ ನೋಡೋದಾಗಲಿ, ಪ್ರಾದೇಶಿಕ ವಿಂಗಡಣೆಯ ಹಿನ್ನೆಲೆಯಲ್ಲಿ ನೋಡೋದಾಗಲಿ ಮಾಡಬಾರದು. ಈಗ ತ್ರಿವೇಣಿ ಬರೆದಿದ್ದು ಕೇವಲ ಬ್ರಾಹ್ಮಣ ಅನುಭವ ಎಂದು ಯಾರೋ ಹೇಳಿದ ಅಣಿಮುತ್ತುಗಳನ್ನು ಉದುರಿಸದೇ ನಾವು ಆ ಅಂಶ ಬಿಟ್ಟು ಬೇರೇನಾದರೂ ನೋಡೋಕೆ ಸಾಧ್ಯವಾ ಅಂತ ಆಲೋಚಿಸಬೇಕು. ವಿಮರ್ಶೆ ಹೊಸದಾರಿ ತುಳಿಯಬೇಕಾಗಿದೆ.

**ಸವಿತಾ:** ಅನುಭವದ ಅನಾವರಣ ಆಗಿದೆಯಾ, ಕಲಾಕೃತಿ ಆಗಿದಯಾ ಇಂತಹವು ಮಾತ್ರ ಮುಖ್ಯ ಆಗಬೇಕು. ಏಕೆಂದ್ರೆ ಯಾವ ಮಹಿಳೆಗಾದ್ರೂ ಸುಖದುಃಖ ಎಲ್ಲ ಒಂದೇ. ವಾತಾವರಣ ಒಂದು ಮಾತ್ರ ಭಿನ್ನವಾಗಿರಬಹುದು ಅಷ್ಟೆ. ಆದ್ದರಿಂದ ಇಷ್ಟು ದಿನ ಪುರುಷರು ನಡೆಸಿಕೊಂಡು ಬಂದ ರಾಜಕೀಯವನ್ನ ನಾವು ಮಾಡೋಕೆ ಪ್ರಾರಂಭಿಸಿದರೆ ನಮಗೆ ಬಿಡುಗಡೆ ಇಲ್ಲ.

**ಸಬಿತಾ:** ಎಷ್ಟೋ ವಲಯದಿಂದ ನಮ್ಮಲ್ಲಿ ಬರಹಗಾರ್ತಿಯರು ಬಂದಿಲ್ಲ. ನಮ್ಮಲ್ಲಿ ದಲಿತ ಸಾಹಿತ್ಯ ಬೆಳವಣಿಗೆ ಹೊಂದಿದ್ರು ಅಲ್ಲಿ ದಲಿತ ಮಹಿಳೆಯ ಅನುಭವ ಗೈರು

ಹಾಜರಾಗಿದೆ. ಆದ್ದರಿಂದ ಎಲ್ಲ ದೃಷ್ಟಿಕೋನದಿಂದ ಹೊಸದೊಂದು ಆರೋಗ್ಯಕರ ವಾತಾವರಣವನ್ನು ನಾವು ನಿರ್ಮಿಸಿಕೊಳ್ಳಬೇಕು.

**ಸವಿತಾ:** ಕನಿಷ್ಟ ೧೦–೧೫ ವರ್ಷ ನಮಗೆ ಅಕ್ಷರದ ಸಾಂಗತ್ಯ ಇದ್ದಾಗ ಮಾತ್ರ ಬರವಣಿಗೆ ಸಾಧ್ಯವಾಗುತ್ತೆ. ನಮ್ಮಲ್ಲಿ ವಿದ್ಯಾವಂತರು ಬಹಳಷ್ಟು ಜನ ಇದ್ರೂನೂ ಸೂಕ್ತ ಹೆಣ್ಣುಮಕ್ಕಳ ಅನುಭವ ಕನ್ನಡದಲ್ಲೇ ಇನ್ನೂ ಬಂದಿಲ್ಲ... ಆದರೀಗ ಕನ್ನಡದಿಂದ ಆಂಗ್ಲ ಮಾಧ್ಯಮಕ್ಕೆ ಶಿಕ್ಷಣ ಶಿಫ್ಟ್ ಆಗ್ತಾ ಇರೋದ್ರಿಂದ ಮುಂದಿನ ದಿನಗಳಲ್ಲಿ ಮಹಿಳಾ ಸಾಹಿತ್ಯದ ಕುರಿತು ಸ್ವಲ್ಪ ಅಳುಕುಂಟಾಗ್ತಾ ಇದೆ. ಯಾಕೆಂದ್ರೆ ೧೦–೧೫ ವರ್ಷದಿಂದ ನಮ್ಮ ಹೆಣ್ಮಕ್ಕಳು ಕನ್ನಡ ಕಲಿತವರು ಸುಮಾರು ಜನ ಈಗ ಬರೆಯುತ್ತಿದ್ದಾರೆ. ೨೦–೨೫ ಜನ ಭರವಸೆಯ ಯುವ ಕವಯಿತ್ರಿಯರಿದ್ದಾರೆ. ಮಹಿಳಾ ಕಾವ್ಯದ ಬಗ್ಗೆ ನಾನು ಭರವಸೆ ಕಳೆದುಕೊಂಡಿಲ್ಲ. ಆದರೆ ಗದ್ಯ ಬರವಣಿಗೆ ಸ್ವಲ್ಪ ಶ್ರಮದಾಯಕವಾದದ್ದು. ಆದ್ದರಿಂದ ನಮ್ಮಲ್ಲಿ ಗದ್ಯ ಬರೆಯೋರು ವಿರಳವಾಗ್ತಿದಾರೆ. ಕೆಲವೇ ವರ್ಷಗಳ ಹಿಂದೆ ದಂಡಿಯಾಗಿ ಬರೀತಿದ್ದಾರೆ ಅಂತಿದ್ರು. ಆದರೆ ಈಗ ಬರೆಯೋರಿಗೆ ಗತಿ ಇಲ್ಲದ ಹಾಗೆ ಆಗಿದೆ. ಮುಂದಿನ ದಿವಸಗಳಲ್ಲಿ ಅದು ಯಾವ ರೀತಿ ಶಿಫ್ಟ್ ತಗೋಬಹುದು ಅನ್ನೋದನ್ನ ಕಾದು ನೋಡಬೇಕು.

**ಸಬಿತಾ:** ಇದು ಒಟ್ಟು ಕನ್ನಡ ಸಾಹಿತ್ಯಕ್ಕೆ ಅನ್ವಯಿಸುತ್ತೆ. ಇದನ್ನ ನಾವೀಗಲೇ ಏನು ನಿರ್ಧಾರ ಮಾಡ್ಲಿಕ್ಕಾಗಲ್ಲ. ಆದರೆ ನಾನಷ್ಟು ನಿರಾಶಾವಾದಿಯಲ್ಲ. ಯಾಕೆಂದರೆ ಇತ್ತೀಚೆಗೆ ಬೇರೆ ಬೇರೆ ಕಾರ್ಪೊರೇಟ್ ವಲಯದಿಂದ ಬರುತ್ತಿರೋ ಹುಡುಗರನ್ನು ನೋಡಿದರೆ ಸಣ್ಣ ಭರವಸೆಯಂತೂ ಇದೆ. ಇಂಥ ಸಂದರ್ಭ ಬಂದಾಗ ಅಂದರೆ ಮುಂದೆ ಬರವಣಿಗೆ ಮಾಡುವ ಹೆಣ್ಮಕ್ಕಳು ಅಲ್ಲಿ ಮತ್ತೆ ತಿಳಿದುಕೊಳ್ಳಬೇಕಾಗಿದ್ದು, ಪುರುಷ–ಮಹಿಳೆ ಎಂಬ ಭೇದವಿಲ್ಲದೆ ಎಲ್ಲ ಸಾಹಿತ್ಯವನ್ನು ಒಂದೇ ರೀತಿ ಪರಿಗಣಿಸಬೇಕು. ಸಮಗ್ರ ಸಾಹಿತ್ಯದೆಡೆಗೆ ಕುತೂಹಲ, ಅದರ ಓದು, ಅದರ ಮೂಲಕ ಹರಿದು ಬರುವ ಚಿಂತನೆಗೆ ಗಟ್ಟಿತನ ತಂದುಕೊಡುತ್ತದೆ.

**ಸವಿತಾ:** ನಮ್ಮ ಮಕ್ಕಳು ಮುಂದೆ ಇಂಗ್ಲೀಷ್‌ನಲ್ಲಿ ಬರವಣಿಗೆ ಮಾಡಬಹುದು. ಆದರೆ ನಮ್ಮ ಈ ಕನ್ನಡ ಪರಂಪರೆ ಅವರ ಬೆನ್ನಿಗಿರುತ್ತಾ ಅನ್ನೋ ಪ್ರಶ್ನೆ ಬರುತ್ತದೆ. ಮತ್ತೆ ಮುಂದಿನ ದಿನಗಳಲ್ಲಿ ಯಾವ ರೀತಿ ಬರವಣಿಗೆ ಇರಬಹುದು ಅನ್ನೋದನ್ನ ಈಗಲೇ ಊಹೆ ಮಾಡೋಕೆ ಆಗೋಲ್ಲ.

**ಸಬಿತಾ:** ಬಹಳ ಸಂದಿಗ್ಧ ಸ್ಥಿತಿಯಂತೂ ನಿರ್ಮಾಣವಾಗಿದೆ ಹಾಗೂ ಈಗ ನಾವು ಮಹಿಳಾ ಸಾಹಿತ್ಯದ ಬಗ್ಗೆ ಮಾತನಾಡುತ್ತಿರುವಾಗ ಮಹಿಳಾ ಸಾಹಿತ್ಯಕ್ಕಾದ ಅನ್ಯಾಯ ಅಥವಾ ಅದಕ್ಕೆದುರಾದ ತೊಡಕುಗಳ ಬಗ್ಗೆ ಮಾತಾಡ್ತಿದೀವಿ ಅಂದ ತಕ್ಷಣ ನಾವು ಯಾರದೋ ಪಕ್ಷವಹಿಸಿ ಮಾತಾಡ್ತಿಲ್ಲ. ಒಟ್ಟು ಸಮಗ್ರ ಸಾಹಿತ್ಯದ ವಿಷಯ ಬಂದಾಗ ನಾವದನ್ನ ಸಾಹಿತ್ಯವಾಗಿ ನೋಡುತ್ತೆವೆಯೇ ವಿನಃ ಪುರುಷ ಸಾಹಿತ್ಯ ಮಹಿಳಾ ಸಾಹಿತ್ಯ ಅನ್ನೋ ಭೇದ–ಭಾವ ಬರೋದಿಲ್ಲ. ಈ ಭೇದ ಈಗಾಗಲೇ ಮಾಡಲಾಗಿದೆ ಎಂಬ ಕಡೆಗೆ

ನಮ್ಮ ಒತ್ತಿದೆಯೇ ವಿನಃ ನಾವು ಅದನ್ನು ಮುಂದುವರೆಸಬೇಕು ಅನ್ನೋ ಪ್ರಶ್ನೆ ಇಲ್ಲಿ ಬರಲ್ಲ. ಮುಂದೆ ಬರೆಯುವವರು ಕೂಡ ಸಾಹಿತ್ಯಕ್ಕೆ ದೊಡ್ಡ ಶಕ್ತಿ ಇದೆ ಅನ್ನುವುದನ್ನು ಅರಿತುಕೊಂಡರೆ ತುಂಬ ಶಕ್ತಿಯುತವಾದ ಸಾಹಿತ್ಯ ಸೃಷ್ಟಿಯಾಗಬಹುದು.

**ಸವಿತಾ:** ನನಗೆ ಅನ್ನಿಸುವುದೇನೆಂದರೆ ಬದುಕಿನಲ್ಲಿ ಹೆಣ್ಮಕ್ಕಳಿಗೆ ಈಕ್ವಲ್ ಪ್ರಾಮಿನೆನ್ಸ್ ಇರಬೇಕು. ಅಷ್ಟೇ ಪ್ರಾಮಿನೆನ್ಸ್ ನಮ್ಮ ಬರವಣಿಗೆಗೂ ಇರಬೇಕು. ಬದುಕಿನಲ್ಲಿ ನಮಗೆ ಪ್ರಾಮಿನೆನ್ಸ್ ಇದ್ಯಾ ಅನ್ನೋದೆ ಮೊದಲ ಪ್ರಶ್ನೆ.

**ಸಬಿತಾ:** ಹೌದು, ಬದುಕಿನಲ್ಲೂ ನಮಗೆ ಪ್ರಾಮಿನೆನ್ಸ್ ಇಲ್ಲ. ಅದಕ್ಕೆ ನಮ್ಮ ಬರವಣಿಗೆಗೂ ಪ್ರಾಮಿನೆನ್ಸ್ ಇಲ್ಲ.

**ಸವಿತಾ:** ಎಲ್ಲಾ ರೀತಿಯಲ್ಲೂ ಮಹಿಳೆ ಮುಂದುವರೆದಿದ್ದಾಳೆ ಅಂತಾರೆ. ಆದರೆ ಎಲ್ಲೆಲ್ಲಿ ನಮಗೆ ಎಷ್ಟೆಷ್ಟು ಪ್ರಾಮಿನೆನ್ಸ್ ಇದೆ? ಬದುಕಿನಲ್ಲಿ ಇವತ್ತಿಗೂ ನಮ್ಮನ್ನ ಅನಾದರಣೆಯಿಂದ ಕಾಣೋ ಪ್ರವೃತ್ತಿ ಹಾಗೇ ಮುಂದುವರೆದಿದೆ. ನಮ್ಮ ಬರವಣಿಗೆ ಬಗ್ಗೇನೂ ಅದೇ ಪ್ರವೃತ್ತಿ ಇದೆ. ಒಟ್ಟಾರೆಯಾಗಿ ಮಹಿಳೆಯ ವ್ಯಕ್ತಿತ್ವಕ್ಕೆ ಎಲ್ಲಿ ತನಕ ಬೆಲೆ ಸಿಗೋದಿಲ್ವೊ ಅಲ್ಲಿ ತನಕ ನಮ್ಮ ಬರವಣಿಗೆಗೂ ಸಿಗಲ್ಲ. ನಾವು ಏನು ಮಾಡಿದ್ರು ಅಷ್ಟೆ. ಹಾಗಾಗಿ ಎಷ್ಟು ಭರವಸೆ ತಾಳಬೇಕು ಅನ್ನೋದು ಸಂದಿಗ್ಧದ ಪ್ರಶ್ನೇನೆ ಆಗಿದೆ. ಆದರೂ ನಾನು ಆಶಾವಾದಿ ಆಗಿದ್ದೇನೆ. ಏಕೆಂದರೆ ಇಷ್ಟೆಲ್ಲ ತಾರತಮ್ಯದ ನಡುವೇನು ನಮ್ಮ ಬರಹಗಾರ್ತಿಯರು ಚೈತನ್ಯ ಕಳ್ಕಂಡಿಲ್ಲ. ಲೇಖಕಿಯರು ತಮ್ಮದೇ ಆದ ನುಡಿಗಟ್ಟು, ಈಡಿಯಮ್‌ನ ಹುಡುಕಾಟದಲ್ಲಿದ್ದಾರೆ. ನಾವು ಎಷ್ಟು ಕಷ್ಟದಲ್ಲಿ ಬರೀತಾ ಇದ್ದೀವಿ ಅನ್ನೋದು ಹೊರ ಜಗತ್ತಿಗೆ ಗೊತ್ತಿಲ್ಲ. ನಮಗ್ಯಾರು ಬೆಂಬಲ ಕೊಡ್ತಾರೆ? ನಮಗೆಲ್ಲಿ ಸ್ಪೇಸ್ ಇದೆ? ನಮ್ಮ ತಾಯಿ ಒಂದು ಮಾತು ಹೇಳ್ತಾ ಇದ್ರು 'ನಾನು ಸಾಯ್ತಾ ಇದೀನಿ ಅಂದ್ರೆ ಹೆಪ್ಪು ಹಾಕ್ಬಿಟ್ಟು ಸಾಯಿ' ಅಂತ ಹೇಳ್ತಾರೆ ಅಂತ... ಆ ಸ್ಥಿತಿ ಇವತ್ತಿಗೂ ಇದೆ. ೪೦ ವರ್ಷದ ಬದುಕಿನಲ್ಲಿ ಹಲವಾರು ಕುಟುಂಬಗಳನ್ನ ನೋಡಿದೀನಿ. ಎಲ್ಲಾ ಕಡೆ ಇದೇ ಸ್ಥಿತಿ ಇದೆ. ಯಾಕೆ ನಾವು ಬೆಳೆಯಲ್ಲ ಅಂದ್ರೆ ಇದನ್ನೆಲ್ಲವನ್ನು ಮೀರಬೇಕಾಗಿದೆ. ನನ್ನ ವ್ಯಕ್ತಿತ್ವ ಬೇರೆ ಇದೆ. ನಾನು ಮಹತ್ವಾಕಾಂಕ್ಷಿ ಆಗಿರೋದು ಸರಿ ಅಂತ ಹೇಳೋಕೆ ಸಹ ನಮ್ಗೆ ಸಾಧ್ಯ ಆಗ್ತಾ ಇಲ್ಲ. ಯಾಕೆ ನಮ್ಗೆ ಮಹತ್ವಾಕಾಂಕ್ಷೆ ಇರಬಾರದು? ಯಾಕೆ ನಮ್ಮದೆ ಸ್ಪೇಸ್‌ನ್ನು ನಾವು ಕ್ರಿಯೇಟ್ ಮಾಡ್ಕೋಬಾರದು? ಯಾಕೆ ನಾವು ಬೇರೆಯವರಿಗೆ ಸೊಪ್ಪು ಹಾಕಬೇಕು? ಎಲ್ಲಿ ತನಕ ನಮ್ಮದೇ ಸ್ಪೇಸ್ ನಿರ್ಮಾಣ ಮಾಡಿಕೊಳ್ಳೋಕೆ ನಾವು ಹೊರಡಲ್ವೋ ಅಲ್ಲಿ ತನಕ ನಮ್ಮದೇ ಆದ, ದೊಡ್ಡ ಆಲೋಚನೆ, ನಮ್ಮದೇ ಆಲೋಚನೆ ಸಾಧ್ಯವಾಗಲ್ಲ... ಎಲ್ಲ ದೊಡ್ಡ ಬರವಣಿಗೆಯ ಹಿಂದೆ ದೊಡ್ಡ ಆಲೋಚನೆ ಇದೆ ಅನ್ನೋದನ್ನ ನಾವು ಮರೆಯಬಾರದು.

**ಧ್ವನಿ ಮುದ್ರಣದಿಂದ ಬರಹಕ್ಕೆ: ಅಕ್ಷತಾ ಕೆ.**

('ಉಳುಮೆ', ೨೦೦೭ರ ವಿಶೇಷಾಂಕ)

●

# ಸ್ತ್ರೀವಾದ, ಮಹಿಳಾ ಚಳುವಳಿ: ಒಂದು ಪ್ರಶ್ನೋತ್ತರ

**೧: ಮಹಿಳಾ ಚಳವಳಿಯ ಜೊತೆಗೆ ನಿಮ್ಮ ಸಂಬಂಧವನ್ನು ನೀವು ಹೇಗೆ ಗುರುತಿಸಿಕೊಳ್ಳುತ್ತೀರಿ?**

ಉ: ಸಾನಿಯಾ ಮಿರ್ಜಾ ಟೆನ್ನಿಸ್ ಪಂದ್ಯಾವಳಿ ಗೆದ್ದರೆ ನನ್ನಲ್ಲಿ ಪುಳಕ ಉಂಟಾಗುತ್ತೆ. ಆರುಂಧತಿ ರಾಯ್‌ಗೆ ಬಹುಮಾನ ಬಂದರೆ ಹೆಮ್ಮೆ ಆಗುತ್ತೆ. ಸೂಕಿ ಗೃಹಬಂಧನದಲ್ಲಿ ಇದ್ದಾಳಲ್ಲಾ ಅಂತ ದುಃಖ ಆಗುತ್ತೆ. ಮೇಧಾಪಾಟ್ಕರ್ ಉಪವಾಸ ಸತ್ಯಾಗ್ರಹ ಮಾಡ್ದಾಗ ನನ್ನಲ್ಲಿ ಕಳವಳ ಉಂಟಾಗ್ತದೆ.

ಹೀಗೆ ಮಹಿಳಾ ಚಳವಳಿ ಜೊತೇನೂ ಒಂಥರಾ ಭಾವನಾತ್ಮಕ ಸಂಬಂಧ...

**೨: ಈ ಚಳವಳಿಯು ಪರಿಣಾಮಕಾರಿಯಾಗಿದೆ ಹಾಗೂ ನೀವೂ ಸೇರಿದಂತೆ ಮಹಿಳೆಯರು ಫಲಭಾಗಿಗಳಾಗಿದ್ದಾರೆ ಎಂದು ಅನ್ನಿಸುತ್ತದೆಯೆ?**

ಉ: ಜ್ಯೋತಿಬಾ ಫುಲೆಯ ಹೆಂಡತಿ ನಾಕು ಅಕ್ಷರ ಕಲಿಯೋಕೆ ಶಾಲೆಗೆ ಹೋಗುವಾಗ ಕಲ್ಲೇಟು ತಿನ್ನಬೇಕಾಯಿತಂತೆ! ಸಗಣಿ ಉಂಡೆಗಳಿಂದ ಅವಳ ಬಿಳಿ ಸೀರೆಯನ್ನ ಸಂಪ್ರದಾಯ ವಾದಿಗಳು ಮಲಿನಗೊಳಿಸ್ತಾ ಇದ್ದರಂತೆ! ಕಾಲ ಇಂದು ಎಷ್ಟು ಬದಲಾಗಿದೆ... ಸುಮ್ಮನೆ ಆಗಿದೆಯೇ? ಎಷ್ಟು ಜನ ಹೆಣ್ಣುಮಕ್ಕಳ ಆಶೆ–ಕನಸಿನ ಫಲ! ಜಗತ್ತಿನ ಯಾವ ಯಾವ ಮೂಲೆಯಲ್ಲಿ ಯಾರ್‍ಯಾರು ಕನಸಿನ ಬೀಜ ನೆಟ್ಟರೋ... ಯಾರು ನೀರು ಗೊಬ್ಬರ ಹಾಕಿ ಬೆಳೆಸಿದರೋ... ನಾವಂತೂ ಈಗ ಅದರ ಫಲ ಉಣ್ಣುತ್ತಾ ಇದ್ದೇವೆ... ಒಂದಷ್ಟು ಕೃತಜ್ಞತೆ... ಧನ್ಯತೆ...

**೩: ೭೦–೮೦ರ ದಶಕಗಳಲ್ಲಿ ಮಹಿಳಾ ಚಳವಳಿಗಾರರಲ್ಲಿ ಇದ್ದ ಉಮೇದು, ಹೋರಾಟದ ಉತ್ಸಾಹಗಳು ಇಂದು ಕಾಣದೆ ಇರುವುದಕ್ಕೆ ನಿಮ್ಮ ಕಾರಣಗಳೇನು?**

ಕಷ್ಟ–ನಷ್ಟ ಹಂಚಿಕೊಂಡ್ವಿ... ಸ್ವಲ್ಪ ಸುಖ ಬಂತು... ಮೈ ಮರೆತಿದ್ದೇವೆ... ಅಷ್ಟೇ...

**೪: ೨೫ ವರ್ಷಗಳ ಹಿಂದೆ ಮಹಿಳೆಯರು ಎದುರಿಸುತ್ತಿದ್ದ ಸಮಸ್ಯೆಗಳು ಅವರನ್ನು ಸಂಘಟಿತರಾಗಿ ಹೋರಾಡಲು ಪ್ರೇರಿಸಿದ್ದವು. ಅವರ ಹೋರಾಟದ ಯತ್ನಗಳಿಂದಾಗಿಯೂ, ಸರ್ಕಾರವು ಅವರ ಕಾರ್ಯಕ್ರಮಗಳನ್ನು Co-opt ಮಾಡಿಕೊಂಡಿದ್ದರಿಂದಲೂ ಮಹಿಳೆಯರ ಕೆಲವಾದರೂ ನಿರೀಕ್ಷೆಗಳು ಈಡೇರಿರುವುದನ್ನು ಕಾಣುತ್ತೇವೆ. ಈಗ**

**ಹೀಗೆ ಬದಲಾದ/ಬೆಳೆದ/ ಭಿನ್ನ ಜಾಗಗಳಲ್ಲಿರುವ ಮಹಿಳೆಯರು ಎದುರಿಸಬೇಕಾಗಿರುವ ಸಮಸ್ಯೆಗಳೂ ಭಿನ್ನವಾಗಿವೆ. ಈ ಹೊಸ ಸಮಸ್ಯೆಗಳನ್ನು ಎದುರಿಸಲು ಅಗತ್ಯವಿರುವ ಹೋರಾಟ ತಂತ್ರ ಯಾವ ರೀತಿಯದಾಗಿರಬೇಕು?**

ಉ: ಎಲ್ಲರ ಪರವಾಗಿ ಎಲ್ಲ ಮಹಿಳೆಯರು ಸದಾ ಹೋರಾಡಬೇಕಾದ ಅಗತ್ಯ ಇಲ್ಲ ಅನಿಸುತ್ತ. ನಮ್ಮ ನಮ್ಮ ಶಿಲುಬೆಯನ್ನು ನಾವೇ ಹೊರಬೇಕು... ಈಗ ಬದಲಾದ ಕಾಲದಲ್ಲಿ ಭಿನ್ನ ಸಮಸ್ಯೆಗಳಿಗೆ ಈಡಾದ ಮಹಿಳೆಯರು ಅವರವರ ಪರಿಮಿತಿಗಳಲ್ಲಿ ಹೋರಾಟ ನಡೆಸಲಿ. ಮಿಕ್ಕವರು ಬೆಂಬಲಿಸಲಿ... ಕೂಗುವವರು ಸಿಕ್ತಾರಂತ ಗೊತ್ತಾದರೆ ಕೆಲವರು ಬಾಯ್ದೇ ಬಿಡೋಲ್ಲ... ಅನ್ಯಾಯವನ್ನು ಪ್ರತಿಭಟಿಸುವ, ಎದುರಿಸುವ ಶಕ್ತಿಯನ್ನು ಎಲ್ಲರೂ ಗಳಿಸಿಕೊಳ್ಳಬೇಕು... ಯಾರೂ ವಿನಾಯಿತಿ ಕೇಳಬಾರದು...

**೫: ತೀವ್ರವಾಗಿ ಕೋಮುವಾದವು ಸಮಾಜವನ್ನು ಆವರಿಸುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ಮಹಿಳಾ ಚಳವಳಿಗೆ ಎದುರಾಗಿರುವ ಸವಾಲುಗಳೇನು?**

ಉ: ಎಲ್ಲವೂ ಒಡೆದು ಚೂರಾಗಿದೆ. ಕೋಮುವಾದ – ಜಾತಿವಾದ ಅಕ್ಕ – ತಂಗಿ ಇದ್ದ ಹಾಗೆ... ಯಾರು ಜಾತಿವಾದಿಯಾಗ್ತಾರೋ ಅವರು ನಿಸ್ಸಂಶಯವಾಗಿ ಕೋಮುವಾದಿಯಾಗಿ ಬೇಗ ಪರಿವರ್ತಿತರಾಗ್ತಾರೆ... ತುಂಬ ಪ್ರಗತಿಪರರು ಅಂತ ಹೇಳಿಕೊಳ್ಳುವ ಅನೇಕರು ಪಕ್ಕಾ ಜಾತಿವಾದಿಗಳಾಗಿ ಮಾರ್ಪಾಡು ಹೊಂದಿರೋದನ್ನ ನಾವು ನೋಡ್ತಾ ಇದೀವಿ. ತಾವು ಜಾತಿವಾದಿಗಳಾಗಿ ಹಾಳು ಮಾಡಿದ್ದು ಸಾಲದು ಅಂತ ಈಗ ಮಹಿಳೆಯರಲ್ಲಿ ಕೂಡ ಆ ವಿಷ ಬೀಜ ಬಿತ್ತುತ್ತಾ ಇದ್ದಾರೆ... ಮೇಲ್ಜಾತಿಯೋ, ಕೆಳಜಾತಿಯೋ... ಸ್ವಧರ್ಮಿಯೋ, ಅನ್ಯಧರ್ಮಿಯೋ... ನಾನೇ ಮೊದಲು ಉಣ್ಣಬೇಕು ಅನ್ನೋ ಸ್ವಾರ್ಥ ಬಿಡಬೇಕು... ಫಲ ಒಂದಲ್ಲ ಒಂದು ದಿನ ಸಿಕ್ಕೇ ಸಿಗುತ್ತೆ... ನನ್ನ ಸರದೀನೂ ಬಂದೇ ಬರುತ್ತೆ ಅಂತ ತಿಳಿಯೋ ವಿವೇಕ ಬೇಕು. ಆದರೆ ಏನು ಮಾಡೋದು, ನೀನು ಮೊದಲು ಉಣ್ಣು ಅಂತ ಹೇಳೋ ದೊಡ್ಡತನ ಯಾರಲ್ಲೂ ಉಳಿದಿಲ್ಲ. ಅದಕ್ಕೇ ನ್ಯಾಯಯುತವಾಗಿ ಯಾರಿಗೆ ಏನು ಸಿಗಬೇಕೋ ಅದು ಸಿಗ್ತಾ ಇಲ್ಲ.

**೬: ಜಾಗತೀಕರಣದಿಂದಾಗಿ ಮಹಿಳೆಯರು ಎದುರಿಸಬೇಕಾಗಿ ಬಂದಿರುವ ಆರ್ಥಿಕ/ ಸಾಮಾಜಿಕ/ ಧಾರ್ಮಿಕ/ ರಾಜಕೀಯ ಸಮಸ್ಯೆಗಳು/ ಸವಾಲುಗಳನ್ನು ಕುರಿತಂತೆ ನಿಮ್ಮ ವಿಶ್ಲೇಷಣೆ?**

ಉ: ಹಣ ಇಡೀ ಜಗತ್ತನ್ನ ತನ್ನ ತೆಕ್ಕೆಗೆ ತೆಗೆದುಕೊಳ್ತಾ ಇದೆ. ಕ್ಷಣ ಕ್ಷಣಕ್ಕೂ ಜಗತ್ತು ವಿಷಮತೆಯತ್ತ ಸಾಗ್ತಾ ಇದೆ... ಬಣ್ಣ ಬೆಡಗು ಭಯ ಹುಟ್ಟಿಸ್ತಾ ಇದೆ... ಊಹೆಗೂ ಮೀರಿದ್ದು... ಕಷ್ಟಪಟ್ಟು ಗಳಿಸಿದ ಸ್ವಾತಂತ್ರ್ಯ ಕಳೆದುಕೊಳ್ತಾ ಇರೋದು. ಅದೊಂದನ್ನ ಕಳಕೊಂಡರೆ ಎಲ್ಲ ಕಳಕೊಂಡ ಹಾಗೇ... ಇನ್ನೂ ಪೂರ್ತಿ ಬಿಡುಗಡೆನೇ ಆಗಿಲ್ಲ... ಅಷ್ಟರೊಳಗೆ ಈ ವಿದ್ಯಮಾನ!... ಏನಂತ ವಿಶ್ಲೇಷಿಸೋಣ?

**೭: ಇಂದು ಒಂದೆಡೆ ಮಹಿಳೆಯರಲ್ಲಿ ಹೊಸ ಎಚ್ಚರ, ಸ್ವಪ್ರಜ್ಞೆಯ ಅರಿವು ಹೆಚ್ಚಾಗುತ್ತಿರುವಂತೆಯೆ ಮತ್ತೊಂದೆಡೆ ಮಹಿಳೆಯರ ಮೇಲಿನ ಕ್ರೌರ್ಯ, ಹಿಂಸೆಗಳ ಸ್ವರೂಪ ಮತ್ತು ಪ್ರಮಾಣಗಳು ಹೆಚ್ಚಾಗಿವೆಯೆನ್ನಿಸುತ್ತದೆಯೆ? ಇದರ ಕಾರಣಗಳೇನು?**

ಉ: ದುರ್ಬಲರು, ಅಸಹಾಯಕರು ಯಾವತ್ತೂ ಹಿಂಸೆ, ಕ್ರೌರ್ಯಕ್ಕೆ ಬಲಿಯಾಗ್ತಾನೇ ಇರ್ತಾರೆ... ಕೂಪ ಅದೇ... ರೂಪ ಮಾತ್ರ ಬೇರೆ... ಈ ಜಗತ್ತಿನ ಯಾವ ಕಾನೂನುಗಳೂ ನಮಗೆ ನ್ಯಾಯ ಒದಗಿಸಲಾರವು. ನಮಗೆ ಬೇಕಾಗಿರುವುದು ಸಮಾನತೆಯಲ್ಲ... ಪ್ರೀತಿ, ಗೌರವ, ಅಗ್ರಮಾನ್ಯತೆ!! ಇದು ದೊರಕಿದಾಗ ಬಹುಶಃ ಏನಾದ್ರೂ ಕೊಂಚ ಬದಲಾವಣೆ ಆಗಬಹುದು.

**೮: ಸಾಮಾಜಿಕ ಹೋರಾಟ ಮತ್ತು ಮಹಿಳೆಯ ಆತ್ಮಶೋಧನೆಯ ಫಲವಾಗಿ ಹೊಮ್ಮುವ ಅಂತಃಸತ್ವ –ಈ ಎರಡನ್ನೂ ಒಂದಾಗಿಸಿಕೊಂಡ ತಾತ್ವಿಕ ದೃಷ್ಟಿಕೋನ ಮಹಿಳಾ ಚಳವಳಿಯ ಬಲವಾದ ಆಶಯಗಳಲ್ಲಿ ಒಂದು. ಇಂಥ ದೃಷ್ಟಿಕೋನ ಮಹಿಳಾ ಚಳವಳಿಯಲ್ಲಿ ಮೂಡಿಬಂದಿದೆ ಎನ್ನುತ್ತೀರಾ?**

ಉ: High thinking ಬೇಕು. ಯಾಕೋ... ಸ್ವತಂತ್ರವಾದ, ಘನವಾದ, ಅಂತಃಸತ್ವ ಇರೋ ಆಲೋಚನೆಗಳು ಹೊಮ್ತಾ ಇಲ್ಲ. ಬಹುಶಃ ಯಾಕೇಂದ್ರೆ ನಾವು ಸ್ವತಂತ್ರವಾಗಿ, ಘನವಾಗಿ ಆಲೋಚಿಸಬಲ್ಲೆವು ಅನ್ನೋ ಆತ್ಮವಿಶ್ವಾಸ ನಮ್ಮಲ್ಲಿ ಇಲ್ಲವೇ ಇಲ್ಲ! ಶಕ್ತಿ ಇದೆ; ಆದರೆ ಅದು ಇದೆ ಅನ್ನೋ ಅರಿವು ಇಲ್ಲ.

**೯: 'ಮಹಿಳಾ ಚಳವಳಿ' ಎಂಬ ಪರಿಕಲ್ಪನೆಯೇ ಮರುನಿರ್ವಚನಗೊಳ್ಳಬೇಕಾಗಿದೆಯೆಂದು ನಿಮಗೆ ಅನ್ನಿಸುತ್ತದೆಯೇ?**

ಉ: ಪ್ರತಿ ಮನೆ ಮನೆಯಲ್ಲೂ, ಕುಟುಂಬದಲ್ಲೂ ಪ್ರತಿಭಟನೆ, ಹೋರಾಟ, ಸತ್ಯಾಗ್ರಹ ನಡೀತಾನೇ ಇರುತ್ತೆ... ಅದು ಸಾಂಕೇತಿಕವಾಗಿ, ಒಟ್ಟಂದದಲ್ಲಿ ಹೊರಗೆ ಕಾಣಿಸಿಕೊಂಡಾಗ ಮಹಿಳಾ ಚಳವಳಿಯ ಸ್ವರೂಪ ಪಡೆದುಕೊಳ್ಳುತ್ತೆ. ನಿಟ್ಟುಸಿರು ಬಿರುಗಾಳಿಯಾದಾಗ ಚಳವಳಿ ಅಂತೇವೆ ಅಷ್ಟೆ.

**೧೦: ಮಹಿಳಾತನ, ಪುರುಷತನಗಳ ಚೌಕಟ್ಟಿನ ಹೊರಗೆ ಬೆಳೆಯಬೇಕಾದ/ ಬೆಳೆದಿರುವ ನಿಮ್ಮ ಸ್ವಕ್ಷೇತ್ರದ ಅನುಭವಗಳ ಬಗ್ಗೆ ಹೇಳಬಲ್ಲಿರಾ?**

ಉ: ನಾನು ಒಬ್ಬ ಕವಿ... ಕವಿತೆಯ ಮೂಲಕ ಏನು ಮಾಡಬಹುದೋ ಅದನ್ನ ಕಳೆದ ೨೫ ವರ್ಷಗಳಿಂದ ಮಾಡ್ತಾ ಇದೇನೆ... 'ಯಾವುದೂ ಮುಖ್ಯವಲ್ಲ... ನೀರೆಲ್ಲವೂ ತೀರ್ಥ' ಅನ್ನೋ ಕುವೆಂಪು ವಾಣಿಯಲ್ಲಿ ನನಗೆ ಅಪಾರ ನಂಬಿಕೆ.

> **ಯಾರು ಅಭಿಮಾನದ ದೋಣಿ ಹತ್ತಿದರೋ**
> **ಅವರೆಲ್ಲರೂ ಮುಳುಗಿದರು...**
> **ಯಾರ ನಮ್ರವಾಗಿ ಕೆಳ ಕೆಳಗೆ ಇಳಿದರೋ**
> **ಅವರೆಲ್ಲ ಪಾರಾದರು...**

ಕಬೀರನ ಈ ದೋಹ ನನಗೆ ದಾರಿದೀಪ.

('ನಮ್ಮ ಮಾನಸ' ವಿಶೇಷಾಂಕ, ಮಾರ್ಚ್, ೨೦೦೯)

# ಒತ್ತಡವನ್ನು ಹಗುರಮಾಡಿಕೊಳ್ಳಲು ಕಾವ್ಯ

ಸವಿತಾ ನಾಗಭೂಷಣ ಎಂದರೆ ಕಾವ್ಯ ಪ್ರಿಯರ ಮನದಲ್ಲಿ ಚಿರಪರಿಚಿತ ಹೆಸರು. ಇವರ ಮೊದಲ ಕವನ ಸಂಗ್ರಹ 'ನಾ ಬರುತ್ತೇನೆ ಕೇಳು'. ೧೯೮೭ರ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿದೆ. ಹಲವಾರು ನಿಯತ ಕಾಲಿಕಗಳಲ್ಲಿ ಸವಿತಾ ಅವರ ಕವಿತೆಗಳು ಪ್ರಕಟಗೊಂಡಿವೆ. ರಾಷ್ಟ್ರೀಯ ಕವಿಗೋಷ್ಠಿಯಲ್ಲಿ ಕನ್ನಡವನ್ನು ಪ್ರತಿನಿಧಿಸಿದ್ದಾರೆ. ಸಾಹಿತ್ಯ ಅಕಾಡೆಮಿ ಹಾಗೂ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಗಳಲ್ಲಿ ಪಾಲ್ಗೊಂಡು ಕಾವ್ಯರಸಿಕರ ಮನ ಗೆದ್ದಿದ್ದಾರೆ.
ಸವಿತಾ ನಾಗಭೂಷಣರ ಎರಡನೆಯ ಕಾವ್ಯ ಸಂಗ್ರಹ 'ಚಂದ್ರನನ್ನು ಕರೆಯಿರಿ ಭೂಮಿಗೆ' ೧೯೯೧ರಲ್ಲಿ ಪ್ರಕಟವಾಯಿತು. ೧೯೯೬ರಲ್ಲಿ 'ಹೊಳೆ ಮಗಳು' ಎಂಬ ಕವನ ಸಂಕಲನ ಹೊರತಂದಿದ್ದಾರೆ. ಕನ್ನಡ ಮಹಿಳಾ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳನ್ನು 'ಮುಡಿ ಮಲ್ಲಿಗೆ' ಹೆಸರಲ್ಲಿ ಸಂಪಾದಿಸಿದ್ದಾರೆ, ಸಾಹಿತ್ಯದಲ್ಲಿ ಕ್ಲೀಷೆಯಾದ ಮೋಡ, ಹೂವು, ಮರ ಮುಂತಾದ ಸಾಮಾನ್ಯ ಶಬ್ದಗಳೂ ಕೂಡಾ ಇವರ ಕವಿತೆಗಳಲ್ಲಿ ನವಜನ್ಮ ಪಡೆದು ಹೊಸ ಅರ್ಥಲೋಕ ಕಟ್ಟಿಕೊಡುತ್ತದೆ.
ಈಚೆಗೆ ಇವರ 'ಸ್ತ್ರೀಲೋಕ' ಎನ್ನುವ ಬೃಹತ್ ಕಾದಂಬರಿಗೆ ಎಂ.ಕೆ. ಇಂದಿರಾ ಪ್ರಶಸ್ತಿ ಸಿಕ್ಕಿದೆ. ಇದು ಇವರ ಚೊಚ್ಚಲ ಕಾದಂಬರಿ. ಇಲ್ಲಿ ಸಂಭಾಷಣೆಯ ಮೂಲಕವೇ ಇಡೀ ಜೀವನದ ವಿವಿಧ ಕ್ಷಣಗಳನ್ನು ಕಟ್ಟುತ್ತಾ ಹೋಗುತ್ತಾರೆ. ಈ ಸಂತೋಷದ ಸಂದರ್ಭದಲ್ಲಿ ಅವರು ತಮ್ಮ ಅನಿಸಿಕೆಗಳನ್ನು 'ಕನ್ನಡದ ಜನ ಅಂತರಂಗ'ದ ಓದುಗರೊಂದಿಗೆ ಹಂಚಿಕೊಂಡಿದ್ದಾರೆ.

**-ಎಚ್. ಎಂ. ಶಿವಾನಂದ** (ಸಂದರ್ಶಕರು)

***ಪ್ರಶ್ನೆ:*** *ನಿಮ್ಮ ಮೊದಲ ಕಾದಂಬರಿ 'ಸ್ತ್ರೀಲೋಕ'ಕ್ಕೆ ಎಂ.ಕೆ. ಇಂದಿರಾ ಪ್ರಶಸ್ತಿ ದೊರಕಿದಾಗ ನಿಮಗೆ ಹೇಗನಿಸಿತು?*

ಈ ಪ್ರಶಸ್ತಿ ದೊರಕಿರುವುದು ನನಗೆ ಮೂರು ಕಾರಣಗಳಿಂದ ಖುಷಿ ಕೊಟ್ಟಿದೆ. ಎಂ.ಕೆ. ಇಂದಿರಾ, ಬಹಳ ಚಿಕ್ಕಂದಿನಿಂದಲೇ ನನ್ನಲ್ಲಿ ಆಸಕ್ತಿ ಹುಟ್ಟಿಸಿದ ಲೇಖಕಿ. ಮೊದಲಿನಿಂದಲೂ ನನ್ನ ಓದಿಗೆ ಒತ್ತಾಸೆ ನೀಡಿದವಳು ನನ್ನ ಅಕ್ಕ. ಆಕೆಯೇ ಎಂ.ಕೆ. ಇಂದಿರಾ ಅವರ 'ಸದಾನಂದ' ಕಾದಂಬರಿ ಕೊಟ್ಟು ಓದು ಎಂದು ಸಾಹಿತ್ಯದ ರುಚಿ ಹತ್ತಿಸಿದಳು. ಈಗ ನೆನಸಿಕೊಂಡರೆ, ಅಂದು ಆ ಕಾದಂಬರಿಯನ್ನು ಓದುವಾಗ, ಮುಂದೊಂದು ದಿವಸ ಇವರ ಹೆಸರಿನ ಪ್ರಶಸ್ತಿ ನನಗೆ ಬರುತ್ತದೆ ಎಂಬ ಕಲ್ಪನೆಯಾದರೂ ಇರಲು ಸಾಧ್ಯವಿತ್ತೆ? ಎಂದು ಆಶ್ಚರ್ಯವಾಗುತ್ತದೆ.

ಶಿವಮೊಗ್ಗದ 'ಕರ್ನಾಟಕ ಸಂಘ' ನನ್ನ ಸಾಹಿತ್ಯಿಕ ಜೀವನದಲ್ಲಿ ಬಹಳ ಪ್ರಭಾವ ಬೀರಿದೆ. ಐದನೇಯ ವರ್ಷದಲ್ಲಿ ಬರೆದ ಹೂವಿನ ಚಿತ್ರಕ್ಕೆ ಇದೇ ಸಂಘದಲ್ಲಿ ಬಹುಮಾನ ಪಡೆದದ್ದು ಇನ್ನೂ ನನಗೆ ನೆನಪಿದೆ. ಸಾಹಿತ್ಯದ ಸಮಾರಂಭಗಳು, ಚರ್ಚೆ ಗೋಷ್ಠಿಗಳು ಯಾವಾಗಲೂ ಇಲ್ಲಿ ನಡೆಯುತ್ತಿತ್ತು. ಅನೇಕ ಪ್ರಸಿದ್ಧ ಕವಿಗಳ, ಲೇಖಕರ ಭಾಷಣ ಕೇಳಿದ್ದು, ನೋಡಿದ್ದು ಇಲ್ಲಿಯೇ. ಎಷ್ಟೋ ಮಂದಿ ಕವಿಗಳ, ಸಾಹಿತಿಗಳ ಪರಿಚಯವಾದದ್ದು, ಕೂಡಾ ಇಲ್ಲಿಯೇ.

ಆದ್ದರಿಂದ ಕರ್ನಾಟಕ ಸಂಘದಿಂದ ಈ ಪ್ರಶಸ್ತಿ ಪಡೆಯುವುದು ಸಂತಸದ ಸಂಗತಿಯೇ ಆಗಿದೆ. ನನ್ನ ಜೀವನದ ಬಾಲ್ಯಕಾಲ ಶಿವಮೊಗ್ಗದಲ್ಲೇ ಕಳೆಯಿತು. ಇಲ್ಲಿನ ಗಿಡ, ಮರ, ಬಾನು ಎಲ್ಲವೂ ಮನದ ಭಿತ್ತಿಯಲ್ಲಿ ಬಾಲ್ಯದಲ್ಲೇ ಅಚ್ಚೊತ್ತಿದವು. ನನ್ನ ಕಾವ್ಯ ಹಾಗೂ ಕಾದಂಬರಿಯ ಮೂಲಸ್ರೋತ ಶಿವಮೊಗ್ಗದ ಪರಿಸರವೇ ಆಗಿದೆ. ಇಲ್ಲಿನ ಬಾಹ್ಯ ಪರಿಸರ ನನ್ನ ಕಾವ್ಯದಲ್ಲಿ ಅಭಿವ್ಯಕ್ತಗೊಂಡಿದ್ದರೆ, ಶಿವಮೊಗ್ಗದ ಜನ ಜೀವನದ ಅಂತಃಸ್ಸತ್ವ ನನ್ನ 'ಸ್ತ್ರೀಲೋಕ' ಕಾದಂಬರಿಯಲ್ಲಿ ಮೂಡಿ ಬಂದಿದೆ. ಈ ಕಾರಣದಿಂದಲೂ ಈ ಕಾದಂಬರಿಗೆ ಪ್ರಶಸ್ತಿ ಬಂದಿರುವುದು ಸಂತೋಷ ಕೊಟ್ಟಿದೆ.

***ಪ್ರಶ್ನೆ:*** *ನೀವು ಕವಯಿತ್ರಿಯಾಗಿ, ಲೇಖಕಿಯಾಗಿ ಮೂಡಿ ಬಂದ ಸೃಜನಾತ್ಮಕ ಪ್ರಕ್ರಿಯೆಯ ಕುರಿತು ಹೇಳುತ್ತೀರಾ?*

ಬಹಳ ಚಿಕ್ಕವಯಸ್ಸಿನಲ್ಲೇ ಶಿವಮೊಗ್ಗಕ್ಕೆ ಬಂದೆ. ಹೊಸಮನೆಗೆ ಬಂದಾಗ ಮನೆಯ ಅಟ್ಟ ಹತ್ತಿ ನೋಡಿದೆ. ಅಷ್ಟೆತ್ತರಕ್ಕೂ ಬೆಳೆದ ರಾತ್ರಿ ರಾಣಿಯ ಹೂವಿನ ಗಿಡವನ್ನು ಕಿಟಕಿಯ ಮೂಲಕ ನೋಡಿದೆ. ಅಲ್ಲಿಂದಲೇ ದೂರದಲ್ಲಿ ಹಾದು ಹೋಗಿದ್ದ ರೈಲು ಕಂಬಿಗಳು, ದೂರ ಕಾಣುತ್ತಿದ್ದ ರಾಗಿಗುಡ್ಡ ನನ್ನನ್ನು ಸಮ್ಮೋಹನಗೊಳಿಸಿತು. ನರ್ಸರಿ ಶಾಲೆಯಲ್ಲಿ ಕೂತಾಗ ಎದುರಿನ ಡಿ.ಸಿ. ಬಂಗ್ಲೆಯಲ್ಲಿ ಇರುತ್ತಿದ್ದ ವಿವಿಧ ರೀತಿಯ ಮರಗಳು, ಹೂಗಳು ನನ್ನಲ್ಲಿ ವಿಚಿತ್ರ ಸಂವೇದನೆ ಹುಟ್ಟಿಸಿದವು. ಚಿಕ್ಕಂದಿನಲ್ಲಿ ಓದುವುದಕ್ಕೆ ಬೇರೆ ಪುಸ್ತಕ ಸಿಕ್ಕುತ್ತಿರಲಿಲ್ಲ. ಹಾಗಾಗಿ ಪಠ್ಯ ಪುಸ್ತಕದಲ್ಲಿನ ಪಾಠಗಳನ್ನೆಲ್ಲಾ ಒಂದೇ ಪಟ್ಟಿಗೆ ಓದಿ ಮುಗಿಸುತ್ತಿದ್ದೆ. ಹತ್ತನೆಯ ತರಗತಿಗೆ ಬರುವ ವೇಳೆಗೆ ದೊಡ್ಡವರು ಬರೆದ ರೀತಿಯಲ್ಲಿಯೇ ಕತೆಗಳನ್ನು ಬರೆದು ಪತ್ರಿಕೆಗೆ ಕಳಿಸುತ್ತಿದ್ದೆ. ಆದರೆ ಅವೆಲ್ಲಾ ಪ್ರಕಟಗೊಳ್ಳದೆ ವಾಪಾಸ್ಸು ಬರುತ್ತಿತ್ತು.

ನಾನು ಕವನ ಬರೆಯಲಿಕ್ಕೆ ಶುರುಮಾಡಿದ್ದು, ಪಿ.ಯು.ಸಿ. ಓದುವ ವೇಳೆಗೆ. ನನ್ನ ದೊಡ್ಡಮ್ಮನ ಮಗಳು ಇಂಗ್ಲಿಷಿನಲ್ಲಿ ಪದ್ಯ ಬರೆಯುತ್ತಿದ್ದಳು. ನನಗೂ ಕವಿತೆ ಬರೆಯಬೇಕು ಎನಿಸಿತು. ನಾನೂ ಇಂಗ್ಲೀಷಿನಲ್ಲಿ ಚಂದ್ರನ ಬಗ್ಗೆ 'My Window companion' ಎನ್ನುವ ಕವಿತೆ ಬರೆದೆ. ಅದು ಶಾಲೆಯ ಮ್ಯಾಗಝಿನ್‌ನಲ್ಲಿ ಪ್ರಕಟವಾಯಿತು.

ಪದಿಹರೆಯಕ್ಕೆ ಕಾಲಿರಿಸಿದಾಗ ಸ್ವಂತಿಕೆಯ ಹಂಬಲ ಜಾಸ್ತಿಯಾಯಿತು. ಇದನ್ನು

ಪ್ರಕಟಪಡಿಸಲು ಕಾವ್ಯರಚಿಸುವುದು ಒಂದು ಹೊರದಾರಿಯಾಯಿತು. ಹಣದ ಸೌಕರ್ಯವಿದ್ದರೆ ಹೊಸ ಒಡವೆ, ಸೀರೆ ಉಟ್ಟು ಹೊಸತನ ಮೆರೆಯಬಹುದಾಗಿತ್ತು. ಆಗ ಮನೆಯಲ್ಲಿನ ಬಡತನದಿಂದಾಗಿ ನಾನು ಇತರರಿಂದ ಬೇರೆ ಎಂದುಕೊಳ್ಳಲು ಕವಿತೆ ನನ್ನ ಪಾಲಿಗೆ ದಕ್ಕಿತು.

ಆಗ ನವ್ಯದ ಉಚ್ಛ್ರಾಯ ಕಾಲ. ಪತ್ರಿಕೆಗಳಿಗೆ ಚಿತ್ರಕಲ್ಪನೆ ಮುಂತಾದ ವಿಭಾಗಗಳಿಗೆ ಕವನ ಬರೆದು ಕಳಿಸುತ್ತಿದ್ದೆ. ಒಮ್ಮೆ ಆಕಾಶವಾಣಿಗೆ ನಾಲ್ಕೈದು ಕವನಗಳನ್ನು ಕಳಿಸಿದೆ. ಇನ್ನೂ ಕೆಲವು ಕವನಗಳನ್ನು ಕಳಿಸಿಕೊಡಿ ಎಂದು ಆಕಾಶವಾಣಿಯಿಂದ ಪತ್ರ ಬಂದಾಗ ನಾನು ಬರೀತಿರೋದು ಕವಿತೆಯೇ ಸರಿ ಎಂದು ನಿರಾಳಗೊಂಡೆ. ನಂತರ ಸಣ್ಣಪುಟ್ಟ ಕವಿಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದೆ. ನಂತರ ವಿಮರ್ಶಕ ಡಿ.ಎಸ್. ನಾಗಭೂಷಣರೊಡನೆ ನನ್ನ ಮದುವೆಯಾಯಿತು. ಅನೇಕ ಕವಿಗಳ, ವಿಮರ್ಶಕರ ಪರಿಚಯ ನಾಗಭೂಷಣರಿಗೆ ಇದ್ದಿದ್ದರಿಂದ ನನಗೂ ಅವರೆಲ್ಲರ ಸಂಪರ್ಕ ಒದಗಿ ಬಂತು. ಹೀಗಾಗಿ ನಿಜವಾದ ಕವಿತೆ ಎಂದರೆ ಯಾವುದು? ಹೇಗೆ ಬರೆಯಬೇಕು ಎನ್ನುವುದನ್ನು ನಾನು ಕಲಿಯುತ್ತಾ ಹೋದೆ.

***ಪ್ರಶ್ನೆ:*** *ನೀವು ಮೂಲತಃ ಕವಯಿತ್ರಿ. ಕಾದಂಬರಿ ಬರೆಯಲು ನಿಮಗೆ ನೀಡಿದ ಪ್ರೇರಣೆ ಏನು?*

ನಾನು ಕವಿತೆಯನ್ನೇ ಹೆಚ್ಚಾಗಿ ಇಷ್ಟಪಡುತ್ತೇನೆ. ಆದರೆ ಅದು ಮಿಂಚಿನ ತರಹ ಒಂದು ಕ್ಷಣದ ಸಂಚಾರಿ ಭಾವವನ್ನು ಮಾತ್ರ ಸೆರೆಹಿಡಿಯಬಲ್ಲುದು. ಸ್ತ್ರೀವಾದಿ ಲೇಖಕಿಯರ ಒಂದು ಶಿಬಿರದಲ್ಲಿ ಭಾಗವಹಿಸಿದಾಗ ಅಲ್ಲಿ ನಡೆಯುತ್ತಿದ್ದ ಚರ್ಚೆ ನಾನು ಕಂಡುಕೊಂಡ ಅನುಭವಕ್ಕಿಂತ ಭಿನ್ನವಾದದ್ದು ಅನಿಸಿತು. ಪ್ರತಿಯೊಬ್ಬ ಪುರುಷನಲ್ಲೂ ಸ್ತ್ರೀ ಸ್ವಭಾವದ ಅಂಶ ಎನ್ನುವುದು ಹಾಗೂ ಪ್ರತಿಯೊಬ್ಬ ಮಹಿಳೆಯಲ್ಲೂ ಪುರುಷ ಸ್ವಭಾವದ ಅಂಶ ಇದ್ದೇ ಇರುತ್ತದೆ. ಕುವೆಂಪು, ಶಿವರಾಮ ಕಾರಂತ, ದೇವನೂರ ಮಹಾದೇವ ಇವರ ಕಾದಂಬರಿಗಳಲ್ಲಿ ಸ್ತ್ರೀಪಾತ್ರ ನೋಡಿದಾಗ ಈ ಅಂಶ ಸ್ಪಷ್ಟವಾಗುತ್ತದೆ. ದೈನಂದಿನ ಜೀವನದಲ್ಲಿ ಒಂದು ಅರ್ಥದಲ್ಲಿ ಪ್ರತಿಯೊಬ್ಬ ಸ್ತ್ರೀ ಕೂಡಾ ಸ್ತ್ರೀವಾದಿಯೇ ಆಗಿರುತ್ತಾಳೆ. ಇದು ಯಾರಿಗೂ ಗೋಚರವಾಗಿರುವುದಿಲ್ಲ. ನನ್ನ ಒಡನಾಡಿಗಳೊಡನೆ ಮಾತನಾಡಿದಾಗ, ತಮ್ಮ ನೋವು ನಲಿವುಗಳನ್ನು ಕುರಿತು ಹೇಳುವಾಗ ಸ್ತ್ರೀವಾದಿಗಳು ಹೇಳುವುದಕ್ಕಿಂತ ವಾಸ್ತವಿಕವಾಗಿ ಭಿನ್ನವಾದ ಸ್ತ್ರೀ ಪ್ರಪಂಚವೊಂದು ಇದೆಯೆಂದು ಅನಿಸಿತು. ನನ್ನ ಸ್ನೇಹಿತೆಯರ, ಕುಟುಂಬದವರ ಒಳತೋಟಿಗಳನ್ನು ಯಥಾವತ್ತಾಗಿ ತೆರೆದಿಡುವುದೇ ಸ್ತ್ರೀಲೋಕದ ಪ್ರವೇಶಿಕೆಯಾಗುತ್ತಿದೆ ಎಂದುಕೊಂಡು ಈ ಕಾದಂಬರಿ ಬರೆಯಲು ಶುರು ಮಾಡಿದೆ. ಕಾದಂಬರಿ ಮೂಲಕ ಜನಸಾಮಾನ್ಯರ ಅಸಾಮಾನ್ಯ ಲೋಕವನ್ನು ಚಿತ್ರಿಸಲು ಸಾಧ್ಯ ಎಂದು ನನ್ನ ನಂಬಿಕೆ.

***ಪ್ರಶ್ನೆ:*** *ನೀವು ಸಂಭಾಷಣೆಯ ಮೂಲಕವೇ ಇಡೀ ಕಾದಂಬರಿಯ ನಿರ್ವಹಣೆ ಮಾಡಿದ್ದೀರಿ. ಕನ್ನಡದಲ್ಲಿ ಇದೊಂದು ಹೊಸ ಪ್ರಯೋಗವೆಂದು ನನ್ನ ಅನಿಸಿಕೆ. ಈ ಬಂಧದ ಬಗ್ಗೆ ನೀವು ಹೇಗೆ ಆಕರ್ಷಿತರಾದಿರಿ?*

ಕನ್ನಡದಲ್ಲಿ ಈ ಬಗೆಯದು ಪೂರ್ತಿ ಹೊಸತೆಂದು ನಾನು ಭಾವಿಸುವುದಿಲ್ಲ. ಬಹಳ ಹಿಂದೆಯೇ ತಿರುಮಲಾಂಬಾ ಅವರ ಕೃತಿಗಳಲ್ಲಿ ಈ ಬಗೆಯ ಬಂಧವನ್ನು ಗುರುತಿಸಬಹುದು. ರಾಮಕೃಷ್ಣ ವಚನವೇದ ಬರೆದ ಮಹೇಂದ್ರನಾಥ ಗುಪ್ತ ಕೂಡ ಸಂಭಾಷಣೆಯ ಮೂಲಕವೇ ರಾಮಕೃಷ್ಣರ ಇಡೀ ಜೀವನದ ಕಲ್ಪನೆ ಮೂಡಿಸುತ್ತಾರೆ. ಯಕ್ಷಗಾನದ ತಾಳಮದ್ದಲೆ ಕೂಡ ಇದೇ ಬಗೆಯದಲ್ಲವೇ? ನನ್ನ ಜಾಯಮಾನಕ್ಕೆ ಸಂಭಾಷಣೆಯ ಮೂಲಕ ಬರೆಯುವುದೇ ಹೆಚ್ಚು ಸೂಕ್ತವಾದುದು ಎಂದುಕೊಂಡು ಹೀಗೆ ಮಾಡಿದೆ.

*ಪ್ರಶ್ನೆ: ನಿಮ್ಮ ಕೃತಿಗಳ ಬಗ್ಗೆ ವಿಮರ್ಶಕರ ಹಾಗೂ ಓದುಗರ ಪ್ರತಿಕ್ರಿಯೆ ಹೇಗಿದೆ?*

ನನ್ನ ಕಾವ್ಯವನ್ನು ಮೆಚ್ಚಿ ಅನೇಕ ಓದುಗರು ಪತ್ರ ಬರೆಯುತ್ತಿರುತ್ತಾರೆ. ಕಂಡಾಗ ಮಾತನಾಡುತ್ತಾರೆ. ನನ್ನ ಕಾದಂಬರಿಯ ಬಗ್ಗೆ ಸಾಕಷ್ಟು ವಿಮರ್ಶೆಗಳು ಪತ್ರಿಕೆಗಳಲ್ಲಿ ಬಂದಿವೆ. ಕಿರಿಯ ಓದುಗರೂ ನನ್ನ ಕವಿತೆಯನ್ನು ಇಷ್ಟಪಡುತ್ತಾರೆ. ನನ್ನ ಕಾವ್ಯದ ಬಗ್ಗೆ ವಿಮರ್ಶಕರು ಹೆಚ್ಚಾಗಿ ಬರೆದಿಲ್ಲ. ಹಿರಿಯ ಸಾಹಿತಿಗಳು, ವಿಮರ್ಶಕರು ಮುಖತಃ ಭೇಟಿಯಾದಾಗ ನನ್ನ ಕಾವ್ಯ ಉತ್ತಮವಾಗಿದೆ ಎಂದು ಭರವಸೆಯಿಂದ ಹೇಳುತ್ತಾರೆ. ಆದರೆ ಅಂತಹ ಮಾತುಗಳು ಅಕ್ಷರ ರೂಪ ಕಂಡಿಲ್ಲ. ಇದೇಕೆ ಹೀಗೆ ಎಂದು ನನಗೂ ಕೂಡಾ ಅರ್ಥವಾಗುತ್ತಿಲ್ಲ.

*ಪ್ರಶ್ನೆ: ಸಾಹಿತ್ಯದಲ್ಲಿ ನಿಮ್ಮ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳು ಯಾರು?*

ನನ್ನ ಸಾಹಿತ್ಯಕ್ಕೆ ಪ್ರೇರಕ ಶಕ್ತಿಯಾಗಿರುವುದು ಕೇವಲ ಸಾಹಿತ್ಯವೊಂದೇ ಅಲ್ಲ. ಸತ್ಯಜಿತ್ ರೇ, ಕುರೋಸಾವಾ ಮುಂತಾದವರ ಉತ್ತಮ ಚಲನಚಿತ್ರಗಳು, ಕುಮಾರ ಗಂಧರ್ವ, ಭೀಮಸೇನ ಜೋಷಿ ಮುಂತಾದವರ ಸಂಗೀತ, ಇಂತಹದೇ ಹಲವು ಹತ್ತು ಸಂಗತಿಗಳು ನನ್ನ ಕಾವ್ಯಕ್ಕೆ ಪ್ರೇರಣೆ ನೀಡುತ್ತಾ ಬಂದಿವೆ. ವಚನ, ಝೆನ್ ಬುದ್ಧಿಸಂ, ರಮಣರ ಆಧ್ಯಾತ್ಮಿಕ ಒಳನೋಟಗಳು ಪ್ರಭಾವ ಬೀರಿವೆ. ಹಿರಿಯ ಸಾಹಿತಿಗಳಾದ ಕುವೆಂಪು, ಮಾಸ್ತಿ, ಕಾರಂತ ಮುಂತಾದ ಸಾಹಿತ್ಯ ದಿಗ್ಗಜಗಳು ಅಲ್ಲದೆ ನನ್ನ ಪತಿಯಾದ ನಾಗಭೂಷಣ ಹಾಗೂ ಅವರ ಸಮಾಜವಾದಿ ಗೆಳೆಯರು ನನ್ನ ಕವಿತಾ ಲೋಕದ ವಿಸ್ತರಣೆಗೆ ಕಾರಣವಾಗಿದ್ದಾರೆ.

*ಪ್ರಶ್ನೆ: ನೀವು ಮಡಿಕೇರಿಯ ಅಂಚೆ ಕಚೇರಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದೀರಿ. ಕಚೇರಿ ಹಾಗೂ ಮನೆ ಕೆಲಸದ ಒತ್ತಡದ ನಡುವೆ ಕಾವ್ಯ ರಚನೆ ಕಷ್ಟ ಎನಿಸುವುದಿಲ್ಲವೇ?*

ಕಾವ್ಯವನ್ನು ಪುರುಸೊತ್ತು ಇದ್ದವರು ಬರೆಯುತ್ತಾರೆ ಎಂದಲ್ಲ. ಜೀವನದ ದೈನಂದಿನ ಒತ್ತಡವನ್ನು ಹಗರುಮಾಡಿಕೊಳ್ಳಲು ಕಾವ್ಯ ಅವಶ್ಯಕ. ಸಿಗುವ ಸ್ವಲ್ಪ ಸಮಯವನ್ನೇ ಇದಕ್ಕೆ ಬಳಸುತ್ತೇನೆ. ೪೫೦ ಪುಟಗಳ ಕಾದಂಬರಿಯನ್ನು ಕೆಲವೇ ತಿಂಗಳಲ್ಲಿ ಕಚೇರಿಗೆ ರಜಾ ಹಾಕದೆ ಬರೆದಿದ್ದೇನೆ. ಇದು ಅಂತಹಾ ಶ್ರಮಪಡುವ ಕೆಲಸವಲ್ಲ ಅಂದುಕೊಂಡಿದ್ದೇನೆ.

ಕಾದಂಬರಿಯನ್ನೇನೋ ಶ್ರಮವಿಲ್ಲದೆ ಬರೆದೆ. ಆದರೆ ಅದರ ಗಾತ್ರವನ್ನು ನೋಡಿ ಇದನ್ನು ಪ್ರಕಟಿಸುವ ಸಾಹಸ ಯಾರು ಮಾಡುತ್ತಾರೆ ಎಂಬ ಆತಂಕ ಶುರುವಾಯಿತು. ಇರಲಿ ನೋಡೋಣ ಎಂದು ನನ್ನ ಮೊದಲ ಕವನ ಸಂಕಲನ ಪ್ರಕಟಿಸಿದ್ದ ಅಕ್ಷರ ಪ್ರಕಾಶನದ ಕೆ.ವಿ. ಸುಬ್ಬಣ್ಣ ಅವರಿಗೆ ಒಂದು ಪತ್ರ ಬರೆದು ಕೇಳಿದ. ಅವರು ಹಸ್ತಪ್ರತಿಯನ್ನು ಕೂಡಾ ಓದದೆ ಕಳಿಸಿ, ಪ್ರಕಟಿಸೋಣ ಎಂದರು. ಹಸ್ತಪ್ರತಿ ಕಳಿಸಿದ ಕೂಡಲೇ ತುಂಬಾ ಮೆಚ್ಚುಗೆಯ ಪತ್ರ ಬರೆದು ಬೇಗನೆ ಪ್ರಕಟಿಸಿ ನನ್ನಲ್ಲಿ ಆಶ್ಚರ್ಯ ಮತ್ತು ಧನ್ಯತೆ ಭಾವವನ್ನು ಉಂಟು ಮಾಡಿದರು. ಸುಬ್ಬಣ್ಣನವರಂತಹ ಸಾಹಿತ್ಯ ಪ್ರೇಮಿ ಹಾಗೂ ಪ್ರಕಾಶಕರು ಇಲ್ಲದೇ ಹೋಗಿದ್ದಲ್ಲಿ ಎಷ್ಟೋ ಜನ ಲೇಖಕರು ಬೆಳಕಿಗೇ ಬರುತ್ತಿರಲಿಲ್ಲ ಎಂದು ಅನಿಸುತ್ತಿದೆ.

***ಪ್ರಶ್ನೆ:*** *ನಿಮ್ಮ ಪತಿ ಸಾಹಿತ್ಯ ವಿಮರ್ಶಕರೂ ಆಗಿದ್ದಾರೆ. ಇವರಿಂದ ನಿಮಗೆ ಯಾವ ಬಗೆಯ ಸಹಕಾರ ದೊರೆಯುತ್ತಿದೆ?*

ನನ್ನ ಕವಿತೆಯ ಮೊದಲ ಓದುಗರೇ ನಾಗಭೂಷಣ ಆಗಿದ್ದಾರೆ. ಅವರು ಯಾವುದೇ ದಾಕ್ಷಿಣ್ಯವಿಲ್ಲದೆ, ಪದ್ಯ ಕೆಟ್ಟದಾಗಿದೆ ಅನ್ನಿಸಿದರೆ ಕಟುವಾಗಿ ತಮ್ಮ ಅಭಿಪ್ರಾಯ ಹೇಳುತ್ತಾರೆ. ಕೆಲವೊಮ್ಮೆ ಇದು ನೋವಾದರೂ ನಾನು ಬೆಳೆಯಲು ಇವರ ವಿಮರ್ಶೆ, ಮೆಚ್ಚುಗೆ ಕಾರಣವಾಗಿದೆ.

***ಪ್ರಶ್ನೆ:*** *ಇಂದಿನ ಸಾಹಿತ್ಯ ಹಾಗೂ ಸಾಂಸ್ಕೃತಿಕ ಪರಿಸ್ಥಿತಿ ಹೇಗಿದೆ? ಹೊಸ ಪೀಳಿಗೆಯ ಬರಹಗಾರರು ಎದುರಿಸಬೇಕಾದ ಕಷ್ಟವೇನು?*

ಹಿಂದೆ ನಾವು ಹಿರಿಯರ ಬರಹಗಳನ್ನು ಗೌರವದಿಂದ, ಶ್ರದ್ಧೆಯಿಂದ ಓದುತ್ತಿದ್ದೆವು. ಅವರೂ ಕಿರಿಯರನ್ನು ಬೆನ್ನುತಟ್ಟಿ ಪ್ರೋತ್ಸಾಹಿಸಿ, ಕವಿತೆಯ ಅರೆ–ಕೊರೆಗಳನ್ನು ತೋರಿಸಿ ಕಾವ್ಯ ಪ್ರಪಂಚದಲ್ಲಿ ಮುಂದುವರಿಯಲು ಆತ್ಮವಿಶ್ವಾಸ ಹುಟ್ಟಿಸುತ್ತಿದ್ದರು. ಇಂದು ಈ ಪರಿಸ್ಥಿತಿ ಮಾಯವಾಗಿದೆ. ಹೊಸಬರಿಗೆ ಮಾರ್ಗದರ್ಶಕರೇ ಇಲ್ಲ ಅನ್ನುವಂತಾಗಿದೆ. ಭರವಸೆ ಹುಟ್ಟಿಸುವ ಸಾಹಿತ್ಯದ ವಾತಾವರಣ ಮಾಯವಾಗುತ್ತಾ ಇದೆ. ವಿಮರ್ಶೆಗೆ ಇಂದು ಕಲಾಕೃತಿಯೇ ಮಾನದಂಡವಾಗಿ ಉಳಿದಿಲ್ಲ. ಇಲ್ಲೂ ಕೂಡಾ ಉಳಿದ ಕ್ಷೇತ್ರದಂತೆ ಗುಂಪುಗಾರಿಕೆ, ದ್ವೇಷಾಸೂಯೆ ಮನೆಮಾಡಿದೆ. ಈ ಆತಂಕಗಳನ್ನು ದಾಟಿಕೊಂಡು ಸಾಹಿತ್ಯ ಕೃಷಿ ಮಾಡುವುದು ಹೊಸಬರಿಗಂತೂ ಬಹಳ ಕಷ್ಟಸಾಧ್ಯವಾಗಿದೆ.

***ಪ್ರಶ್ನೆ:*** *ಬದಲಾಗುತ್ತಿರುವ ಆರ್ಥಿಕ, ಸಾಮಾಜಿಕ ಸನ್ನಿವೇಶದಲ್ಲಿ ಸಾಹಿತ್ಯದ ಬೆಳವಣಿಗೆ ಯಾವ ದಾರಿ ಕಂಡುಕೊಳ್ಳಬಹುದು?*

ಇಂದು ಮನುಷ್ಯರಲ್ಲಿ ಪರಸ್ಪರ ಅವಲಂಬನೆ ಬಹಳ ಕಡಿಮೆಯಾಗುತ್ತಾ ಇದೆ. ಓಗಿರುವುದೇ ಪ್ರತಿಷ್ಠೆ ಎಂದುಕೊಂಡಿದ್ದೇವೆ. ಸ್ವಾವಲಂಬನೆಯೇ ಒಂದು ಹೊಸ ಮೌಲ್ಯವೆಂಬಂತೆ ತಿಳಿಯಲಾಗುತ್ತಿದೆ.

ಇದು ಪ್ರತಿಯೊಬ್ಬನನ್ನು ದ್ವೀಪವಾಗಿಸುತ್ತಿದೆ. ಮನುಷ್ಯರ ನಡುವೆ ಸಂಬಂಧ ಕಡಿಮೆಯಾದಂತೆ, ಕಾವ್ಯ ರಚನೆಯಾಗುತ್ತಿದ್ದರೂ, ಸ್ಪಂದನವಿಲ್ಲದ ಕಾವ್ಯ ಕಾಗದದ ಹೂವಿನಂತೆ ಆಗುತ್ತದೆ.

('ಕನ್ನಡ ಜನ ಅಂತರಂಗ', ಜನವರಿ ೯, ೧೯೯೮.)

●

# ‘ಬೆಳಕೊಂದಿದ್ದರೆ ಸಾಕು...’: ಒಂದು ಸಂದರ್ಶನ

**ಸಬಿತಾ ಬನ್ನಾಡಿ:** ಮೆಲುದನಿ ನಿಮ್ಮ ಕಾವ್ಯದ ಸ್ಥಾಯೀ ಗುಣ. ನಿಮ್ಮ ಕವಿತೆಗಳನ್ನು ಮೆಚ್ಚಿಕೊಳ್ಳುವವರೆಲ್ಲರೂ ಇದನ್ನ ಎತ್ತಿ ಹೇಳುತ್ತಾರೆ. ಬಹುಶಃ ಸದ್ಯದ ವಾತಾವರಣದಲ್ಲಿ ಈ ಮೆಲುದನಿ ಆಹ್ಲಾದಕರವಾಗಿ ಕಾಣುವುದು ಸಹಜ. ಇಲ್ಲಿ ನನಗೆ ವಿಶೇಷವಾಗಿ ಕಂಡದ್ದು, ಉಗ್ರವಾಗಿರುವುದನ್ನೂ ತಣ್ಣಗೆ ಹೇಳಿ ತಣ್ಣನೆಯ ಅನುಭವ ನೀಡುವ ನಿಮ್ಮ ಸಾಮರ್ಥ್ಯ. ಉದಾ: “ಜ್ವಾಲಾಮುಖಿಯೇ ಆಗಲಿ, ಸೂರ್ಯನೇ ಆಗಲಿ ಸಿಟ್ಟಿನಿಂದ, ಆಕ್ರೋಶದಿಂದ ಯಾರನ್ನೂ ಸುಟ್ಟು ದಾಖಲೆಗಳಿಲ್ಲ” ಎಂಬ ಸಾಲುಗಳು ನಮ್ಮನ್ನು ಬೆಚ್ಚಿ ಬೀಳಿಸುವುದರ ಜೊತೆಗೇ convincing ಕೂಡಾ ಆಗಿರುತ್ತವೆ. ಹಾಗಂತ ನೀವು ಎಲ್ಲವನ್ನೂ ತಣ್ಣಗೆ ಒಪ್ಪಿಕೊಂಡು ಬೆಚ್ಚನೆಯ ಗೂಡೊಳಗೆ ಇರುವವರೂ ಅಲ್ಲ ಎಂಬುದು ‘ತಂಗಿ ಹುಟ್ಟಿದಳು’, ‘ಮುಗಿಯದ ಕಥೆ’ ಮೊದಲಾದ ಕವಿತೆಗಳಲ್ಲಿ ಸಾಬೀತಾಗುತ್ತದೆ. ಪ್ರತಿಭಟನೆಯ ಸೊಲ್ಲು ಬೆಂಕಿಯಂತಲ್ಲದೆ ಬೆಳಗಿನಂತೆ ತೋರುವ ನಿಮ್ಮ ಕಾವ್ಯ ಸ್ವಭಾವದ ಬಗೆಗೆ ಒಂದಿಷ್ಟು ವಿವರ...

**ಸವಿತಾ ನಾಗಭೂಷಣ:** ಬೆಂಕಿ, ಬೆಳಕು, ಜತೆಜತೆಗೆ ಇರುವಂತದ್ದು ಅಲ್ವಾ? ಬೆಂಕಿ ಪಳಗಿದರ ಬೆಳಕು... ಅನಿಸುತ್ತೆ. ಮನುಷ್ಯ ಸ್ವಭಾವ ಕೂಡ ಬಹುಶಃ ಹೀಗೆ ಏನೋ... ನಾನು ನನ್ನ ಸ್ವಭಾವದ ಸಹಜ ನೆಲೆಗೆ ಬಂದು ಬರಿತೀರಬೇಕಾದರೆ ಬೇರೇನೇ ಆಗಿರ್ತೀನಿ... ಯಾಕೆ ಅಂತ ನನಗೆ ಗೊತ್ತಿಲ್ಲ. ಆಗೆಲ್ಲ ನನ್ನೊಳಗಿರೋ ಕೇಡನ್ನು ನೆನೆದು ಪಶ್ಚಾತ್ತಾಪ ಆಗುತ್ತೆ! ಕೊನೆಗೂ ನನ್ನಲ್ಲಿ ಉಳಿಯೋದು ಬರೀ ಪ್ರೀತೀನೇ ಅನಿಸುತ್ತೆ. ಸಿಟ್ಟು ಕರಗಿ ಹೋಗುತ್ತೆ. ನಾನು ನನ್ನ ಅಜ್ಜಿಯ ನೆರಳಲ್ಲೇ ಬಹುಪಾಲು ಬೆಳೆದದ್ದು. ಆಕೆ ರಮಣ–ಪರಮಹಂಸರ ಭಕ್ತೆ. ಮಹಾನ್ ಗಾಂಧಿವಾದಿ. ಆಕೆ ಸಂತೋಷಕ್ಕೂ, ದುಃಖಕ್ಕೂ ಎರಡಕ್ಕೂ ಕಣ್ಣೀರು ಹಾಕ್ತಾ ಇದ್ದಳು. ಇದು ನನಗೆ ಚಿಕ್ಕಂದಿನಲ್ಲಿ ಸೋಜಿಗ ಉಂಟು ಮಾಡ್ತಾ ಇತ್ತು. ನನ್ನ ಎಳೆವೆಯಲ್ಲಿ ಗಾಂಧಿಯ ಕತೆಗಳನ್ನ ಹೇಳಿ ಚೆನ್ನಾಗಿ ‘ಬ್ರೈನ್‌ವಾಷ್’ ಮಾಡಿದ್ದರ ಪರಿಣಾಮವನ್ನೇ ನೀವು ನನ್ನ ಪದ್ಯಗಳಲ್ಲಿ ಕಾಣ್ತಾ ಇರೋದು... ಕಾಠಿಣ್ಯ ಅನ್ನೋದು ಮಿಂಚಿ ಮಾಯವಾಗು ವಂತಾದ್ದು. ಬಹುಶಃ ಮನುಷ್ಯನ ಸ್ಥಾಯಿಭಾವ ಪ್ರೀತೀನೇ ಇರಬೇಕು. ನಾನು ಏನು ಹೇಳಿದ್ರೂ ಸಮರ್ಥನೆ ಆಗೋದಿಲ್ಲ. ನನ್ನ ಕವನಗಳು ಓದುಗನೊಳಗೆ ಯಾವ ಭಾವ ಬೀರುತ್ತೋ, ಅದೇ ನಿಜವೋ ಏನೋ ವಿವರಿಸೋದು ಕಷ್ಟ!

**ಸಬಿತಾ ಬನ್ನಾಡಿ:** ನವೋದಯ ಕವಿಗಳ ನಂತರದಲ್ಲಿ ಪ್ರಕೃತಿ ಕವಿತೆಯ ಉಸಿರಾಗಿ ಬಂದದ್ದು ಕಡಿಮೆ. ಪ್ರಕೃತಿ ಒಂದು ಭಾಗವಾಗಿ ಬರುವುದೇ ಹೆಚ್ಚು. ಆದರೆ, ನಿಮ್ಮ ಕವಿತೆಗಳಲ್ಲಿ ಪ್ರಕೃತಿ ಉಸಿರೇ ಆಗಿರುತ್ತದೆ. ಅದರಲ್ಲೂ ತನ್ನ ಮತ್ತು ಅನ್ಯರ ನೋವು, ವಿಷಾದಗಳು ಪ್ರಕೃತಿಯೊಂದಿಗೆ ಸಂವಾದಿಸುತ್ತವೆ. ಸಂವಾದಿಸುತ್ತಾ ನೋವನ್ನು ನೀಗಿಕೊಳ್ಳುತ್ತವೆ. ಸಮಸ್ಯೆಗಳ ಪರಿಹಾರಕ್ಕೂ ಪ್ರಕೃತಿಯ ಮೊರೆಹೋಗುತ್ತವೆ. ಮತ್ತು ಪ್ರಕೃತಿಯೇ ಉತ್ತರವೂ ಆಗಿರುತ್ತದೆ. ಆದರೆ ಇದು ವಾಸ್ತವದಲ್ಲಿನ ನಮ್ಮ ಅಸಾಹಯಕತೆಗೆ ಕಂಡುಕೊಂಡ ಭಾವುಕ ಪರಿಹಾರ ಎನಿಸುವುದಿಲ್ಲವೇ? ನಿಮ್ಮ 'ಸ್ವಗತ' ಕವಿತೆಯೇ ಇಂತದ್ದೊಂದರ ಪ್ರತಿಬಿಂಬದಂತಿಲ್ಲವೇ?

**ಸವಿತಾ ನಾಗಭೂಷಣ:** ಅಸಹಾಯಕತೆ? ಇರಬಹುದು. ಯಾಕೆಂದ್ರೆ ನಾನು ಬಾಲ್ಯದಲ್ಲಿ ತುಂಬ ದುಃಖಿಯಾಗಿದ್ದೆ. ನನ್ನ ಬೆನ್ನಲ್ಲೆ ಹುಟ್ಟಿದ ತಮ್ಮನಿಗೆ ಎಂಥಾದ್ದೋ ಅಲರ್ಜಿಯಂತಹ ಕಾಯಿಲೆ ಪೀಡೆ ತರಹ ಮೆಟ್ಟಿಕೊಂಡಿತ್ತು. ಹಗಲೂ–ರಾತ್ರಿ ಅಳ್ತಾನೇ ಇರ್ತಾ ಇದ್ದ. ನನಗಿಂತ ಅವನು ಎರಡು ವರ್ಷ ಚಿಕ್ಕವನು, ಮೂರು ತಿಂಗಳ ಮಗುವಾಗಿದ್ದಾಗ ಶುರುವಾದ ಕಾಯಿಲೆ ಅವನ ಹನ್ನೆರಡನೆಯ ವಯಸ್ಸಿನ ತನಕವೂ ಇತ್ತು. ನನ್ನ ಪಾಡೆನಾಗಿರಬೇಕು? ಯೋಚನೆ ಮಾಡಿ. ಎಲ್ಲರ ಗಮನ ಅವನ ಮೇಲೆ. ಮುಖ್ಯವಾಗಿ ನನ್ನ ತಂದೆ–ತಾಯಿಯ ಗಮನ. ಅವರು ತೀರಾನೇ ಬಸವಳಿದು ಹೋಗಿದ್ರು. ನನಗೂ ಅವನ ಸಂಕಟ ನೋಡೋಕೆ ಆಗ್ತಾ ಇರಲಿಲ್ಲ. ನಾವಷ್ಟು ಅನುಕೂಲಸ್ಥರೂ ಆಗಿರಲಿಲ್ಲ. ಆರ್ಥಿಕ ಸಂಕಷ್ಟ–ಅಪ್ಪನ ಬಹುಪಾಲು ಸಂಬಳ ತಮ್ಮನ ಕಾಯಿಲೆಗೆ ಖರ್ಚು ಆಗ್ತಾ ಇತ್ತು. ನಾನು ಊಟ–ತಿಂಡಿಗೆ ಮಾತ್ರ ಮನೆಗೆ ಹೋಗ್ತಾ ಇದ್ದೆ. ಮಿಕ್ಕಂತೆ ಎಲ್ಲೆಲ್ಲೋ ಅಲೆದು ರಾತ್ರಿ ಮನೆಗೆ ಹಿಂತಿರುಗುತ್ತಿದ್ದೆ. ನಾನು ಚಿಕ್ಕ ಹುಡುಗಿ ತರಹ ಬೆಳೀಲೇ ಇಲ್ಲ. ಹತ್ತರ ವಯಸ್ಸಿಗೆ ಮುದುಕಿ ತರಹ ಯೋಚನೆ ಮಾಡ್ತಾ ಇದ್ದೆ. ಈ ಪರಮ ಸಂಕಟಗಳಿಂದ ಬಿಡುಗಡೆ ಪಡೆಯಲು ನಾನು ಬಾಲ್ಯದಲ್ಲಿ ಆಶ್ರಯಿಸಿದ್ದು ನದಿ, ಗುಡ್ಡ, ಮರ, ಗಿಡ, ಹೂವು, ಇತ್ಯಾದಿ.. ಬಹುಶಃ ನನಗದು ಅನಿವಾರ್ಯವಾಗಿತ್ತು...

**ಸಬಿತಾ ಬನ್ನಾಡಿ:** ವಸಾಹತುಪೂರ್ವದ ಕನ್ನಡ ಕಾವ್ಯಗಳು ಧರ್ಮ–ರಾಜಪ್ರಭುತ್ವಗಳಿಂದ ನಿಯಂತ್ರಿತವಾಗಿದ್ದರೆ, ಆಧುನಿಕ ಕನ್ನಡ ಕಾವ್ಯದ ಕಾಳಜಿಗಳು ಪ್ರಕೃತಿ, ವೈಚಾರಿಕತೆ, ರಾಜಕೀಯ ಸಿದ್ಧಾಂತ ಮೊದಲಾದವುಗಳಿಂದ ನಿಯಂತ್ರಿತವಾದಂತೆನಿಸುತ್ತದೆ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಇವುಗಳು ಪ್ರೇರಣೆಗಳೂ ಹೌದು. ಕುವೆಂಪು ಅವರ ಪ್ರಕೃತಿ ಗೀತೆಗಳು ನಿಮ್ಮನ್ನು ಪ್ರೇರೇಪಿಸಿದ ಸಂಗತಿಗಳೇನಾದರೂ ಇವೆಯೇ?

**ಸವಿತಾ ನಾಗಭೂಷಣ:** ಧರ್ಮಾನೇ ಆಗ್ಲಿ, ರಾಜಕೀಯನೇ ಆಗ್ಲಿ, ವಿಚಾರಾನೇ ಆಗ್ಲಿ ಆ ಹೊತ್ತಿನ ಜಗತ್ತಿನಲ್ಲಿ ಜನಜೀವನದಲ್ಲಿ ಏನಿರುತ್ತೋ... ನಾವದನ್ನು ಉಸಿರಾಡ್ಲೇಬೇಕಾಗುತ್ತೆ. ನಾವದನ್ನು ಸ್ಪರ್ಶಿಸಲೇ ಬೇಕಾಗುತ್ತೆ. ನನ್ನ ಸುತ್ತಮುತ್ತಲ ಪರಿಸರ, ಮನುಷ್ಯ ಸಂಬಂಧಗಳು ಎಲ್ಲವೂ ನನಗೆ ಪ್ರೇರಣೆಯೇ. ಪ್ರಯತ್ನಪೂರ್ವಕವಾಗಿ ನಾನೇನೂ ಮಾಡಿಲ್ಲ. ಎಲ್ಲವನ್ನೂ ಮುಟ್ಟುತ್ತಾ ಹೋಗಿದೀನಿ ಅಷ್ಟೇ... ದಕ್ಕಿದ್ದನ್ನು ಬರೆದಿದ್ದೀನಿ ಅಷ್ಟೇ.

**ಸಬಿತಾ ಬನ್ನಾಡಿ:** ನೀವು ಬರವಣಿಗೆ ಆರಂಭಿಸಿದ ಕಾಲದಲ್ಲಿ ('ನಾ ಬರುತ್ತೇನೆ ಕೇಳು' ಪ್ರಕಟವಾದ ಆಸುಪಾಸಿನಲ್ಲಿ) ಕನ್ನಡದ ನೆಲದಲ್ಲಿ ಬಂಡಾಯದ ಬಾವುಟ ಎತ್ತರದಲ್ಲಿತ್ತು. ಸ್ತ್ರೀವಾದ ಸಿದ್ಧಾಂತವಾಗಿ ಪ್ರವೇಶ ಪಡೆದಿತ್ತು. ಈ ನಡುವೆ ಮಾರ್ಕ್ಸ್‌ವಾದ, ಸಮಾಜವಾದ ಇತ್ಯಾದಿಗಳು ನಿರಂತರವಾಗಿ ಚಾಲ್ತಿಯಲ್ಲಿದ್ದುವು. ಅಮೃತಾ ಪ್ರೀತಂರಂತಹ ಕವಿಗಳು ಕನ್ನಡಕ್ಕೆ ಅನುವಾದ ರೂಪದಲ್ಲಿ ದೊರಕಿದ್ದರು. ಈ ರೀತಿಯ ಬೆಳವಣಿಗೆಗಳು ನಿಮ್ಮ ವ್ಯಕ್ತಿ ಪ್ರಜ್ಞೆಯನ್ನು ಪ್ರಭಾವಿಸಿದ್ದಿದೆಯೇ?

**ಸವಿತಾ ನಾಗಭೂಷಣ:** ಹೌದು ಪ್ರಭಾವಿಸಿವೆ. ನವೋದಯ, ನವ್ಯ, ಬಂಡಾಯ, ದಲಿತ, ಎಲ್ಲದರಿಂದ ಪಡೆದುಕೊಂಡಿವೆ. ಮದುವೆಯಾದಾಗಿನಿಂದಲೂ ನನ್ನ ಒಡನಾಟ ಸಮಾಜವಾದಿಗಳ ಜತೇನೇ ಜಾಸ್ತಿ. ಸಮಾಜವಾದಿ ತತ್ವಗಳು ನನ್ನನ್ನು ಗಾಢವಾಗಿ ಪ್ರಭಾವಿಸಿವೆ. ಬುದ್ಧ, ಗಾಂಧಿ, ಮಾರ್ಕ್ಸ್, ಲೋಹಿಯಾ, ಬಸವಣ್ಣ, ಕುವೆಂಪು ಇವರನ್ನೆಲ್ಲ ನಾನು ನಾಗಭೂಷಣ ಅವರ ಸಮಾಜವಾದಿ ಮಿತ್ರರ ಚರ್ಚೆ–ವಾಗ್ವಾದಗಳ ಮೂಲಕ ಅರಿತು ನಂತರ ನನಗೆ ಎಷ್ಟು ಬೇಕೋ ಅಷ್ಟು ಓದಿಕೊಂಡೆ. ನುಡಿ–ನಡೆಗಳ ನಡುವಿನ ಬಿರುಕು ಯಾವಾಗಲೂ ನನ್ನನ್ನು ಕಾಡುತ್ತೆ. ಸಾಸಿವೆಯಷ್ಟಾದರೂ ಸಮಾಜವಾದವನ್ನು ನನ್ನ ಮನೆಯಲ್ಲಿ, ಆಚರಣೆಯಲ್ಲಿ ತರೋದಕ್ಕೆ ಪ್ರಯತ್ನಪಟ್ಟಿದ್ದೀನಿ... ಸಮಾಜವಾದಿಗಳಿಗೆ ಸಲಾಂ! ಇದನ್ನ ನೀವು ಯಾವ ಅರ್ಥದಲ್ಲಿ ಬೇಕಾದರೂ ತಗೊಳ್ಳಬಹುದು!!

**ಸಬಿತಾ ಬನ್ನಾಡಿ:** ಬರಹಗಾರನ ಸಾಮಾಜಿಕ ಬದ್ಧತೆಯ ಬಗೆಗೆ ಆಗಾಗ ವಿಮರ್ಶಕ ವಲಯದಲ್ಲಿ ಚರ್ಚೆಗಳು ಮರುಕಳಿಸುತ್ತಿರುತ್ತವೆ. ನಿಮ್ಮ ಕವಿತೆಗಳು ಕಲಾತ್ಮಕವಾಗಿರುವಂತೆಯೇ ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸುವಂತದ್ದೂ ಆಗಿದೆ. 'ಜಾತ್ರೆಯಲ್ಲಿ ಶಿವ' ಸಂಕಲನ ಈ ದೃಷ್ಟಿಯಿಂದ ಗಮನಾರ್ಹ. ಇದು ಏಕಕಾಲಕ್ಕೆ ಕಿಟಕಿಯಲ್ಲಿನ ಚಂದ್ರನನ್ನೂ, ಕನಕ–ಕೃಷ್ಣರನ್ನೂ, ಜಾತ್ರೆಯೊಳಗಣ ಶಿವನನ್ನೂ, ಸಾಗರದ ಹಳ್ಳಿ ಮೂಲೆಯ ಮುದಿ ತಂದೆ–ತಾಯಿಯರನ್ನೂ, ಕೋಮುವಾದ–ಜಾಗತೀಕರಣದ ವಿರೋಧವನ್ನೂ, ಬುದ್ಧ ಪ್ರತಿಮೆ ಒಡೆದುದರ ಬಗೆಗೆ ವಿಷಾದವನ್ನೂ ಒಡಲಲ್ಲಿ ಹೊತ್ತುಕೊಂಡಿದೆ. ಬರಹಗಾರನ ಸಾಮಾಜಿಕ ಬದ್ಧತೆ ಮತ್ತು ಜವಾಬ್ದಾರಿಯ ಬಗೆಗೆ ನಿಮ್ಮ ನಿಲುವುಗಳೇನು?

**ಸವಿತಾ ನಾಗಭೂಷಣ:** ನನಗೆ ಯಾವುದರಿಂದಲೂ ದೂರ ಇರೋಕೆ ಇಷ್ಟವಿಲ್ಲ. ಎಲ್ಲದರ ಜತೆ; ಎಲ್ಲರ ಜತೆ ಇರಲು ಇಷ್ಟ. ಇನ್ನು... ಸಾಮಾಜಿಕ ಬದ್ಧತೆ ಬಗ್ಗೆ ಹೇಳೋದಾದ್ರೆ... ಅದು ಕಳ್ಳುಬಳ್ಳಿಯ ಸಂಬಂಧ...

**ಸಬಿತಾ ಬನ್ನಾಡಿ:** ಹಣದ ಹಿಂದೆ ನಾಗಾಲೋಟದಲ್ಲಿರುವ ಪ್ರಸ್ತುತ ಜಗತ್ತಿನ ಪ್ರಕ್ರಿಯೆಗಳಿಗೆ ಪ್ರತಿಕ್ರಿಯೆ ಎಂಬಂತೆ ಅನೇಕರಲ್ಲಿ ಭೂತಕಾಲದ ಬಗೆಗೆ ಹಳಹಳಿಕೆಯೂ ಹೆಚ್ಚುತ್ತಿದೆ. ಆಧುನಿಕತೆ ಮತ್ತು ಮನುಷ್ಯ ಸಂಬಂಧಗಳ ನಡುವಣ ಬಿಕ್ಕಟ್ಟುಗಳನ್ನು ಹೇಗೆ ಅರ್ಥೈಸುತ್ತೀರಿ?

**ಸವಿತಾ ನಾಗಭೂಷಣ:** ಇದೊಂದು ಥರಾ ಕಷ್ಟವಾದ ಪ್ರಶ್ನೆ. ಬಿಕ್ಕಟ್ಟುಗಳು–ಇಕ್ಕಟ್ಟುಗಳು ನಾವೇ ಆಹ್ವಾನಿಸಿಕೊಂಡದ್ದು, ನಾವೇ ಬಯಸಿ ಪಡೆದದ್ದು ಅಂತ ಎಷ್ಟೋ ಸಲ ಅನಿಸುತ್ತೆ. ನಮಗವು ಬೇಡ ಅನ್ನಿಸಿದರೆ ದೂಡಲಿಕ್ಕೆ ಸಾಧ್ಯವಿದೆ. 'ಸಾಕು', 'ಸಾಕು' ಅಂತ ಅನ್ನಿಸೋ ತನಕ ಬಹುಶಃ ಅವು ನಮ್ಮೊಡನೆ ಇರಬಹುದು. ನಾವೇ ಹುಟ್ಟು ಹಾಕಿರುವ ಸಮಸ್ಯೆಗಳು... ಅದರ ನಾವೇ ಪರಿಹಾರ ಕಂಡಕೋಬೇಕು...

**ಸಬಿತಾ ಬನ್ನಾಡಿ:** ಕನ್ನಡ ಸಾಹಿತ್ಯಲೋಕದಲ್ಲಿ ಈಗ ನಿರ್ವಾತದ ವಾತಾವರಣವಿದೆ ಎಂಬ ಅಭಿಪ್ರಾಯ ಕೇಳಿ ಬರುತ್ತಿದೆ. ನಿಮಗೇನನಿಸುತ್ತದೆ?

**ಸವಿತಾ ನಾಗಭೂಷಣ:** ಒಂದು ಲೋಕದಲ್ಲಿ ನಿರ್ವಾತವಿದ್ದರೆ ಇನ್ನೊಂದು ಲೋಕ ಅದನ್ನಾ ತುಂಬಿ ಕೊಡ್ತಾ ಇರ್ತದೆ. ಸಾಹಿತ್ಯ, ಸಂಗೀತ, ನೃತ್ಯ, ಶಿಲ್ಪ, ಚಿತ್ರಕಲೆ... ಇವೆಲ್ಲಾ ಮನುಷ್ಯನೊಳಗಿನ ಕಲ್ಮಶಗಳನ್ನು ಶುದ್ಧೀಕರಿಸುವ ಸಾಧನಗಳು. ಒಳ್ಳೇದು ಏನಿರುತ್ತೋ ಅದಕ್ಕೆ ಆಕರ್ಷಣೆ ಕಡಿಮೆ. ತಾಜಾ ತರಕಾರಿ, ಸೊಪ್ಪು, ಹಣ್ಣಿನ ಸ್ಥಾನವನ್ನು junk food ಕಬಳಿಸಿದ ಹಾಗೆ! ಸಂವೇದನೆಯ ಸ್ಥಾನವನ್ನು ಸರಕು ಪ್ರಪಂಚ ಆಕ್ರಮಿಸಿಕೊಂಡಿದೆ...

**ಸಬಿತಾ ಬನ್ನಾಡಿ:** ಈಚೆಗೆ ಬರೆಯುತ್ತಿರುವ ಯುವಕವಿಗಳ ಬಗೆಗೆ ನಿಮ್ಮ ಅನಿಸಿಕೆಗಳೇನು?

**ಸವಿತಾ ನಾಗಭೂಷಣ:** ತುಂಬ ತುಂಬ ಹುಡುಗ–ಹುಡುಗಿಯರು ಒಳ್ಳೆಯ ಕವನಗಳನ್ನು ಬರೀತಾ ಇದ್ದಾರೆ. ಹುಡುಗರು ಹುಡುಗಿಯರಿಗಿಂತ ಚೆನ್ನಾಗಿ ಬರಿತಾ ಇದ್ದಾರೆ. ಎಷ್ಟೊಂದು ಯುವಕವಿಗಳು... ತುಂಬಾ ಖುಷಿಯಾಗುತ್ತೆ.

**ಸಬಿತಾ ಬನ್ನಾಡಿ:** ಪ್ರೇಮದ ಬಗ್ಗೆ ಹಾಡದ ಕವಿಯೇ ಇಲ್ಲ. ನಿಮ್ಮ 'ಮೇಲು ಕೋಟೆಯ ಚೆಲುವ'ನ ಬಗೆಗೆ ಏನಾದರೂ...?

**ಸವಿತಾ ನಾಗಭೂಷಣ:** ಒಮ್ಮೆ ನಾನು, ನಾಗಭೂಷಣ, ಕವಿ ಎಸ್. ಮಂಜುನಾಥ್ ಮೇಲುಕೋಟೆಗೆ ಹೋಗಿದ್ವು. ಮುಂಜಾನೆ ಐದು ಘಂಟೆಯ ಸಮಯ. ಸಮೀಪದ ದಿಬ್ಬದ ಮೇಲೆ ಕುಳಿತು ನೋಡ್ತಾ ಇದ್ವಿ... ಆ ವಿಶಾಲವಾದ ಬಯಲಿನಂತೆ ಲ್ಯಾಂಡ್‌ಸ್ಕೇಪ್, ಬೆಟ್ಟಗಳು, ಆಗತಾನೆ ಉದಯಿಸುತ್ತಿರುವ ದಿನಮಣಿ, ಚೆಲ್ಲಾಡಿದ ಬಣ್ಣಗಳು, ಮಂಜು, ಸಣ್ಣಹಾದಿಯಲ್ಲಿ ಹಾಲು ಮೊಸರಿನ ಗಡಿಗ ಹೊತ್ತು ಸಾಗುತ್ತಿದ್ದ ದೃಶ್ಯ, ಚಿತ್ರ ಬರೆದಂತಿದ್ದ ದೃಶ್ಯ... ಪು.ತಿ.ನ. ಅವರ ಕವನಗಳು ಸಾಕಾರಗೊಂಡಂತೆ ಇದ್ವು. ಅಲ್ಲಿರೋ ಆಗ ತಾನೇ ಕಿತ್ತು ತಂದ ಇಷ್ಟಗಲ ಕಮಲದ ಹೂಗಳನ್ನು ಮಾರ್ತಾ ಇದ್ರು. ಒಂದು ಕಮಲದ ಹೂವಿಗೆ ಒಂದೇ ರೂಪಾಯಿ. ನಾನು ಒಂದಿಷ್ಟು ಹೂಗಳನ್ನು ಖರೀದಿಸಿ ದೇವಳದ ಚೆಲುವನಾರಾಯಣನಿಗ ಅರ್ಪಿಸಿದೆ. ಆ ಧೂಪ, ದೀಪ, ಗಂಧ... ಆ ಕಪ್ಪು ಮೊಗದ ಚೆಲುವಾದ ಮೂರ್ತಿಯನ್ನು ನೋಡುತ್ತಲೇ ಬರೆದ ಕವನ 'ಚೆಲುವ ನಾರಾಯಣ': "ನಂಬಿ ನಲುಗಿರಬಹುದು... ಒಲಿದು

ಕೆಟ್ಟವರುಂಟೆ... ಒಲುಮೆ ಇಲ್ಲದಿರೆ... ಅವನ ಮುಟ್ಟುವುದುಂಟೆ... ಎಂಟೆದೆಯ ತುಂಟನೆ... ಚೆಲುವ ನಾರಾಯಣ!"

**ಸಬಿತಾ ಬನ್ನಾಡಿ:** 'ಕವಿತೆ'ಗೆ ನೀವು ಕೊಡುವ ನಿಮ್ಮ ನೆಚ್ಚಿನ ರೂಪಕ ಯಾವುದು?

**ಸವಿತಾ ನಾಗಭೂಷಣ:** ರೂಪಕ? ಒಂದಲ್ಲ... ಎರಡು... 'ಬೆಳಕೊಂದಿದ್ದರೆ ಸಾಕು ಕತ್ತಲು ಹರಿಯುವುದು' 'ಕಲ್ಲು ದೇವರ ಮುಂದೆ ನಿಂತು ಹುಲ್ಲಂತೆ ಹಗುರಾಗುವುದು'.

('ಶಬ್ದಗುಣ'ದ ಮೊದಲ ಸಂಚಿಕೆ – ೨೦೦೬)



# ನನಗೊಲಿಯಿತು ಕವಿತೆ, ನಾನೊಲಿದೆ ಅದಕೆ!

ಸಂದರ್ಶನ: **ವಿದ್ಯಾರಶ್ಮಿ ಪೆಲ್ತಡ್ಕ**

**೧. ನೀವೇಕೆ ಬರೆಯುತ್ತೀರಿ? ನಿಮ್ಮ ಸಾಹಿತ್ಯ ರಚನೆಗೆ ಸ್ಫೂರ್ತಿ ಏನು?**

ನಾನು ಚಿಕ್ಕ ಹುಡುಗಿಯಾಗಿದ್ದಾಗ ಸುಳ್ಳಿನ ಸರಮಾಲೆಯನ್ನೇ ಹೆಣೆಯುವಷ್ಟು ಕುಶಲಳಾಗಿದ್ದೆ! ಚಿತ್ರ ವಿಚಿತ್ರ ಕತೆಗಳನ್ನು ಹೆಣೆದು ದೊಡ್ಡವರನ್ನು ರಂಜಿಸುತ್ತಿದ್ದೆ. ನಾಕು ವರುಷದವಳಾಗಿದ್ದಾಗ ಪಕ್ಕದ ಮನೆಗೆ ಹೋಗಿ ಇಂಗ್ಲಿಷ್ ದಿನಪತ್ರಿಕೆಯನ್ನು ತಿರುಗಾ ಮುರುಗಾ ಹಿಡಿದು ಗಂಟೆಗಟ್ಟಲೆ ಓದುತ್ತಿದ್ದೆ... ಹಾಗೆ ಓದಿದಾಗಲೆಲ್ಲ ಕ್ಲೆಮೆಂಟನ್ ಎಂಬ ಆ ಮನೆಯವರು ನನಗೆ ಮೂಸುಂಬಿ ಹಣ್ಣುಗಳನ್ನು ನೀಡುತ್ತಿದ್ದರು! ಇದೆಲ್ಲ ಕವಿಯಾಗುವ ಲಕ್ಷಣಗಳಲ್ಲವೆ? ಕವಿತೆ ನನಗೆ ಒದಗಿ ಬಂತು, ನಾನು ಅದಕ್ಕೆ ಒಲಿದೆ ಅಷ್ಟೆ.

ಸ್ಫೂರ್ತಿ? ಎಲ್ಲವೂ... 'ಯಾವುದೂ ಅಮುಖ್ಯವಲ್ಲ...'

**೨. ಕವನ ನಿಮ್ಮ ಅಭಿವ್ಯಕ್ತಿಯ ಮಾಧ್ಯಮ ಎಂದು ಖಚಿತವಾದದ್ದು ಯಾವಾಗ?**

ನಾನು ಪ್ರೌಢಶಾಲೆಯಲ್ಲಿದ್ದಾಗ ಕತೆಗಳನ್ನು ಬರೆದು ಪತ್ರಿಕೆಗಳಿಗೆ ಕಳಿಸಿದೆ. ಅವು ವಿಷಾದ ಪತ್ರ ಹೊತ್ತು ವಾಪಸಾದವು. ಸಂಪಾದಕರ ಪಾಲಿಟಿಕ್ಸ್‌ನಿಂದಾಗಿ ನನ್ನ ಕತೆಗಳಿಗೆ ಈ ದುರ್ಗತಿ ಬಂದಿದೆ ಎಂದೇ ತಿಳಿದೆ! ಅದು ಹೇಗೋ ಕವಿತೆ ಬರೆದು ಕಳಿಸಿದಾಗ ಕೂಡಲೇ ಪ್ರಕಟವಾಗುತ್ತಿದ್ದವು. ಅದಕ್ಕಿಂತ ಹೆಚ್ಚಾಗಿ, ಕತೆ ಬರೆಯುವಾಗ ಕಿರಿಕಿರಿಯಾಗುತ್ತಿತ್ತು. ಕವಿತೆಗಳೋ ನಿರಾಯಾಸವಾಗಿ ಬಂದುಬಿಡುತ್ತಿದ್ದವು... ಹಾಗಾಗಿ ನಾನು ಕವಿತೆಗಳಿಗೇ ಲಾಯಕ್ಕು ಎಂದು ತೀರ್ಮಾನಿಸಿದೆ.

**೩. ನೀವು ಸಹೃದಯರಿಗೂ–ವಿಮರ್ಶಕರಿಗೂ ಸಮಾನವಾಗಿ ಇಷ್ಟವಾದ ಕವಿ. ಇವರಿಬ್ಬರಲ್ಲಿ ಸ್ಪಂದನೆಯಲ್ಲಿ ಎಂತಹ ಭಿನ್ನತೆಯನ್ನು ಗುರುತಿಸಿದ್ದೀರಿ?**

ನೋ ಕಾಮೆಂಟ್ಸ್! ನನ್ನ ಕವಿತಾ ಸಂಕಲನಗಳನ್ನು ಎಷ್ಟು ಜನ ಕೊಂಡು ಓದಿದ್ದಾರೋ ತಿಳಿಯದು... ನನ್ನ ಇತ್ತೀಚಿನ 'ದರುಶನ' ಬಿಟ್ಟರೆ ಮಿಕ್ಕ ಸಂಕಲನಗಳ ಪದ್ಯಗಳನ್ನು ಯಾರು ಎಷ್ಟು ಗಮನಿಸಿದ್ದಾರೆ? ಕಾಲು ಶತಮಾನ ಕವಿತೆ ಬರೆದರೂ, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯಲ್ಲಿ ಅರ್ಧ ಸಾಲಿನ ಉಲ್ಲೇಖ ಇಲ್ಲ ಎಂದ ಮೇಲೆ ನಿಮ್ಮ ಪ್ರಶ್ನೆಗೆ ಏನು ಉತ್ತರ ಕೊಡಬಹುದು? ನನ್ನ ಕಾವ್ಯದಲ್ಲಿ ವಿಮರ್ಶಕ ಪಂಡಿತರಿಗೆ ಕೆಲಸವಿಲ್ಲ ಎಂದು ತಿಳಿದು ನಾನೇ

ಸಮಾಧಾನ ಪಟ್ಟುಕೊಂಡಿದ್ದೇನೆ. ಆದರೆ ಹೊಸ ಬೆಳವಣಿಗೆಯೆಂದರೆ, ಏಕೋ ಏನೋ, ಇದ್ದಕ್ಕಿದ್ದಂತೆ ಹೊಸ ವಿಮರ್ಶಕ/ಕಿಯರು ನನ್ನ ಕಾವ್ಯವನ್ನು ವಿಶೇಷವಾಗಿ ಗಮನಿಸತೊಡಗಿದ್ದಾರೆ... ಹಾಗೆ ನೋಡಿದರೆ, ನನ್ನ ಕಾವ್ಯಕ್ಕೆ ಹೆಚ್ಚು ಪ್ರತಿಕ್ರಿಯೆ ನೀಡಿದವರೆಂದರೆ ಮಕ್ಕಳು... ಹೈಸ್ಕೂಲು/ಕಾಲೇಜು ವಿದ್ಯಾರ್ಥಿ/ವಿದ್ಯಾರ್ಥಿನಿಯರು, ಜನಸಾಮಾನ್ಯರು, ಗೃಹಿಣಿಯರು...

**೪. ಮಹಿಳೆಯರ ಕೃತಿಗಳನ್ನು ಸ್ತ್ರೀಪರ ಕನ್ನಡಕದಿಂದ ನೋಡುವುದು ಹೆಚ್ಚು. ನಿಮ್ಮ ಕೃತಿಗಳಿಗೆ ನ್ಯಾಯಯುತ ವಿಮರ್ಶೆ ಸಿಕ್ಕಿದೆಯೇ?**

ಬಹುಶಃ ನನ್ನ ಸಾಹಿತ್ಯವನ್ನು ಸ್ತ್ರೀಪರ ಕನ್ನಡಕದಿಂದ ನೋಡಿ ವಿಮರ್ಶಕರು ನಿರಾಶರಾಗಿರಬಹುದು. ಅದೇನೇ ಇರಲಿ, ವಿಮರ್ಶಕರಿಂದಲ್ಲದಿದ್ದರೂ, ಜಿ.ಎಸ್.ಎಸ್., ಕಣವಿ, ಪುಣೇಕರ, ಸುಬ್ಬಣ್ಣ, ಅನಂತಮೂರ್ತಿ, ಎಕ್ಕುಂಡಿ, ತೇಜಸ್ವಿ, ಮಹಾದೇವ, ವೈದೇಹಿ, ಪ್ರತಿಭಾ, ಹೆಚ್.ಎಸ್.ವಿ. ಮುಂತಾದ ಹಲವಾರು ಹಿರಿಯರಿಂದ ಮೆಚ್ಚುಗೆ, ಪ್ರೋತ್ಸಾಹದ ಮಾತುಗಳು ಕೇಳಿಬಂದಿವೆ. ಅಷ್ಟಕ್ಕೂ ಕನ್ನಡದ ಎಲ್ಲ ಪತ್ರಿಕೆಗಳೂ, ನಿಯತ ಕಾಲಿಕೆಗಳೂ ನನ್ನ ಎಲ್ಲ ಕವನಗಳನ್ನೂ ಪ್ರಕಟಿಸಿ ನನಗೆ ಅಪಾರ ಓದುಗ ಸಮೂಹವನ್ನು ದೊರಕಿಸಿಕೊಟ್ಟು ಉಪಕರಿಸಿವೆ. ನನಗೆ ಅಷ್ಟೇ ಸಾಕು!

**೫. ನಿಮಗಿಷ್ಟವಾದ, ನಿಮ್ಮ ಮೇಲೆ ಪ್ರಭಾವ ಬೀರಿದ ಕೃತಿ?**

ಫುಕೊವೊಕಾನ 'ಒಂದು ಹುಲ್ಲಿನ ಕ್ರಾಂತಿ' ಮತ್ತು ಮಾಸ್ಟರ್ ಮಹಾಶಯನ 'ಶ್ರೀರಾಮಕೃಷ್ಣ ವಚನವೇದ'.

**೬. ನಿಮಗಿಷ್ಟವಾದ ನಿಮ್ಮ ಕೃತಿ?**

'ಜಾತ್ರೆಯಲ್ಲಿ ಶಿವ' ಕವನ.

**೭. 'ಸುವರ್ಣ ಕಾವ್ಯ' ಸಂಪಾದನೆಯ ಸಂದರ್ಭದ ಅನುಭವಗಳು?**

ದೊಡ್ಡವರ 'ವಿನಯ' ಪರಿಚಯವಾಯಿತು. ಪುಟಗಳ ಮಿತಿಯ ಕಾರಣ ಇನ್ನೂ ಸರಿಸುಮಾರು ಐವತ್ತು ಕವಿಗಳನ್ನು ಕೈಬಿಡಬೇಕಾಯಿತು. ಇದರ ಬಗ್ಗೆ ನನಗೆ ತುಂಬಾ ವಿಷಾದವಿದೆ. ಹಿರಿಯ ಕವಿ ಮತ್ತು ಸಂಪುಟದ ಇನ್ನೋರ್ವ ಸಂಪಾದಕರಾದ ಬಿ.ಎ. ಸನದಿಯವರು ನನ್ನಲ್ಲಿ ಇಟ್ಟ ನಂಬಿಕೆ, ವಿಶ್ವಾಸಗಳಿಗೆ ನಾನು ಯಾವತ್ತೂ ಋಣಿ. ಒಂದು ವರುಷದ ಕಾಲ ನಾನು ಬರೇ ಕವಿತೆ ಓದುತ್ತ ಕಾಲ ಕಳೆದೆ. ಸಾವಿರಕ್ಕೂ ಮೀರಿ ಕವನ ಸಂಕಲನಗಳು... ಹತ್ತು ಸಾವಿರಕ್ಕೂ ಮೀರಿ ಕವನಗಳು... ಮನುಷ್ಯನೇಕೆ ಕಾವ್ಯವನ್ನು ಇಷ್ಟು ಹಚ್ಚಿಕೊಂಡಿದ್ದಾನೆ? ಅದು ಅನ್ನದಷ್ಟೇ ಅಮೂಲ್ಯವಾದದ್ದೇ? ವಿಸ್ಮಯವಾಯಿತು...

ನನ್ನ ಸಮಕಾಲೀನ ಕವಿಯೊಬ್ಬರು ನಾನು ಅವರ ಮಾನ ಕಳೆಯಲು ಅವರ ಕೆಟ್ಟ ಕವಿತೆಯೊಂದನ್ನು ಆರಿಸಿದ್ದೇನೆಂದು ದೂರಿ ತಾವೇ ದೊಡ್ಡದೊಂದು ತಮ್ಮ ಕವಿತೆಯನ್ನು ಅಕಾಡೆಮಿಗೆ ಕಳಿಸಿದರು! ಇನ್ನೊಬ್ಬರು ನಾನು ಆರಿಸಿದ ಕವಿತೆ ಅವರ ಘನತೆಗೆ

ಚಿಕ್ಕದಾಯಿತೆಂದು ತುಂಬಾ ಒತ್ತಡ ತಂದು ನಾಕು ಪುಟಗಳ ಕವನ ಹಾಕಿಸಿಕೊಂಡರು! ಇವರೆಲ್ಲ ಪರಿಚಿತರೇ... ಆದರೆ ಎಲ್ಲಕ್ಕಿಂತ ಕಾವ್ಯ ದೊಡ್ಡದೆಂದು, ಕಿರಿಕಿರಿಯಾದರೂ ತಲೆ ಕೆಡಿಸಿಕೊಳ್ಳಲಿಲ್ಲ. ಈ ಅಪೂರ್ವ ಅವಕಾಶವನ್ನು ನಾನು ಆನಂದಿಸಿದೆನೆಂದೇ ಹೇಳಬೇಕು.

**೮. ಯಾಕೋ ಕವಿತೆಗಳನ್ನು ಬರೆಯುವ ಹಂಬಲ ಉಂಟಾಗುತ್ತಿಲ್ಲ ಎಂದಿದ್ದೀರಿ, 'ದರುಶನ'ದ ಆರಂಭಿಕ ಮಾತುಗಳಲ್ಲಿ. ಯಾಕೆ ಹೀಗೆ?**

ಕವಿತೆ ಕರೆಯಬೇಕು... ನಾನು ಬರೆಯಬೇಕು, ಅದಾಗುತ್ತಿಲ್ಲ...

**೯. ಮುಂದಿನ ಯೋಜನೆ?**

ಏನೂ ಇಲ್ಲ.

('ಸನ್ನಿಧಾನ': ಸಾಪ್ತಾಹಿಕ ಪ್ರಭ, ೭ ಜೂನ್, ೨೦೦೯)

●

# ಜಾನಪದದಲ್ಲಿ ಮಹಿಳೆ: ಇಂದಿನ ಸವಾಲುಗಳು –ಒಂದು ಟಿಪ್ಪಣಿ

ಇತ್ತೀಚೆಗೆ ಅಂದರೆ ದಿನಾಂಕ ೨೮.೭.೦೯ರಂದು ಬೆಂಗಳೂರಿನ ಕ್ರೈಸ್ಟ್ ಕಾಲೇಜಿನಲ್ಲಿ ವಿಮೋಚನಾ ಸಂಸ್ಥೆ ವರದಕ್ಷಿಣೆ ಮತ್ತು ಸಂಬಂಧಪಟ್ಟ ಇತರ ದೌರ್ಜನ್ಯಗಳ ಕುರಿತ ರಾಷ್ಟ್ರಮಟ್ಟದ ಮಹಿಳಾ ನ್ಯಾಯಾಲಯ-ವಿಚಾರಣೆ ಆಯೋಜಿಸಿತ್ತು. ರಾಷ್ಟ್ರದ ಹಲವೆಡೆಯಿಂದ ಆಗಮಿಸಿದ ನೊಂದ ಮಹಿಳೆಯರು ತಮ್ಮ ನೋವನ್ನು ಅಲ್ಲಿ ಹಂಚಿಕೊಂಡರು. ಹಾಗೆ ನೋವು ಹಂಚಿಕೊಂಡವರು ಮತ್ತಾರೂ ಅಲ್ಲ, ಸಮಾಜದ ಮುಖ್ಯವಾಹಿನಿಯಲ್ಲಿ ಸೇರಿ ಗಮನಾರ್ಹ ಪಾತ್ರ ನಿರ್ವಹಿಸುತ್ತಿರುವ ವಿದ್ಯಾವಂತ ಮಹಿಳೆಯರು! ಒಬ್ಬಳು ನವದೆಹಲಿಯ ಮಕ್ಕಳ ವೈದ್ಯೆ; (ಡಾ. ಮೀತು) ಮತ್ತೊಬ್ಬಳು ಮಧ್ಯಪ್ರದೇಶದ ಕವಯತ್ರಿ (ಶ್ರೀಮತಿ ಜಿಗ್ನಾಸ); ಇನ್ನೊಬ್ಬಳು ಇಂಗ್ಲೀಷ್ ಉಪನ್ಯಾಸಕಿ (ಶ್ರೀಮತಿ ಶಹನಾಜ್); ಮತ್ತೊಬ್ಬಳು ರಾಷ್ಟ್ರೀಯ ಪ್ರಶಸ್ತಿ ವಿಜೇತೆ ಒರಿಸ್ಸಾದ ಬಿಸ್ಮಯಾತಿ ಪಾತ್ರೊ ಎಂಬ ಹೆಣ್ಣುಮಗಳ ತಾಯಿ. ಈ ಕುರಿತು ಪತ್ರಿಕಾ ವರದಿ ಓದುತ್ತಿದ್ದಂತೆ ವಿದ್ಯಾವಂತರ ಪಾಡೇ ಹೀಗಾದರೆ ಹಳ್ಳಿಗಾಡಿನ ಅನಕ್ಷರಸ್ಥ ಮತ್ತು ಆರ್ಥಿಕವಾಗಿ ಇತರರನ್ನು ಅವಲಂಬಿಸಿದ ಹೆಣ್ಣುಮಕ್ಕಳ ಪಾಡೇನಾಗಿರಬಹುದು ಎಂದು ಗಾಬರಿಯಾಯಿತು.

ಇದೇ ರೀತಿಯ ಮಹಿಳಾ ನ್ಯಾಯಾಲಯ - ವಿಚಾರಣೆ ಕುರಿತು ದೃಶ್ಯಾವಳಿಯನ್ನು ಸಿ.ಡಿ. ಮೂಲಕ ಕುಪ್ಪಳ್ಳಿಯಲ್ಲಿ ಕಳೆದ ವರುಷ ಮಾನಸ ಬಳಗ ಬೆಂಗಳೂರು ಇವರು ಆಯೋಜಿಸಿದ ಮಹಿಳಾ ಶಿಬಿರದಲ್ಲಿ ನಾನು ನೋಡಿದ್ದೆ. ಆ ವಿಚಾರಣೆ ಬಹುಶಃ ತೈಲದೇಶವೊಂದರ ಯಾವುದೋ ಪಟ್ಟಣದಲ್ಲಿ ನಡೆದದ್ದು... ಹೆಸರು ನೆನಪಿಗೆ ಬರುತ್ತಿಲ್ಲ. ಅಲ್ಲಿನ ಮುಸ್ಲಿಂ ಬಾಲಕಿಯೊಬ್ಬಳು ತೋಡಿಕೊಂಡ ಘಟನೆಯೊಂದು ಹೃದಯವಿದ್ರಾವಕವಾಗಿದೆ. ಅದೇಕೋ... ಹಿಲರಿ ಕ್ಲಿಂಟನ್ ನೆನಪಾಗುತ್ತಿದ್ದಾಳೆ! ಜಗತ್ತಿನ ಬಲಿಷ್ಠ ರಾಷ್ಟ್ರ ಅಮೆರಿಕಾದ ಅಧ್ಯಕ್ಷರ ಪತ್ನಿಯಾದ ಅವಳು ಅಧ್ಯಕ್ಷ ಕ್ಲಿಂಟನ್ ಲೈಂಗಿಕ ಹಗರಣದಲ್ಲಿ ಸಿಕ್ಕುಬಿದ್ದಾಗ ಅನುಭವಿಸಿದ ಮಾನಸಿಕ ಯಾತನೆ ನೆನಪಾಗುತ್ತಿದೆ. ಕಾಲ, ದೇಶ, ಪ್ರಾಯದ ಹಂಗಿಲ್ಲದೆ ಬಾಲಕಿಯಿಂದ ಹಿಡಿದು ಮುದುಕಿಯವರೆಗೆ ಒಂದಲ್ಲ ಒಂದು ರೀತಿಯಲ್ಲಿ ಚಣಚಣಕ್ಕೂ ಮಹಿಳೆಯರು ಹೀಗೆ ದೌರ್ಜನ್ಯಕ್ಕೆ ಯಾಕೆ ಈಡಾಗುತ್ತಿದ್ದಾರೆ? ಹಿಂಸೆ ನಿತ್ಯದ ವಿದ್ಯಮಾನವಾಗಿರುವಾಗ ಎಲ್ಲರೂ ಇದಕ್ಕೆ ಬಲಿಯಾಗುತ್ತಿದ್ದಾರಲ್ಲವೆ ಎಂದು ನೀವು

ಕೇಳಬಹುದು. ಹೌದು ಈ ಹೊತ್ತಿನಲ್ಲಿ ಮನುಷ್ಯನ ದುರಾಸೆಯಿಂದ ಪರಿಸರ, ಪಶುಪಕ್ಷಿ ಕ್ರಿಮಿಕೀಟಗಳೂ ಈ ಹಿಂಸೆಯಿಂದ ವಿನಾಯಿತಿ ಪಡೆದಿಲ್ಲ. ಆದರೆ ಮಹಿಳೆ 'ಮಹಿಳೆ' ಎಂಬ ಏಕೈಕ ಕಾರಣದಿಂದ ಆಕೆ ಅನುಭವಿಸಬೇಕಾಗಿ ಬಂದಿರುವ ಆತಂಕ, ಮುಜುಗರ, ಅಸಹಾಯಕತೆ, ಅತ್ಯಾಚಾರ ಇವುಗಳತ್ತಲೇ ನನ್ನ ದೃಷ್ಟಿ ನೆಟ್ಟಿದೆ. ಇದರಲ್ಲಿ ಅಗ್ರಮಾನ್ಯ ಸ್ಥಾನ ಹೆಣ್ಣುಭ್ರೂಣ ಹತ್ಯೆಗೆ ಹುಟ್ಟುವ ಮೊದಲೇ ಹೊಸಕಿ ಹಾಕುವ ರಾಕ್ಷಸೀ ಮನೋಭಾವ. ಪ್ರಕೃತಿಯ ಮೇಲಿನ ಈ ಆಕ್ರಮಣದಿಂದ ಈ ಜಗತ್ತು ಸದ್ಯದಲ್ಲೇ ದೊಡ್ಡ ಬೆಲೆ ತೆರಬೇಕಾಗಬಹುದು. ಚಂದ್ರನ ತನಕ ಹೋಗಿ ಬಂದಿರುವ ಮನುಷ್ಯನ ವಿವೇಚನಾ ಶಕ್ತಿಯ ಬಗ್ಗೆಯೇ ಅನುಮಾನ ತರುತ್ತಿದೆ ಈ ತರ-ತಮ ಭಾವ.

ಅಂದಿನ ಜಾನಪದ ಮಹಿಳೆ ತನ್ನ ಪಾಡು ಹಾಡಿಕೊಂಡು ರಾಗಿ ಬೀಸಿದ ರಾಗಿಕಲ್ಲು ಇಂದು ಮರೆಯಾಗಿರಬಹುದು. ಆದರೆ ಬೀಸೊ ಕಲ್ಲಿನ ನಡುವೆ ಸಿಕ್ಕು ನುಜ್ಜುಗುಜ್ಜಾಗುತ್ತಿರುವ ಮಹಿಳೆಯ ಸ್ಥಿತಿಗತಿ ಇಂದಿಗೂ ಬದಲಾಗಿಲ್ಲ. ಅಂದಿನ ಜನಪದ ಮಹಿಳೆ ಕುಟುಂಬದೊಳಗೆ ಹಾಗೂ ಅದರಾಚೆಯ ತನ್ನ ಸುತ್ತಲಿನ ಸಮುದಾಯದಲ್ಲಿ ಅನುಭವಿಸುತ್ತಿದ್ದ ಕಷ್ಟ-ನಷ್ಟದ ಜತೆ ಆಧುನಿಕ ಯುಗದಲ್ಲಿ ಹೊಸಹೊಸ ಸಂಕಟಗಳೂ ಕೂಡಿಕೊಂಡು ಮಹಿಳೆಯ ಬದುಕು ದಿನೇ ದಿನೇ ಮತ್ತಷ್ಟು ದುರ್ಭರವಾಗುತ್ತಿದೆ. 'ಅತ್ತೆಮಾವರಿಗಂಜಿ ಸುತ್ತೇಳು ನೆರೆಗಂಜಿ' ಬದುಕು ಸವೆಸಿದ ಜನಪದ ಹೆಣ್ಣುಮಗಳು ಸಿಟ್ಟಾಗಿ ಶಿವನ ಬೈದಳೆ ಹೊರತು ದುಃಖಕ್ಕೆ ಮದ್ದು ಕಂಡು ಹಿಡಿಯಲಿಲ್ಲ. ಆಧುನಿಕ ಯುಗದಲ್ಲಿ ಅನೇಕಾನೇಕ ಭಯಂಕರ ಪ್ರಾಣಾಂತಿಕ / ಸಾಂಕ್ರಾಮಿಕ ರೋಗಗಳಿಗೆ ಮದ್ದು ಕಂಡುಹಿಡಿದಿರುವ ಮನುಷ್ಯ ಮೇಲು-ಕೀಳು ಎಂಬ ತರ-ತಮ ಭಾವ ತೊಡೆದು ಹಾಕುವಲ್ಲಿ ಯಶಸ್ವಿಯಾದಂತಿಲ್ಲ. ಲಭ್ಯವಿರುವ ಜಾನಪದ ಸಾಹಿತ್ಯವನ್ನು ಆಧುನಿಕ ಮಹಿಳಾ ಸಾಹಿತ್ಯದ ಜತೆ ಹೋಲಿಸಿ ತುಲನಾತ್ಮಕವಾಗಿ ನೋಡಿದಲ್ಲಿ ಜಾನಪದ ಕಾವ್ಯದಲ್ಲಿ ಅರ್ಥಾತ್ ತ್ರಿಪದಿಗಳಲ್ಲಿ ಕವಿ ಹೆಚ್ಚು ಶಕ್ತಿಶಾಲಿಯಾಗಿ ತನ್ನ ಒಳಗುದಿಯನ್ನು ತೋಡಿಕೊಂಡಿದ್ದಾಳೆ ಎಂದೆನಿಸುತ್ತದೆ.

ಚುರುಕು ಬುದ್ಧಿಯವಳಾಗಿ ಕಂಪ್ಯೂಟರ್ ತನ್ನದಾಗಿಸಿಕೊಂಡು ಲಕ್ಷಲಕ್ಷ ರೊಕ್ಕ ಎಣಿಸಿದರೂ ಸಮಕಾಲೀನ ಜಗತ್ತಿನ ಸಂಕಷ್ಟಗಳಿಗೆ ಸಮರ್ಥವಾಗಿ ಸೃಜನಶೀಲಳಾಗಿ ಸ್ಪಂದಿಸುವಲ್ಲಿ ಆಧುನಿಕ ಮಹಿಳೆ ಹಿಂದೆ ಬಿದ್ದಿದ್ದಾಳೆ ಎಂದೇ ಎನಿಸುತ್ತದೆ.

ಕಳೆದ ಹದಿಮೂರು ವರುಷಗಳಿಂದ ನೆನೆಗುದಿಗೆ ಬಿದ್ದಿರುವ ಮಹಿಳಾ ಮೀಸಲಾತಿ ಮಸೂದೆ, ಭಾರತದ ಜನಸಂಖ್ಯೆಯ ಸಮಸಮ ಅರ್ಧದಷ್ಟಿದ್ದರೂ ಏನು ಮಾಡಲಾಗದೆ ಮೂಕಪ್ರೇಕ್ಷಕರಾಗಿರುವ ಭಾರತದ ಮಹಿಳೆಯರು..... ಇದಕ್ಕಿಂತ ದೊಡ್ಡ ಉದಾಹರಣೆ ಬೇಕೆ?

ಸೃಜನಶೀಲ ವ್ಯಕ್ತಿತ್ವ, ಸಂಘಟನಾತ್ಮಕ ಪ್ರತಿರೋಧ ಒಡ್ಡುವ ಸಾಮರ್ಥ್ಯ ಇಂದಿನ ಮಹಿಳೆ ತುರ್ತಾಗಿ ಗಳಿಸಿಕೊಳ್ಳಬೇಕಾಗಿದೆ.

ಹಚ್ಚಿಕೊಂಡವ್ವಗ ಚೊಚ್ಚಿಲ ಮಗಳಾದೆ
ಬಿಟ್ಟಾಡಿಕೊಳುವ ವೈರೀಯ / ಮನಿಮುಂದ
ಬಿಚ್ಚಗತ್ಯಾಗಿ ಹೊಳದೇನ

ಈ ತ್ರಿಪದಿ ಅದನ್ನೇ ಹೇಳಿದಂತೆ ತೋರುತ್ತಿದೆ ಅಲ್ಲವೆ?

(ಇಳಕಲ್‌ನ ಎಸ್.ವಿ.ಎಂ. ಕಾಲೇಜಿನಲ್ಲಿ ೨೦೦೯ರ ಆಗಸ್ಟ್ ೧೩ರಂದು ನಡೆದ ರಾಷ್ಟ್ರೀಯ ಜನಪದ ಸಾಹಿತ್ಯ ಸಮ್ಮೇಳನದಲ್ಲಿ ಆಡಿದ ಮಾತುಗಳ ಟಿಪ್ಪಣಿ)

●

# ಗೌರಿ ಶಾಲೆಗೆ ಹೋದಳು...

- ಯವ್ವಾ ಯವ್ವಾ ಇಂದ ನಾ... ಸಾಲೆಗೆ ಹೋಕ್ಕೇನಿ...
- ಹೋಕ್ಕೀಯಂತೆ... ಮದಲ ಅಂಗಳಾ ಗುಡಸು, ಸಗಣೆ ಹಚ್ಚು, ರಂಗೋಲಿ ಬಿಡು ಮತ್ತ...
- ಯವ್ವಾ ಯವ್ವಾ ಇಂದ ನಾ... ಸಾಲೆಗೆ ಹೋಕ್ಕೇನೀ...
- ಹೋಕ್ಕೀಯಂತೆ ಮದಲ ಭೂವಿಗೂ, ದ್ಯಾವಿಗೂ ತೆನೆ ಮುರ್ದು ಸೊಪ್ಪಾಕು ನಡೀ ಮತ್ತ...
- ಯವ್ವಾ ಯವ್ವಾ ಇಂದ ನಾ... ಸಾಲೆಗೆ ಹೋಕ್ಕೇನೀ...
- ನೀರು ಬಂದಾವೇನ ನೋಡ ಮತ್ತ...
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನೀ...
- ಯಾಕ... ಇನ್ನ ಬಸ್ಯಾ ಎದ್ದಾಂಗಿಲ್ಲಾ... ಪಾಟೀ ಬಳಪಾ ಹ್ಯಾಂಗ ಒಗದಾನ... ಒಟ್ಟ ಜವಾಬದಾರೀ ಅನ್ನೂದ ಇದ್ದಾಂಗಿಲ್ಲ... ಸಾಲೆಗೆ ತಡಾ ಆಗ್ತೈತೀ... ಎಬ್ಬಿಸ ಮತ್ತ...
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನೀ...
- ಅಪ್ಪಗ ಚಾ ಕೊಡು... ಲಗೂನ...
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನೀ...
- ದನಿ ಶಾರೂದ ಇದ್ದಾಂಗದ... ಆಳ್ತಾಳೇನ.. ನೋಡವ್ವ ಮತ್ತ... ಉಚ್ಚೆ ಮಾಡೈತೋ ಏನೋ...
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನೀ...
- ಕಾಯಿಪಲ್ಲೆ ಎಷ್ಟ ಚಲೋದದ... ಸೊಪ್ಪ ಬಿಡಸು... ರೊಟ್ಟಿ ಬಡಿಯುವಂತೀ...
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನೀ...
- ಯಾಕೊ ಒಲಿ ಉರಿಲೊಲ್ಲದು... ಬಾಟಲದಾಗ ಚಿಮಣಿ ಎಣ್ಣೆ ಅದಾವೇನ ನೋಡು ಮತ್ತ...

- ಯವ್ವಾ ಯವ್ವಾ ಇಂದ ನಾ ಸಾಲಿಗೆ ಹೋಕ್ಕೇನೀ...
- ಬಸ್ಯಾಗ ರೊಟ್ಟಿ ನೀಡು. ಸಾವಕಾಶ ಉಣ್ಣಲಿ...

- ಯವ್ವಾ ಯವ್ವಾ ಇಂದ ನಾ ಸಾಲಿಗೆ ಹೋಕ್ಕೇನೀ...
- ಅದ್ಯಾಕ ಸಾಲೀ ಸಾಲೀ ಅಂತ ಒದರಲಿಕ್ಕಹತ್ತೀ... ಅಪ್ಪಗ ಬುತ್ತಿ ಒಯ್ಯಬೇಕ... ನೆಪ್ಪಿಲ್ಲೇನು?

- ಯವ್ವಾ ಯವ್ವಾ ಇಂದ ನಾ ಸಾಲಿಗೆ ಹೋಕ್ಕೇನೀ...
- ಲಗೂನ ಬುತ್ತಿಕೊಟ್ಟು ಸರ್ರಂತ ಹೊಳ್ಳಿ ಬಾ... ಹಿಟ್ಟು ಬೀಸಾಸಕ ಗಿರಣಿಯತ್ರ ಹೋಗಬೇಕ ತಿಳಿತೇನ?

- ಜಮುನಾ, ಕಮಲಾ, ಗಂಗಾ, ಎಲ್ಲಾ ಸಾಲಿಗೆ ಹೊಂಟಾರ...
- ಅವರ ಅಪ್ಪಗೋಳು ಸರಕಾರದಾಗ ಸಾಹೇಬರ ಅದಾರ... ಸಾಲಿಗೂ ಹೋಕ್ಕಾರ, ಸಗ್ಗಕ್ಕೂ ಹೋಕ್ಕಾರ... ಪುಣ್ಣೆವಂತ ಮಂದಿ... ನಿನಗೇನೈತಿ?

- ಯವ್ವಾ ಯವ್ವಾ ಇಂದ ನಾ ಸಾಲಿಗೆ ಹೋಕ್ಕೇನೀ...
- ಮತ್ತ... ಮತ್ತ... ಅದೇ ಮಾತ? ತೆಲಿ ಕೆಟ್ಟಾವೇನಾ?

- ನೀ ಯಾಕ ನನಗ ಸಾಲಿಗೆ ಕಳಿಸಾಂಗಿಲ್ಲಾ ಹೇಳ ಮತ್ತ...
- ಸುಮ್ಮ ಕೂಡು... ಯಾಕ ಕಾಡಸ್ತೀ...

- ಬಸ್ಯಾ ಯಾಕ ಸಾಲಿಗೆ ಹೋಕ್ಕಾವ ಹೇಳ ಮತ್ತ...
- ಬಸ್ಯಾ ಗಂಡು ಮಗಾ, ಇದ್ಯಾ ಬುದ್ಧ್ಯಾ ಬ್ಯಾಡೇನ? ಅಂವ ಮನಶ್ಯಾ ಆಗೋದು ಬ್ಯಾಡೇನ??

- ಹಂಗಾರ ನನಗೆ ಇದ್ಯಾ, ಬುದ್ಧ್ಯಾ ಬ್ಯಾಡೇನ? ನಾ ಮನಶ್ಯಾ ಆಗೋದು ಬ್ಯಾಡೇನ? ಸಾಯೇನ... ಕಸ, ಕಡ್ಡಿ ಕಲ್ಲೇನ? ನೀ... ನನ್ನ ಖರೇ ಅವ್ವಾ... ಹೌದಲ್ಲೋ... ಹೇಳ ಮತ್ತ...
- ಏ... ಅದ್ಯಾಕ ಹುಚ್ಚುಚ್ಚಾರ ಮಾತಾಡಕಹತ್ತೀ... ಸಾಕಾಗೈತಿ ನನಗ... ನಾ ಒಬ್ಯಾಕಿ... ರಗಡ ಕೆಲ್ಸ ಬಿದ್ದಾವ... ನನ ಕೈಯಲಿ ಹರಿತಾವೇನ?

- ನನಗ ಇಂದ ಸಾಲಿಗೆ ಕಳಿಸು ಮತ್ತ... ಬಿಡು... ನಾ ಒಬ್ಬಾಕಿನೇ... ಹೋಕ್ಕೇನೀ... ನಂಗೇನ ಸಾಲಿ ಹಾದಿ ತಿಳಿವೋಲ್ದೇನು?
- ಏ... ನೋಡ... ಮತ್ತ... ಒಬ್ಬಳೀ... ಹೋಕ್ಕೀಯಾ? ಏ... ಹುಚ್ಚುಖೋಡಿ...
- ನಾ... ಹೋಕ್ಕೇನೀ... ನಾ... ಹೋಕ್ಕೇನೀ... ನಾ... ಹೋಕ್ಕೇನೀ... ನಾ ಯಾರಿಗೂ ಹೆದರಾಂಗಿಲ್ಲ... ಇದ... ನಾ ಹೊಂಟೆ...

– ನಿಂದ್ರು... ಗೌರಾ... ನಿಂದ್ರು... ನಿಂದ್ರು...

• ಯಾಕ? ಇನ್ನೂ ಏನಾರ ಕೆಲ್ಸ ಅದಾವೇನು?

– ರೊಟ್ಟಿ ಕಟಗೊಂಡು ಹೋಗು ಮಗಳಾ... ಬೆಳಗ್ಯಾನ... ನೀಯೇನ ಉಂಡೇ ಇಲ್ಲಾ...

(ನಮ್ಮ ಮಾನಸ, ಫೆಬ್ರವರಿ ೨೦೦೫)



# 'ಭಯೋತ್ಪಾದಕ' ಇಂಗ್ಲಿಷ್: ಒಂದು ಪತ್ರ

'ನನಗೆ ಇಂಗ್ಲಿಷ್ ಗೊತ್ತಿದ್ದರೂ ಮಾತನಾಡಲು ಹಿಂಜರಿಕೆ. ಶಬ್ದ ಜೋಡಣೆ, ವ್ಯಾಕರಣ ಎಲ್ಲಿ ತಪ್ಪಾಗುತ್ತೋ ಎಂಬ ಭಯವಿದೆ' ಎಂದು ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿಯವರು ಅಲವತ್ತುಕೊಂಡಿದ್ದಾರೆ. (ಪ್ರಜಾವಾಣಿ: ೧೮.೧೦.೦೬) ನಮ್ಮ ರಾಜ್ಯದ ಎಲ್ಲ ಪ್ರಜೆಗಳಿಗೆ ಸರ್ವೇ ಸಾಧಾರಣವಾಗಿ ಕನ್ನಡ ಅರ್ಥವಾಗುತ್ತದೆ. ಹೀಗಿದ್ದಾಗ್ಯೂ ಕುಮಾರಸ್ವಾಮಿಯವರಿಗೆ ಇಂಗ್ಲಿಷ್ ಮಾತನಾಡುವ ತುರ್ತು, ಮಾತನಾಡಲಾಗದ ಹಿಂಜರಿಕೆ, ಭಯ ಅದೇಕೋ ಅರ್ಥವಾಗುತ್ತಿಲ್ಲ. ಅವರನ್ನು ಭಯಕ್ಕೀಡು ಮಾಡಿರುವ 'ಭಯೋತ್ಪಾದಕ' ಇಂಗ್ಲಿಷನ್ನು ಒಂದನೇ ತರಗತಿಯಿಂದಲೇ ನಮ್ಮ ಮಕ್ಕಳ ಮೇಲೆ ಹೇರಬೇಡಿ ಎಂಬಷ್ಟೇ ಅವರಲ್ಲಿ ನನ್ನ ಪ್ರಾರ್ಥನೆ.

ಇಂಗ್ಲಿಷ್ ಕಲಿತರೆ ಸಿರಿವಂತರಾಗಬಹುದು, ಬಡತನ ನೀಗುತ್ತದೆ ಎಂದೂ ಮಾನ್ಯ ಮುಖ್ಯಮಂತ್ರಿಗಳು ಹೇಳಿರುತ್ತಾರೆ. ಹಾಗಿದ್ದರೆ, ಶ್ರೀಯುತರಾದ ಎಚ್.ಡಿ. ದೇವೇಗೌಡ ಹಾಗೂ ಅವರ ಮಕ್ಕಳು ಅತ್ಯುನ್ನತ ಹುದ್ದೆಗಳನ್ನು ಅಲಂಕರಿಸಿದ್ದು ಮತ್ತು ಅಲಂಕರಿಸಿರುವುದು ಕನ್ನಡದಿಂದಲೋ ಇಂಗ್ಲಿಷಿನಿಂದಲೋ? ಎಲ್ಲೆಡೆ ಮಿತಿ ಮೀರಿರುವ ಭ್ರಷ್ಟಾಚಾರ; ಕೆಲವೇ ವರ್ಗಗಳು ಗುಡ್ಡೆ ಹಾಕಿಕೊಂಡಿರುವ ಆಸ್ತಿ ಪಾಸ್ತಿ; ಇನ್ನೂ ಚಾಲ್ತಿಯಲ್ಲಿರುವ ಜಾತಿ ಪದ್ಧತಿ–ಅಸ್ಪೃಶ್ಯತೆ; ಸಾಮಾನ್ಯ ಪರಿಜ್ಞಾನವನ್ನೂ ನೀಡದಿರುವ ಮತ್ತು ಸಮುದಾಯದಲ್ಲಿ ಹಂಚಿಕೊಂಡು ತಿಂದು ಕೂಡಿ ಬಾಳಬೇಕು ಎಂದು ತಿಳಿಸಿಕೊಡದ, ಕನಿಷ್ಠ ಮಾನವೀಯತೆ ಕಲಿಸದ ಶಿಕ್ಷಣ ಪದ್ಧತಿ; ಕುಡಿತ, ಗುಟ್ಕಾ–ಮಟ್ಕಾ, ಲಾಟರಿ ಮುಂತಾದವುಗಳು ಬಡತನಕ್ಕೆ ಕಾರಣವಾಗಿದೆಯೆಂದು ತಿಳಿಯದೆ, ಇಂಗ್ಲಿಷನ್ನು ಸಿರಿವಂತಿಕೆಗೆ ತಳಕು ಹಾಕುವುದು ತಮಾಷೆ ಅನ್ನಿಸುತ್ತದೆ. ಕನ್ನಡಕ್ಕೆ ಕರ್ನಾಟಕದ ಜನತೆಯ ಆಸೆ–ಅಗತ್ಯಗಳನ್ನು ಪೂರೈಸುವ ಶಕ್ತಿ ಇದೆಯೇ ಹೊರತು ದುರಾಸೆಯನ್ನಲ್ಲ! ನಮ್ಮ ಮುಖ್ಯಮಂತ್ರಿಗಳಿಂದ ಹಿಡಿದು ಅವರ ಸಚಿವ ಸಂಪುಟ, ವಿರೋಧ ಪಕ್ಷದ ಶಾಸಕರೆಲ್ಲರೂ ತಂತಮ್ಮ ಮಾತೃ ಅಥವಾ ಪರಿಸರದ ಭಾಷೆಯಲ್ಲಿ ಕಲಿತು ಈ ಹೊತ್ತು ಪ್ರಜಾಪ್ರಭುತ್ವ ವ್ಯವಸ್ಥೆಯ ಅತ್ಯುನ್ನತ ಸ್ಥಾನ ಗಳಿಸಿದ್ದಾಗ್ಯೂ, ತಮ್ಮ ಮಕ್ಕಳು/ಮೊಮ್ಮಕ್ಕಳನ್ನು ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೇ ಕಳಿಸಿರುತ್ತಾರೆ. ಇದು ವಿಪರ್ಯಾಸ!

ಕುಮಾರಸ್ವಾಮಿಯವರು ಕರ್ನಾಟಕದ ಮುಖ್ಯಮಂತ್ರಿಯಾಗಿ, ಜಗತ್ತಿನಲ್ಲಿ ಫ್ರಾನ್ಸ್ ಅಥವಾ ಜರ್ಮನಿಗಳ ಅಧ್ಯಕ್ಷರುಗಳು ಅಥವಾ ಚೀನಾ ಅಥವಾ ಜಪಾನ್‌ಗಳ ಪ್ರಧಾನಮಂತ್ರಿ

ಗಳಿಗಿಂತ ಹೆಚ್ಚಿನ ಮಹತ್ವದ ಅಥವಾ ಜವಾಬ್ದಾರಿಯ ಸ್ಥಾನಮಾನವನ್ನೇನೂ ಹೊಂದಿಲ್ಲ. ಆದರೆ, ಅವರೆಲ್ಲ ನಮ್ಮ ಮುಖ್ಯಮಂತ್ರಿಗಳಂತೆ ಇಂಗ್ಲಿಷ್ ಬಗ್ಗೆ ಕೀಳರಿಮೆಯಿಂದ ನರಳದೆ, ವಿಶ್ವ ವೇದಿಕೆಗಳಲ್ಲೂ ಹೆಮ್ಮೆಯಿಂದ ತಂತಮ್ಮ ದೇಶಭಾಷೆಗಳಲ್ಲಿ ಮಾತನಾಡುತ್ತಾರೆ. ನಮ್ಮ ರಾಜಕಾರಣಿಗಳಂತೆ ಬೌದ್ಧಿಕ ದಾರಿದ್ರ್ಯದಿಂದ ನರಳದ ಅವರು, ಜಾಗತಿಕ ಮಟ್ಟದ ಎಲ್ಲ ಜ್ಞಾನವನ್ನು ತಂತಮ್ಮ ದೇಶ ಭಾಷೆಗಳಿಗೆ ತಂದುಕೊಳ್ಳುವ ವ್ಯವಸ್ಥೆ ಮಾಡುವ ಬದ್ಧತೆ ಹಾಗೂ ದಿಗಂತ ದೃಷ್ಟಿ ಹೊಂದಿದವರಾಗಿದ್ದಾರೆ. ಆದರೆ ರಾಜಕೀಯ ಪಟ್ಟುಗಳನ್ನು ಹಾಕುತ್ತಾ, ದುಡ್ಡು ಮಾಡುವ ದಂಧೆಯನ್ನೆ ಮೂಲ ಕಸುಬು ಮಾಡಿಕೊಂಡಿರುವ ನಮ್ಮ ನಾಯಕರು, ಇದರ ಭಾಗವಾಗಿಯೇ ಒತ್ತಡಕ್ಕೆ ಸಿಕ್ಕಾಗ, ತಮ್ಮ ಭಾಷೆಯೇ ಜಾಗತಿಕವಾಗಿ ಅಪ್ರಸ್ತುತವಾಗುತ್ತಿದೆ ಎಂದು ಘೋಷಿಸಲು ಹೇಸದವರಾಗುತ್ತಾರೆ. ಏಣಿ ಹತ್ತಿದ ಮೇಲೆ ಅದನ್ನು ಒದ್ದರೆ ಏನಾಗುತ್ತದೆ ಎಂಬುದನ್ನು ಕಾಲವೇ ಅವರಿಗೆ ತಿಳಿಸಿಕೊಡಬೇಕು.

ಕರ್ನಾಟಕದಲ್ಲಿ ಐವತ್ತು ಪ್ರತಿಶತ ಇರುವ ಮಹಿಳೆಯರಿಗೆ ಸಚಿವ ಸಂಪುಟದಲ್ಲಿ ನಾಮಕಾವಸ್ಥೆಗಾದರೂ ಒಂದು ಸ್ಥಾನ ಕೊಡದ, ತತ್ವ–ಸಿದ್ಧಾಂತಗಳಲ್ಲಿ ನಂಬಿಕೆ ಇಲ್ಲದ, ಕೇವಲ ಓಟ್ ಬ್ಯಾಂಕ್ ರಾಜಕಾರಣದ ಮೂಲಕ ತನ್ನ ಸ್ಥಾನ–ಮಾನ ಭದ್ರಪಡಿಸಿಕೊಳ್ಳಲು ಇಂಗ್ಲಿಷ್ ಶಿಕ್ಷಣದ ರಾಜಕಾರಣದ ಮೂಲಕ ಹಿಂದುಳಿದ ಮತ್ತು ದಲಿತ ಓಟ್ ಬ್ಯಾಂಕ್‌ಗೆ ಕೈ ಹಾಕಿರುವ ಸಮ್ಮಿಶ್ರ ಸರ್ಕಾರ, ಪ್ರಾಥಮಿಕ ಶಾಲೆಗಳಲ್ಲೂ ಇಂಗ್ಲಿಷ್ ಮಾಧ್ಯಮ ಶಿಕ್ಷಣಕ್ಕೆ ಭದ್ರ ಬುನಾದಿ ಹಾಕುತ್ತಿದೆ. ಅದರ ಮೊದಲ ಹೆಜ್ಜೆಯೇ 'ಒಂದನೇ ತರಗತಿಯಿಂದಲೇ ಇಂಗ್ಲಿಷ್' ಎಂದು ತಿಳಿಯಬೇಕಾಗುತ್ತದೆ.

ಒಂದೆಡೆ ರೈತರು ಶೂನ್ಯ ಬಂಡವಾಳದ ನೈಸರ್ಗಿಕ ಕೃಷಿಗೆ ಮರಳುತ್ತಿದ್ದಾರೆ. ಮತ್ತೊಂದೆಡೆ ಪರಿಸರದ/ತಾಯಿ ಭಾಷೆ ಬಿಟ್ಟು ಅನ್ಯ ಭಾಷಾ ಶಿಕ್ಷಣಕ್ಕೆ ಮುಗಿಬೀಳುತ್ತಿದ್ದಾರೆ. ಇದನ್ನು ಹೇಗೆ ಅರ್ಥೈಸಬೇಕೋ ತಿಳಿಯದಾಗಿದೆ.

('ಸಂವಾದ', ಡಿಸೆಂಬರ್ ೨೦೦೬)

●

# ಸ್ತ್ರೀಮತ

ದೂರವಾಣಿ ಸಂಭಾಷಣೆಯ ರೂಪದಲ್ಲಿರುವ ಈ ನಿರೂಪಣೆಗಳು 'ವಿಕ್ರಾಂತ ಕರ್ನಾಟಕ' ವಾರಪತ್ರಿಕೆಗಾಗಿ ಆಗಸ್ಟ್ ೨೪, ೨೦೦೭ರಿಂದ ಫೆಬ್ರವರಿ ೧೩, ೨೦೦೯ರ ಸಂಚಿಕೆಗಳವರೆಗೆ 'ಸ್ತ್ರೀಮತ' ಶೀರ್ಷಿಕೆಯಡಿ ತಿಂಗಳಿಗೊಂದರಂತೆ ಬರೆದ ಅಂಕಣ ಬರಹಗಳು.

# ಸೀರಿಯಲ್ ಈಸ್ ಮೈ ಬೆಸ್ಟ್ ಫ್ರೆಂಡ್!

* ಹಲೋ...

– ಹಲೋ... ಹಲೋ... ಯಾರು?

* ಅಯ್ಯಾ... ನಾನು ಕಣೇ...

– ಹ್ಹಹ್ಹ... ಯಾಕೆ ದನಿ... ಒಳ್ಳೆ ಗವಿಯಿಂದ ಬಂದ ಹಾಗೆ ಬರ್ತಾ ಇದೆ...

* ನೆಗಡಿ ಕಣೇ... ಹಾರಿಬಲ್... ಎಷ್ಟು ಸತಾಯಿಸ್ತಿದೆ ಅಂದ್ರೆ ದೊಡ್ಡ ಕಾಯಿಲೆ ಬಂದ ಹಾಗೆ ಆಗಿದೆ.

– ಶೀತ ಆದ್ರೆ ಒಳ್ಳೇದು ಕಣೇ... ಅದು ಕಾಯಿಲೆ ಅಲ್ಲಾ ಗೊತ್ತಾ?

* ಏನಂದೆ ಕಾಯಿಲೆ ಅಲ್ಲವಾ? ಜೋಕ್ ಮಾಡ್ತಾ ಇದೀಯಾ?

– Cold is in fact, nature's simplest mechanism of eliminating water accumulated in the system. ಒಂಚೂರು ಲಿಂಬೆ–ಜೇನು ಬಿಸಿನೀರಿನಲ್ಲಿ ಹಾಕಿ ಕುಡಿ ಆರಾಮಾಗುತ್ತೆ... ಆಮೇಲೆ ಬೆಚ್ಚಗೆ ಹೊದ್ದುಕೊಂಡು ಮಲಕ್ಕೋ...

* ನನಗೇನೊ ಮಲಗೋಕೆ ಇಷ್ಟಾನೇ... ಆದ್ರೆ ಬಟ್ಟೆ, ಪಾತ್ರೆ, ಕಸ...

– ಯಾಕೆ ಕೆಲಸದವಳು ಬಂದಿಲ್ವಾ?

* ನನ್ನ ಅಸಿಸ್ಟೆಂಟ್‌ಗೂ ನೆಗಡಿ...

– ಗಂಡ, ಮಗ, ಮಗಳು, ಅತ್ತೆ...

* ಅವರಾ? ನಾನು ಕಾಯಿಲೆ ಬಿದ್ದಿದ್ದೇ ತಪ್ಪು ಅನ್ನೋ ಹಾಗೆ ರೇಗಾಡ್ತಾ ಇದಾರೆ...

– ಹ್ಹಹ್ಹ... ಮಳೆ ಜೋರಾ?

* ಹೂಂ... ಒಂದೇ ಸಮಾ ಸುರಿತಾ ಇದೆ. ನದಿಗೆ ಅಷ್ಟೇ ಅಲ್ಲ ಬೀದಿಗೂ ನೀರು ಬಂದಿದೆ... ಮಂಟಪ ಮುಳುಗಿದೆ... ಹತ್ತು ಕಣ್ಣು ಬೇಕು ನೋಡೋಕೆ.

– ಹ್ಹಹ್ಹ... ಸಾಕಾ ಹತ್ತು? ಆಗ ನಿಂಗೆ ಕಣ್ಣಮ್ಮ ಅಂತ ಕರಿಬಹುದು... ನೀನೇ ಪುಣ್ಯವಂತೆ, ನಿಂದೂ ಅಂತ ಒಂದು ಊರಿದೆ, ಊರಲ್ಲಿ ದೊಡ್ಡ ನದಿಯಿದೆ... ನದಿಯೊಳಗೆ ನೀರಿದೆ... ನೀರಲ್ಲಿ ಮೀನಿದೆ...

* ವಾಹ್, ವಾಹ್... ನಿಮ್ಮೂರಲ್ಲಿ ಬೆಟ್ಟ ಇಲ್ವಾ? ಬೆಟ್ಟದ ಮೇಲೆ...

– ಸರಿ, ಸರಿ... ಏನು ಫೋನ್ ಮಾಡಿದ್ದು? ತಿಂಗಳಾಯ್ತು ನೀ ಮಾಡ್ದೆ... ಮೊದಲು ದಿನಾ ಮಾಡ್ತಾ ಇದ್ದೆ...

* ನಂಗೇನು? ದಿನಕ್ಕೆ ನಾಕು ಸಾರಿ ಬೇಕಾದ್ರೂ ಮಾಡ್ತೀನಿ... ಆದ್ರೆ ನಮ್ಮನೆಯವರು ಬಿಲ್ ಜಾಸ್ತಿ ಆಯ್ತು ಅಂತ ಬಯ್ತಾರೆ ಕಣೇ... ಈ ಸಲ ಏನಾದ್ರೂ ಬಿಲ್ ಜಾಸ್ತಿಯಾದ್ರೆ ಫೋನೇ ತೆಗೆಸಿ ಹಾಕ್ತೀನಿ ಅಂತ ವಾರ್ನಿಂಗ್ ಕೊಟ್ಟಿದಾರೆ... ಏನಿಲ್ಲ... ಪೇಪರಲ್ಲಿ ಒಂದು ಒಳ್ಳೆ ಕಾರ್ಟೂನು ಬಂದಿದೆ, ನೋಡು ಅಂತ ಹೇಳೋಕೆ ಫೋನ್ ಮಾಡ್ದೆ...

– ಪೇಪರ್ರಾ? ನಿಲ್ಲಿಸಿಬಿಟ್ಟಿದೀವೀ ಕಣೇ...

* ಯಾಕೆ?

– ನಮ್ಮನೆಯವರು ಟಿ.ವಿ.ನಲ್ಲೇ ನ್ಯೂಸ್ ನೋಡ್ತಾರೆ... ನನ್ನ ಮಗ, ಏಳ್ತಿದ್ದಂಗೇ ಟ್ಯೂಷನ್‌ಗೆ ಹೋಗಿ ಅಲ್ಲಿಂದಾನೆ ಕಾಲೇಜಿಗೆ ಹೋಗ್ತಾನೆ... ನಮ್ಮನೆಯವರಿಗೆ ಆಫೀಸಿನಲ್ಲೇ ಪೇಪರು ಸಿಕ್ಕುತ್ತೆ. ನನ್ನ ಮಗ ಬೇಕು ಅಂದ್ರೆ ಲೈಬ್ರರಿಗೆ ಹೋಗ್ತಾನೆ... ಕಾಲೇಜಲ್ಲೂ ಲೈಬ್ರರಿ ಇದೆಯಂತೆ...

* after all ತಿಂಗಳಿಗೆ ೭೦ ರೂಪಾಯಿ. ಅವರ ವಿಷಯ ಬಿಡು. ನಿಂಗೆ ಬೇಡವಾ? ನಾಕು ಅಕ್ಷರನಾದ್ರೂ ಕಣ್ಣಿಗೆ ಬೀಳೋದು ಬೇಡ್ವಾ? ಯಾಕೆ ಹೀಗಾಗಿದೀಯಾ?

– ಅಯ್ಯೋ ಏನಿರುತ್ತೆ ಪೇಪರಲ್ಲಿ... ಬರೀ ಮೋಸ, ದಗಾ, ವಂಚನೆ, ಕೊಲೆ, ಸುಲಿಗೆ, ಭ್ರಷ್ಟಾಚಾರ... ಒಂದು ಒಳ್ಳೆ ಸುದ್ದಿ ಇರಲ್ಲಾ...

* ಹೌದು ಅದನ್ನೆಲ್ಲ ಯಾರು ಮಾಡ್ತಿದಾರೆ ಹೇಳು...

– ಇನ್ಯಾರು ಜನ...

* ನೀನು ದನನಾ? ನಂದು ನಿಂದು ಎಲ್ಲರದ್ದೂ contribution ಇದೆ ತಿಳಕೋ... ನಿನ್ನ ಮನೇಲಿ ಅನಾಚಾರ ಆಗ್ತಾ ಇದ್ರೆ ಸುಮ್ನೇ ಕೈಕಟ್ಟಿ ಕೂರ್ತಿಯೋ ಅಥವಾ ಸುಧಾರಿಸ್ತಿಯೋ...

– ಅಯ್ಯೋ ಸಮಾಜಾನ ಸುಧಾರಿಸಲಿಕ್ಕೆ ಆಗುತ್ತೇನೆ?

* ಸಮಾಜ ಅಂದ್ರೆ ಇನ್ನೇನು? ದೊಡ್ಡ ಕುಟುಂಬ ಅಷ್ಟೇ... ನಮ್ಮ ನಮ್ಮ ಮನೇಲೀ ಸಣ್ಣದಾಗಿ ಏನು ಆಗ್ತಾ ಇರುತ್ತೋ ಅದೇ ದೊಡ್ಡ ಪ್ರಮಾಣದಲ್ಲಿ ಅಲ್ಲಿ ಕಾಣಿಸ್ತಾ ಇರುತ್ತೆ... ಅಲ್ಲವೇ ಜಗತ್ತಿನಲ್ಲಿ ನೀನೂ ಇದಿಯಪ್ಪಾ... ಸುತ್ತಮುತ್ತ ಏನು ನಡೀತಿದೆ ಅಂತಾದ್ರೂ ಗೊತ್ತಾಗೋದು ಬೇಡವಾ? ಹೋಗ್ಲಿ ಟಿ.ವಿ. ನ್ಯೂಸ್ ಆದ್ರೂ ನೋಡ್ತೀಯಾ?

– ನ್ಯೂಸಾ?! ಸೀರಿಯಲ್ ನೋಡ್ತೀನೀ...

* ಎಷ್ಟು ನೋಡ್ತೀಯಾ?

– ಒಂದು, ಎರಡು, ಮೂರು, ನಾಕು, ಐದು...

* ಗೊತ್ತಾಯ್ತು ಬಿಡು... ಮಧ್ಯಾಹ್ನ ಊಟ ಮಾಡಿ ಕೂತ್ರೆ ಸಂಜೆ ಕಾಫಿಗೆ ಬ್ರೇಕ್. ಆಮೇಲೆ ಒಂದಿಷ್ಟು ಚಪಾತಿ ಹಿಟ್ಟು ಕಲಸಿ, ಪಲ್ಯ ಹುರಿದು ಕೂತ್ರೆ ನ್ಯೂಸ್ ಟೈಂ ಬ್ರೇಕ್. ಊಟ ಮಾಡಿ ಕೂತ್ರೆ ರಾತ್ರಿ ಎರಡು ಹೆಣ ಬೀಳೋದು ನೋಡಿ ಮಲಗೋದು... almost eight hours...

– ಯಾಕೆ ಅಷ್ಟು ಕಿಚಾಯಿಸ್ತೀಯಾ? ನಾನು ನಿನ್ನ ಥರಾ ಇರೋಕೆ ಆಗುತ್ತಾ? ನನ್ನ ಟೇಸ್ಟ್ ನಂಗೆ! ಪಾಪ ಎಷ್ಟು ಕಷ್ಟಪಟ್ಟು ಸೀರಿಯಲ್ ತೆಗೆದಿರ್ತಾರೆ... ಹ್ಞ... ನಾವು ನೋಡದಿದ್ರೆ ಹೇಗೆ?

* ಇದಮ್ಮಾ ಮಾತು ಅಂದ್ರೆ... ಕಾಲೇಜಿನಲ್ಲಿದ್ದಾಗ ನೀನು ಎಷ್ಟು bright ಆಗಿದ್ದೆ. ಎಷ್ಟು ಚೆನ್ನಾಗಿ debateನಲ್ಲಿ participate ಮಾಡ್ತಾ ಇದ್ದೆ. ಎಷ್ಟು ಚೆನ್ನಾಗಿ ಹಾಡ್ತಾ ಇದ್ದೆ... ಈಗ ಒಂದಿಷ್ಟು ಬೇಯಿಸೋದು, ಸೀರಿಯಲ್ ನೋಡೋದು... ಅದರ ಗುಂಗಿನಲ್ಲೇ ಏನೋ ಕಾಟಾಚಾರಕ್ಕೆ ಒಂದಿಷ್ಟು ಬೇಯಿಸೋದು, ಅಷ್ಟೇ ತಾನೆ ನೀನು ಮಾಡ್ತಾ ಇರೋದು?

– ಹ್ಞಹ್ಞ... ಅಷ್ಟೇ ಅಲ್ಲಾ ಮದುವೆ ಸೀಸನ್‌ನಲ್ಲಿ ಚೆನ್ನಾಗಿ ಡ್ರೆಸ್ ಮಾಡ್ಕೊಂಡು, ಒಡವೆ ಹೇರಿಕೊಂಡು ಮದುವೆಗೆ ಹೋಗ್ತೀನಿ, ವೀಕ್‌ಎಂಡ್‌ನಲ್ಲಿ outing ಇದ್ದೇ ಇರುತ್ತೆ... ಟಿ.ಪಿ.ನಲ್ಲಿ ಬರೋ ಹೆಂಗಸರು ಡ್ರೆಸ್ ಮಾಡ್ತಾರಲ್ಲ ಹಾಗೆ ಸೀರೆ ಉಟ್ಕೊಂಡು ಬಿಂದಿ ಇಟ್ಕೊಂಡು ಕಿಟ್ಟಿಪಾರ್ಟಿ, ಆ ಪಾರ್ಟಿ, ಈ ಪಾರ್ಟಿ ಅಂತ ಹೋಗ್ತಾನೇ ಇರ್ತೀನಿ. Frankly speaking I have stopped thinking. ನಾನು ನಿನ್ನ ಹಳೇ ಪೂವಿ ಆಗಿ ಉಳಿದಿಲ್ಲಾ ಸುಮಾ... ನನ್ನ ಪ್ರಪಂಚಾನೇ ಬೇರೆ ಆಗಿದೆ... ನಾನು ತುಂಬಾನೆ ಬದಲಾಗಿದ್ದೀನಿ... ನಂಗೆ ಬೇರೆಯವರನ್ನ ಬದಲಿಸೋ ಶಕ್ತಿ ಇಲ್ಲಮ್ಮ... ಘರ್ಷಣೆ ಬೇಡಾ ಅಂತ ನಾನೇ ಬದಲಾದೆ... ನಿಂಗೆ ಅರ್ಥ ಆಗುತ್ತೆ ಅಂದುಕೊಂಡಿದ್ದೀನಿ...

* ಸಾರಿ... ಬೇಜಾರಾಯ್ತೇನೇ...?

– ಅಲ್ಲವೇ... ನೀನು ನನ್ನ ಬೆಸ್ಟ್ ಫ್ರೆಂಡ್; ನೀನು ಹೇಳದೆ ಇನ್ಯಾರು ಹೇಳಬೇಕು? ನಾವಿಬ್ಬರು ಒಟ್ಟಿಗೆ ನೀರಿಗೆ ಬಿದ್ವಿ... ಈಜಿದ್ವಿ... ಆದರೆ ನಾನು ಮತ್ತು ನೀನು ಸೇರಿದ ದಡ ಮಾತ್ರ ಬೇರೆ... ಬೇರೆ... ಅಷ್ಟೇ ಅಲ್ಲ... ನೀನು ನಿನ್ನ ಐಡೆಂಟಿಟಿನ ಉಳಿಸಿಕೊಂಡೆ but ನಾನು? completely lost...

* ಏ... upset ಆಗಬೇಡವೇ... ನಾನು ನಿಂಗೆ ಬೇರೆ ಏನೋ ಹೇಳಬೇಕೆಂದು ಫೋನ್ ಮಾಡ್ದೆ. ಮಾತು ಇನ್ನೆಲ್ಲೋ ಹೋಯ್ತು... ಅದೇನು ಅಂತ ಮರ್ತೇ ಹೋಯ್ತು

ನೋಡು... ಇರ್ಲಿ... ಬೇರೆ ಮಾತಾಡು... ನಿಮ್ಮ ತಾಯಿ ಏನಾದ್ರೂ ಬಂದಿದ್ರಾ? ಹೇಗಿದಾರೆ?

– ಓಹ್! ನಿಂಗೆ ಗೊತ್ತೇ ಇಲ್ವಾ... She is no more, ತಿಂಗಳ ಮೇಲಾಯ್ತು... ನಾನು ನಿಂಗೆ ಫೋನ್ ಮಾಡಿ ಹೇಳಬೇಕಿತ್ತು... ಸಾರಿ...

* ಒಂದು ಮಾತು ನೀನು ನನಗೆ ಹೇಳಬಹುದಿತ್ತು... ನಂಗೆ ವಿಷಯ ತಿಳಿಸಬೇಕು ಅಂತ ಅನ್ನಿಸಲೇ ಇಲ್ವಾ?

– ನಮ್ಮಮ್ಮ ಹೋದ ಮೇಲೆ... ನಿಂಗೆ ಅಂತ ಅಲ್ಲ... ಯಾರಿಗೂ ನಾನು ಫೋನ್ ಮಾಡಿಲ್ಲ... ನಮ್ಮಮ್ಮ ಇರೋ ತನಕ ನಾನು ಇನ್ನೂ ಮಗು ಅಂತ ಅನಿಸ್ತಾ ಇತ್ತು. ಈಗ ಯಾಕೋ... ಬೇರೇನೇ feeling ಬರ್ತಾ ಇದೆ... ನನ್ನನ್ನ ಈ ಭೂಮಿಗೆ ತಂದುಬಿಟ್ಟವಳು... ಎಲ್ಲಿ ಹೋದಳೋ... ಯಾರೋ... ಬಾಗಿಲು ತಟ್ತಾ ಇದಾರೆ... OK... ಮತ್ತೆ ಮಾಡ್ತೀನಿ.... OK. Bye ....

●

# ಧೂಂ ಮಚಾಲೆ ಧೂಂ ಮಚಾಲೆ ಧೂಂ...

* ಹಲೋ... ಹಲೋ... ರಜನೀನಾ?

– ನಾನು ಆಂಟೀ ರೀತೂ... ಮಮ್ಮೀ ಬ್ಯಾಂಕಿಗೆ ಹೋಗಿದಾರೆ.

* ಹೇಗಿದೀಯಾ ರೀತು... ಇವತ್ತು ರಜಾನಾ?

– ನಂಗೆ ರಜಾ... ಮಮ್ಮಿಗೆ ಗೊತ್ತಿಲ್ಲ ಆಂಟೀ... ಲೇಟಾಗಿ ಬ್ಯಾಂಕಿಗೆ ಹೋದ್ರು...

* ಹೇಗೀದೀಯಾ ರೀತೂ?

– Super ಆಗಿದೀನಿ ಆಂಟೀ...

* ಏನೋ ಗಲಾಟೆ ಕೇಳಿಸ್ತಾ ಇದೆ...

– ಹಹ್ಹ... ಮ್ಯೂಸಿಕ್ ಆಂಟೀ... ಸಕತ್ ಆಗಿದೆ... ಫ್ರೆಂಡ್ಸ್ ಬಂದಿದಾರೆ... ಎಂಜಾಯ್ ಮಾಡ್ತೀದೀವಿ ಆಂಟಿ ಅಷ್ಟೇ...

* ಆದ್ರೂ ಅದೆಂತಾ ಮ್ಯೂಸಿಕ್ಕೋ ಅಷ್ಟು ಗಲಾಟೆ... ಅದಿರ್ಲಿ, ಕ್ಲಾಸಸ್ ಶುರು ಆಗಿದೆಯಾ? Test ಆಯ್ತಾ? ಯಾವಾಗ ಪರೀಕ್ಷೆ?

– ಅಯ್ಯೋ Testಗೇನು ಆಂಟೀ ನಡೀತಾನೇ ಇರುತ್ತೆ... ನೀವು ಸಂಜೆ ಫೋನ್ ಮಾಡಿ ಆಂಟೀ... OK, Bye...

* ತಡಿ ತಡೀ... ಅಮ್ಮ ಎಷ್ಟು ಹೊತ್ತಿಗೆ ಬರ್ತಾರೆ?

– ಮಮ್ಮೀನಾ? ನಂಗೊತ್ತಿಲ್ಲ ಆಂಟೀ... ನಾನು ಸಂಜೆಗೆ ಟ್ಯೂಷನ್‌ಗೆ ಹೋಗ್ತೀನಲ್ಲಾ... ವಾಪಸು ಸೆವೆನ್‌ಗೆ ಬಂದಾಗ ಬಂದಿರ್ತಾರೆ... ಒಂದೊಂದು ಸಲ eight thirtyನೂ ಆಗುತ್ತೆ.

* * *

* ಹಲೋ ರಜನೀನಾ? ನಾನು ಕಣೇ ರತ್ನ...

– ಹಲೋ ಹಲೋ... ಥೂ ದರಿದ್ರ... ಹುಟ್ಟೇ ಇಲ್ಲ ಅನ್ನಿಸಿಬಿಡ್ತಿನೀ ನೋಡು... ಹಲೋ...

* ಹಲೋ ರಜನೀ... ಯಾಕೆ ಕೇಳಿಸ್ತಾ ಇಲ್ವಾ?

– ಹಲೋ... ಏ ಗೂಜೆ... ಟಿ.ವಿ. ವಾಲ್ಯೂಮ್ ಕಡಿಮೆ ಮಾಡು... ಹಲೋ...

* ನಾನು ಕಣೇ ರತ್ನ... ಏನೇ ಫೋನ್ ಎತ್ತಿತ್ತದಂಗೆ ಬೈಯ್ತಾ ಇದೀಯಾ?

– ಏ ನಿಂಗಲ್ಲವೇ... ರೀತೂಗೆ... ದರಿದ್ರದವು...

* ನಿನ್ನೆ ಫೋನ್ ಮಾಡಿದ್ದೆ... ನೀನು ಮಾಡ್ತೀಯಾಂತ ಕಾಯ್ತಾ ಇದ್ದೆ. ಯಾಕೆ, ರೀತೂ ಹೇಳಲಿಲ್ಲವಾ? ಏನ್ಸಮಾಚಾರ, ರಾಂಗ್ ಆಗಿದ್ದೀಯಲ್ಲಾ...

– ಇಲ್ಲ ಕಣೇ, ರೀತೂ ಹೇಳಲಿಲ್ಲ... ನಿನ್ನೆ ಹಬ್ಬ ಅಲ್ವೇನೇ, ರಜಾ ಆದ್ರೂ ಸ್ವಲ್ಪ pending clear ಮಾಡೋಣಾಂತ ಹೋಗಿದ್ದೆ. ವಿಪರೀತ pressure ಕಣೆ... day to day work attend ಮಾಡೋದ್ರಲ್ಲೇ ಸಾಕಾಗಿ ಹೋಗುತ್ತೆ. ಎಲ್ಲ computerise ಮಾಡಿದಾರೆ. ಸ್ಟಾಫೇ ಇಲ್ಲ. ಒಂದು ನಿಮಿಷ ಉಸಿರಾಡೋದಕ್ಕೂ ಪುರುಸೊತ್ತಿಲ್ಲ. ನಾಳೆಯಿಂದ inspection ಬೇರೆ ಇದೆ. ವರಮಹಾಲಕ್ಷ್ಮಿ ವ್ರತ ಬೇರೆ ಹಿಡಿದುಬಿಟ್ಟಿದೀನಲ್ಲಾ... ಬಿಡೋಕೆ ಆಗೊಲ್ಲ. ಇಪ್ಪತ್ತು ವರ್ಷದಿಂದ ಮಾಡ್ತಾ ಇದೀನಿ... ಒಂದು ಸಲಾನೂ miss ಮಾಡಿಲ್ಲ. ಬೆಳಿಗ್ಗೆ ನಾಲ್ಕಕ್ಕೆ ಎದ್ದು ಮಡಿ ಉಟ್ಕೊಂಡು ದೇವಿಗೆ ಅಲಂಕಾರ ಮಾಡಿ, ಹಬ್ಬದಡುಗೆ ಮಾಡಿ ನೈವೇದ್ಯ ಮಾಡಿ ಎಲ್ಲ ಮುಗಿಸಿ ಹನ್ನೊಂದಕ್ಕೆ ಬ್ಯಾಂಕಿಗೆ ಹೋದೆ. ಮನೆಗೆ ಬಾರೆ ಕುಂಕುಮ ತಗೊಂಡು ಹೋಗುವಿಯಂತೆ...

* ನಾ ಬಂದ್ರೆ ನೀ ಎಲ್ಲಿರ್ತೀಯಾ? ಫೋನ್ ಮಾಡೋದಕ್ಕೂ ನಿನಗೆ ಪುರುಸೊತ್ತಿಲ್ಲ.. ತುಂಬಾ ಬ್ಯೂಸಿ ನೀನು... ಅಂದಂಗೆ ನಿನ್ನೆ ಎಷ್ಟೊತ್ತಿಗೆ ಬಂದೆ.

– ಬೇಗ ಬಂದೆ ಕಣೆ... ಬಂದ್ರೆ ಏನಾಗಿದೆ ಗೊತ್ತಾ?

* ಪ್ಚ, ಏನಾಗಿತ್ತು?... ಏನಾಯ್ತೆ?

– ಒಳಗೆ ದೊಡ್ಡದಾಗಿ ಮ್ಯೂಸಿಕ್ ಹಾಕ್ಕೊಂಡಿದ್ದಾರೆ... ಬಾಗಿಲು ತೆಗೀತಾ ಇಲ್ಲ... ಬೆಲ್ ಮಾಡಿದ್ರೂ ಕೇಳಿಸಲಿಲ್ಲವೇ... ಕೊನೆಗೆ ಹಿತ್ತಲ ಕಡೆಯಿಂದ ಹೋದ್ರೆ...

* ಹೌದಾ... ಏನಾಯ್ತು?

– ನಮ್ಮ ರೀತು ಮತ್ತವಳ ಫ್ರೆಂಡ್ಸ್ ಥಕಥಕ ಕುಣೀತೀದಾರೆ... ಕೂದಲೆಲ್ಲಾ ಕೆದರಿಕೊಂಡು... tight jeans, short tops... ಇನ್ನೂ SSLC... ಏನು ರೋಗ ಅಂತೀನಿ... ದಿನಾಲು uniformನಲ್ಲಿ ಇರ್ತಾರಲ್ಲ, ಗೊತ್ತಾಗಲ್ಲ... ಟೇಬಲ್ ಮೇಲೆ ಪೆಪ್ಸಿ, ಚಿಪ್ಸ್, ಕೇಕು ಇನ್ನೂ ಏನೇನೋ ಹರಡಿಕೊಂಡು ಇಟ್ಟಾಡಿಬಿಟ್ಟಿದ್ದಾರೆ. ನನ್ನ ಮಗನೂ ಒಳ್ಳೆ ಡಿಂಗೊ ಥರಾ ಡ್ರೆಸ್ ಮಾಡಿಕೊಂಡು ಅವರ ಜೊತೆ ಸೇರಿಕೊಂಡಿದಾನೆ. ಕೈಯಲ್ಲಿ ಪೆಪ್ಸಿ ಬೇರೆ... ನನಗೆ ಶಾಕ್... ಶಾಕ್... ತಲೆ ಕೆಟ್ಹೋಯ್ತು ನನಗೆ...

* Cool down cool down!

– ಅಲ್ವೆ ನಾವು ನಮ್ಮ ಮಕ್ಕಳನ್ನು ಏನೋ ಅಂದುಕೊಂಡಿರ್ತೀವೀ... ನಾವು ಎದುರಿಗಿಲ್ಲ ಅಂದ್ರೆ ಇದೇ ತಾನೇ ಮಾಡೋದು... ಹಬ್ಬದಡುಗೆ ಮಾಡಿಟ್ಟು ಹೋಗಿದ್ದೆ.

ಯಾರಾದ್ರೂ ಮುಟ್ಟಿದ್ರೆ ಕೇಳು! ಪೆಪ್ಸಿ, ಚಿಪ್ಸು ತಿಂದುಕೊಂಡು ಕಾಲ ಹಾಕಿದ್ದಾರೆ. ದೇವರ ಮನೇಲಿ ಅಲಂಕಾರ ಮಾಡಿರೋ ಲಕ್ಷ್ಮಿ... ಹೊರಗೆ ಈ ದರಿದ್ರ ಕುಣಿತ... ಒಂದು ಕ್ಷಣ ಇದೇನು ಹಬ್ಬದ ದಿನಾನಾ, ಇದು ನನ್ನ ಮನೇನಾ, ಇವರು ನನ್ನ ಮಕ್ಕಳ ಅಂತ ಗಾಬರಿ ಆಯ್ತು ಕಣೇ...

* ಯಾಕಿಷ್ಟು excite ಆಗ್ತೀಯಾ? cool down...

– ಆಗ್ದೆ? ಈ ಸಲ ನನ್ನ ಮಗನಿಗೆ mathsನಲ್ಲಿ ಬರೇ 24! ಜಸ್ಟ್ ಪಾಸ್ ಕೂಡಾ ಇಲ್ಲ. ನಂಗೆ ತಲೆ ಬಿಸಿ ಆಗಿದೆ.

* ಅಯ್ಯೋ ನಮ್ಮ ರವೀದು ಅದೇ ಕತೆ ಕಣೆ. ನಾನು ಚೆನ್ನಾಗಿ ಮಾಡಿದ್ದೆ, marks ಕೊಟ್ಟಿಲ್ಲ ಅಂತ ನನ್ನ ಯಾಮಾರಿಸಕ್ಕೆ ನೋಡ್ದ. ನಾನು ಗುಟ್ಟಾಗಿ ಅವನ ಕ್ಲಾಸ್ ಟೀಚರ್ ಹತ್ರ ಮಾತಾಡ್ದೆ. ಈ ಸಲ ದಬ್ಬಿದೀವಿ... ಮುಂದೆ ಕಷ್ಟ... take care ಅಂದ್ರು. ನಾನು gold medalist. ನಮ್ಮನೆಯವರೂ ಅಷ್ಟೆ, ಕಮ್ಮಿ ಏನಲ್ಲ. ಇವನ್ಯಾಕೆ ಇಷ್ಟು ಪಡಪೋಸಿ ಯಾಗಿದಾನೋ... ಕ್ಲಾಸ್ ಬಂಕ್ ಮಾಡಿ ಸಿನಿಮಾಗೆಲ್ಲ ಹೋಗ್ತಾನೆ ಕಣೆ! ನಮ್ಮನೆಯವರ ಸಿಟ್ಟು ಗೊತ್ತಲ್ಲ... ಗೊತ್ತಾದ್ರೆ ಚಮಡಾ ಸುಲಿದುಬಿಡ್ತಾರೆ... ಹೇಳಂಗಿಲ್ಲ, ಬಿಡಂಗಿಲ್ಲ...

– ಹೌದೇನೇ, ಅಷ್ಟು ಮುಂದುವರೆದಿದಾನಾ? ಬೇರೆಯವರ ಮಕ್ಕಳನ್ನ ನೋಡಿದೀಯಾ... ಎಷ್ಟು ಚೂಟಿಯಾಗಿರ್ತಾರೆ! ಆಟ–ಪಾಠ ಎಲ್ಲದರಲ್ಲೂ ಮುಂದಿರ್ತಾರೆ... ನಮ್ಮವೋ ಬರೀ ಸುಖ ಪಡೋಕ್ಕೆ ಹುಟ್ಟಿದೀವಿ ಅಂದ್ಕೊಂಡಿವೆ... ನಮ್ಮ ಕಡೆ ಒಂದು ಮಾತಿದೆ... ಗತಿಗೆಟ್ಟೋರಿಗೆ ಗಳಿಸೋ ಆಸೆ, ಮತಿಗೆಟ್ಟೋರಿಗ ಕಳೆಯೋ ಆಸೆ ಅಂತ. ಏನು ಕಾದಿದೆಯೋ ಇವರಿಗೆ ಮುಂದೆ...

* ಏ ಸಾಕು ಸುಮ್ನಿರೇ... ದೂರದಿಂದ ಎಲ್ಲ ಚಂದವಾಗೇ ಕಾಣುತ್ತೆ. ನಿನ್ನ ತಟ್ಟೇಲಿ ನೊಣ ಬಿದ್ದಿದ್ರೆ ಅವರ ತಟ್ಟೇಲಿ ಹೆಗ್ಗಣಾನೇ ಬಿದ್ದಿರುತ್ತೆ. ನೀನೇನು ಹತ್ರ ಹೋಗಿ ಕಂಡಿದ್ದೀಯಾ! ಅಲ್ವೇ, ನಮ್ಮ ಮಕ್ಕಳೇನು ಆಕಾಶದಿಂದ ಉದುರೀದಾವಾ? ಎಷ್ಟೆಂದರೂ ನಮ್ಮ ರಕ್ತ ಮಾಂಸ ಹಂಚಿಕೊಂಡು ಹುಟ್ಟಿದೋವು... ನಮ್ಮ ಬುದ್ಧೀನೇ ಪಡೆದು ಬಂದಿರುತ್ವೆ. ಅವಕ್ಕೆ ಬಯ್ಯೋದು ನಮ್ಮನ್ನ ನಾವೇ ಬಯ್ಕೊಂಡಂಗೇ...

– ಹಹ್ಹ... ಹಹ್ಹ... ಚನ್ನಾಗಿ ಹೇಳ್ದೆ. ಹಂಗಾರೆ ಇಷ್ಟೂ ಹೊತ್ತು ಕಾಸು ಖರ್ಚು ಮಾಡಿ ನಮ್ಮನ್ನೇ ನಾವು ಬೈದುಕೊಂಡ ಹಾಗಾಯ್ತು! ಏ ಬೇಗ ಹೇಳೇ ಏನು ಫೋನ್ ಮಾಡಿದ್ದು? ಟೆಲಿಫೋನ್ ಬಿಲ್ ಏರ್ತಾ ಇದೆ! ಗೊತ್ತಿದೆ ತಾನೇ...

* ನಂಗ ಹಳದಿ ದಾಸವಾಳದ ಕಟಿಂಗ್ ಬೇಕಿತ್ತು. ಯಾವಾಗ ಬರ್ಲಿ ಹೇಳು...

– ನಾಳೆ ಸಂಜೆ ಮೇಲೆ ಬಾ. ಹೊರಡೋ ಮೊದಲು ಬ್ಯಾಂಕಿಗೆ ಒಂದು ರಿಂಗ್ ಕೊಡು. ಹಾಂ ಬರಕೋ ನನ್ನ ಬ್ಯಾಂಕಿನ ನಂಬರು...

●

# ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು

* ಹಲೋ... ವಂದೂ...

– ಹೇಳೇ... ಎಷ್ಟು ದಿನ ಆಯ್ತು... ನಂಗೆ ಎಷ್ಟು ಖುಷಿಯಾಗ್ತಿದೆ ಗೊತ್ತಾ?

* ಪ್ರತಿ ಸಲಾನೂ ನಾನೇ ಫೋನ್ ಮಾಡಬೇಕು...

– ಏ... ನಾನೆಷ್ಟು ಬ್ಯುಸಿ ಅಂತ ನಿಂಗೊತ್ತಿಲ್ವೇನೇ... ಫ್ರೀಯಾಗಿರ್ತಿಯಾ... ಏನು ಒಂದು ರಿಂಗ್ ಕೊಟ್ರೆ...

* ಹೌದಮ್ಮ... ಪ್ರಪಂಚದಲ್ಲಿ ಎಲ್ಲಾರೂ ಬ್ಯುಸಿ... ನಂಗೆ ಮಾತ್ರ ಪುರುಸೊತ್ತು! ಅದಕ್ಕೇ ನಾನು ಬೇಕಾದಷ್ಟು ಸಲ ಹಾಸ್ಪಿಟಲ್‌ಗೂ... ಮನೆಗೂ... ಫೋನ್ ಮಾಡಿದೀನಿ... ಹಾಸ್ಪಿಟಲ್‌ಗೆ ಮಾಡಿದ್ರೆ ರೌಂಡ್ಸ್‌ಗೆ ಹೋಗಿದಾರೆ... ಆಪರೇಷನ್ ಥಿಯೇಟರ್‌ನಲ್ಲಿ ಇದಾರೆ ಅಂತಾರೆ... ಮನೆಗೆ ಮಾಡಿದ್ರೆ... ಈಗ ಬಂದ್ರು... ಮಲಗಿದಾರೆ ಅಂತಾರೆ... ನಿನ್ನ ಪೇಶೆಂಟುಗಳಿಗೆ ಕೊಡ್ತಿಯಲ್ಲ ಹಾಗೆ ನಂಗೂ ಅಪಾಯಿಂಟ್‌ಮೆಂಟ್ ಕೊಡು... ಕನಿಷ್ಠ ಮಾತಾಡೋಕೆ ಫೋನ್‌ನಲ್ಲಿ!

– ಸಾಕು ಸುಮ್ನಿರೇ... ಸಾರಿ... ಸಾರಿ... ನನ್ನ ಕೆಲ್ಸಾನೇ ಅಂತಾದ್ದು...

* ಬೆಳಿಗ್ಗೆನೇ ಮಾಡಿದ್ದೆ. ನಿಮ್ಮನೆಯವರಿಗೆ ಗೊತ್ತಾಗಲಿಲ್ಲ. ಯಾರೋ ಪೇಶಂಟು ಅಂದುಕೊಂಡು ಜಸ್ಟ್ ಮಲಗಿದಾಳೆ ಹತ್ತು ಘಂಟೆಗೆ ಮಾಡಿ ಅಂದರು. ಯಾವಾಗ ನಾನು ಅಂತ ಗೊತ್ತಾಯ್ತೋ ಅರ್ಧಘಂಟೆ ನಿನ್ನ ಮೇಲೆ ದೂರು ಹೇಳಿದರಪ್ಪಾ! ಮನೆಕೆಲಸ, ಮಗೂಗೆ ಸ್ನಾನ ಮಾಡಿಸಿ ಸ್ಕೂಲಿಗೆ ಕಳಿಸಿ, ನಿಂಗೆ ತಿಂಡಿ ರೆಡಿ ಮಾಡೋರು ಅವರೇ ಅಂತಲ್ಲ! ದಿನಾ ಆಫೀಸಿಗೆ ಲೇಟು, ಬಾಸ್ ಹತ್ರ ಬಯ್ಸಿಕೊಳ್ತಾ ಇದೀನಿ... 'ನನ್ನ ಪಾಡು ನಾಯಿ ಪಾಡು' ಆಗಿದೆ. ನಿಮ್ಮ ಫ್ರೆಂಡು 24 hours ಹಾಸ್ಪಿಟಲ್‌ನಲ್ಲಿ ಇರ್ತಾಳೆ... ಅಂತ ಗೋಳಾಡಿದ್ರು... ಹೌದೇನೇ... ನಿಜಾನಾ?

– ಹಹಹ... ಹಹಹ... ಪೂರ್‌ಫೆಲೊ... ಮನೇಲೀ ಒಬ್ಬಳು ಹೆಂಗಸಿದಾಳೆ ಕಣೇ... ಎಲ್ಲಾ ಮಾಡಿಕೊಡ್ತಾಳೆ... ಇವರದ್ದು... ಜಸ್ಟ್ ಸೂಪರ್‌ವಿಷನ್. ಅದನ್ನೂ ನಿಭಾಯಿಸಕ್ಕೆ ಆಗಲ್ಲ ಅಂದ್ರೆ ನಾನೇನು ಮಾಡಲಿ...? ಅಲ್ದೆ... ಮದುವೆಗೆ ಮುಂಚೆನೇ ನಾನು ಕಂಡೀಷನ್ ಹಾಕಿದ್ದೆ... ನೋಡಿ ಡಾಕ್ಟರನ್ನು ಮದುವೆಯಾದ್ರೆ ಕಷ್ಟ ಆಗುತ್ತೆ ಅಂತ...

* ಪಾಪ... ರಾಜು ಎಷ್ಟು ಹೊಂದಿಕೊಂಡು ಹೋಗ್ತಾರೆ... ನಿನ್ನ ಪುಣ್ಯ ಅಂದುಕೋ... ನಿಂಗೂ ಒಂದು ಸಂಸಾರ ಇದೆ ಅನ್ನೋದನ್ನ ಮರಿಬೇಡಾ. ನೀನು ಮೊದಲು ಇದ್ಯಲ್ಲ... Govt. ಹಾಸ್ಪಿಟಲ್‌ನಲ್ಲಿ ಇದ್ದಿದ್ರೆ ಚೆನ್ನಾಗಿರ್‍ತಾ ಇತ್ತು. ಪ್ರೈವೇಟ್ ಬೇಡವಾಗಿತ್ತು...

– ಒಂದರ್ಥದಲ್ಲಿ ಚೆನ್ನಾಗಿತ್ತು... ಆರಾಮು ಇತ್ತು. ಜವಾಬ್ದಾರಿ ಹಂಚಿ ಹೋಗ್ತಾ ಇತ್ತು. ಆದ್ರೆ ಏನು ಮಾಡೋದು? ಪರಸ್ಪರ ಅಸೂಯೆ, ಗುಂಪುಗಾರಿಕೆ, corruption... ಸಹಿಸಕ್ಕೆ ಆಗಲ್ಲ ಕಣೆ... ಕಣ್ಣು ಮುಚ್ಚಿಕೊಂಡು ಇರೋಕೂ ಆಗಲ್ಲ... ಆದ್ರೆ ಈಗ ವಿಪರೀತ ಪ್ರೆಶರ್. ಪೇಶಂಟುಗಳಿಗೆ convince ಮಾಡೋದ್ರಲ್ಲಿ ಸಾಕಾಗಿ ಹೋಗುತ್ತೆ. ಪ್ರತಿಯೊಬ್ಬರಿಗೂ – ಪೇಶಂಟ್‌ಗೆ ಅಷ್ಟೇ ಅಲ್ಲ. ಅವರ ಮನೆಯವರಿಗೂ ಕೌನ್ಸಿಲಿಂಗ್ ಮಾಡಬೇಕು. ಮೂಢರು, ಮುಠ್ಠಾಳರು, ಅಧಿಕ ಪ್ರಸಂಗಿಗಳು... ಎಷ್ಟು ತಾಳ್ಮೆ ಬೇಕು ಗೊತ್ತಾ? ಇತ್ತೀಚೆಗೆ ಜನರಿಗೆ ನಂಬಿಕೆ ಅನ್ನೋದೇ ಇಲ್ಲ... ತುಂಬಾ ಸಂಶಯ. ಒಬ್ಬೊಬ್ಬರು ಒಂದೊಂದು ಥರಾ... ಎಲ್ಲಾ ಸರಿಹೋಯ್ತೋ ನಾನು ದೇವರಿಗೆ ಸಮಾನ! ಸ್ವಲ್ಪ ಎಡವಟ್ಟಾದರೆ total negligence ಅಂತ ಆರೋಪ ಹೊರಿಸಿ ರಂಪ ಎಬ್ಬಿಸ್ತಾರೆ... ಒಂದು ಕ್ಷಣ ಜೀವನ ಸಾರ್ಥಕ ಅನಿಸುತ್ತೆ. ಮರುಕ್ಷಣ ಯಾಕಪ್ಪ ಈ ನರಕಕ್ಕೆ ಬಂದೆ ಅನಿಸುತ್ತೆ... ಹಗಲೂ ರಾತ್ರಿ ಗೋಳಿನ ಮಧ್ಯೆನೇ ನಾನು ಕಾಲ ಹಾಕೋದು... ಎಲ್ಲೋ ಒಂದು ಕ್ಷಣ ನಗು, ಸಂತೋಷ... ಪ್ರತೀ ಕೇಸೂ ಹುಟ್ಟು ಸಾವಿನ ಪ್ರಶ್ನೆ, tension ಅಂದರೆ tension. ಯಾಕಾದ್ರೂ ಗೈನಿಕಾಲಜಿ ತಗೊಂಡೆನೋ...

* ಅದಲ್ಲ... ಕಣೇ... ನೀನು ತುಂಬಾ ಕಮಿಟೆಡ್. ಅದಕ್ಕೇ ನಿಂಗೆ ಸಮಸ್ಯೆ. ಆದ್ರೆ ಹೊರಗೆ ನಿನಗೆ ಎಷ್ಟು ಒಳ್ಳೆ ಹೆಸರಿದೆ ಗೊತ್ತಾ? ಡಾ. ವಂದನಾ ಅಂದ್ರೆ ಈ ಊರಿನಲ್ಲಿ ಪ್ರತಿಯೊಬ್ಬರಿಗೂ ಗೊತ್ತು. ನಿನ್ನ ಕೈಗುಣ ಚೆನ್ನಾಗಿದೆ. ತುಂಬಾ reasonable. ದುಡ್ಡಿನಾಸೆ, ದುರಾಸೆ ಇಲ್ಲದೆ ಇರೋ ಡಾಕ್ಟರು.... ಬಡವರ ಬಂಧು ಅಂತ ಎಲ್ಲಾ ಹೇಳ್ತಾರೆ... ಎಲ್ಲಾ ನಿನ್ನ ಹತ್ರಾನೇ ಬರ್‍ತಾರೆ...

– ಜನಾ ಜಾಸ್ತಿ ಬಂದಷ್ಟು ಪ್ರೆಶರ್ ಜಾಸ್ತಿ... ನಾನು ಎಷ್ಟು ಫೀಸು ಕಡಿಮೆ ತಗೊಂಡರೂ ದುಡ್ಡು ಬಂದು ಬೀಳ್ತಾ ಇದೆ... ಆದ್ರೆ... ಉಸಿರಾಡೊಕೆ ಪುರುಸೊತ್ತಿಲ್ಲ ಕಣೇ... ನನ್ನ ಕಷ್ಟ–ಸುಖ ಹೇಳಿಕೊಳ್ಳಕೂ ಟೈಂ ಇಲ್ಲ...

* ನಿಂಗೂ ಕಷ್ಟ ಇದೆ... ಸುಖ ಇದೆ... ಹೂಂ.

– ಇಲ್ದೆ? ಮೊನ್ನೆ ಒಂದು ಬ್ರೀಚ್ ಕೇಸು ಬಂದಿತ್ತು ಕಣೇ...

* ಅಂದ್ರೆ?

– ಅದೇ ಮಗು ಹೊಟ್ಟೆಲೀ ಅಡ್ಡಡ್ಡ ಕೂತಿತ್ತು. ಈಗ್ಲೆ ಸಿಜೇರಿಯನ್ ಮಾಡಬೇಕು ಇಲ್ಲಾಂದ್ರೆ ಅಪಾಯ. ಮಗು ಉಳಿಯಲ್ಲ ಅಂದರೆ. ತಾಯಿ ಬೇರೆ ವಿಪರೀತ ಅನಿಮಿಕ್. ಆದ್ರೆ, ಪೇಶಂಟಿನ ಗಂಡ ಏನಂದ್ರೂ co-operate ಮಾಡ್ತಾ ಇಲ್ಲ... ತಡ ಆದ್ರೆ ಮಗು

ಉಳಿಯಲ್ಲ ನೋಡಿ... ಅಂತ ಹೇಳಿದ್ರೂ, ಮತ್ತೂ ಸುಮ್ಮನಿದಾನೆ... ಆಮೇಲೆ ನಾನು ಪೇಶಂಟ್ ಹತ್ರ ವಿಚಾರಿಸಿದೆ ಯಾಕಮ್ಮ ಹೀಗೆ... ಅಂತ. ಅದಕ್ಕವಳು ಹೊಟ್ಟೆಲಿರೋದು ಹೆಣ್ಣು ಮಗು ಅಲ್ಲವಾ ಅದಕ್ಕೇ ಅಂದ್ಲು! ನನಗೆ ಶಾಕ್! ನಾನು ಸ್ಕ್ಯಾನ್ ಮಾಡಿ ಹೇಳಲ್ಲ ಅಂತ ಬೇರೆ ಎಲ್ಲೋ ಮಗು ಗಂಡೋ ಹೆಣ್ಣೋ ಅಂತ ತಿಳ್ಕೊಂಡು ಬಂದಿದ್ದಾರೆ. ನಾನು ಸಿಜೇರಿಯನ್ ಮಾಡೋದು ತುಂಬಾ ಕಮ್ಮಿ. ನಾನು ಆಸ್ಪತ್ರೇಲಿ ಮೂರು ದಿನದ ಮೇಲೆ ಇಟ್ಟುಕೊಳ್ಳೋದೂ ಇಲ್ಲ... ನಾರ್ಮಲ್ ಇದ್ರಂತೂ ಮೂರೇ ದಿನಕ್ಕೆ discharge. ಅಗತ್ಯ ಇದ್ರೆ ನಮ್ಮ ನರ್ಸ್‌ಗಳನ್ನೇ ಅವರ ಮನೆಗೆ ದಿನಕ್ಕೊಂದು ಸಲ ಕಳಿಸ್ತೀನಿ... ನಿಂಗೆ ಗೊತ್ತಲ್ಲ... ನನ್ನ ಹಾಸ್ಪಿಟಲ್‌ನಲ್ಲಿ ಬೆಡ್ಸ್ ಖಾಲಿನೇ ಇರಲ್ಲ... ಇದನ್ನೆಲ್ಲಾ ತಿಳಕೊಂಡೇ ಫೀಸು ಕಮ್ಮಿ ಅಂತ ನನ್ನ ಹತ್ರ ಬಂದಿದಾನೆ. ನನ್ನ ಹತ್ರ ಬರೋ ಮುಂಚೆ ಎಲ್ಲೆಲ್ಲಿ ಅಲೆದಿದಾರೋ... ಯಾರಿಗೆ ಗೊತ್ತು? ನಾನೂ ಈ ಕೇಸು ತಗೊಬಾರ್ದು ಅಂತ ಇದ್ದೆ...

* ಆಮೇಲೆ...?

– ಆ ತಾಯಿ–ಮಗು ಎಂಥ dangerನಲ್ಲಿ ಇದ್ರು ಗೊತ್ತಾ? ಎರಡು ಹೆಣ್ಣು ಜೀವ... ಸದ್ಯ ಬ್ಲಡ್ ಬ್ಯಾಂಕ್‌ನಲ್ಲಿ ಅವಳಿಗೆ match ಆಗೋ blood ಇತ್ತು. ದೇವರು ದೊಡ್ಡವನು. ಇಬ್ರೂ ಉಳಿದುಕೊಂಡರು... ಮಗು ತುಂಬಾ ಮುದ್ದಾಗಿದೆ ಕಣೇ... ಆಮೇಲೆ ಆಯಪ್ಪನಿಗೆ ಕೇಳ್ದೆ... ಯಾಕಪ್ಪ? ನಿಂಗೆ ಅಜ್ಜಿ ಇಲ್ವಾ? ಅಮ್ಮ ಇಲ್ವಾ? ಅಕ್ಕ? ತಂಗಿ? ಮಗಳು? ಥೂ ಆ ದರಿದ್ರದವನಿಗೆ ಎಲ್ಲಾ ಇದಾರೆ ಕಣೇ!! ಮೊದಲನೇದು ಹೆಣ್ಣಂತೆ... ಇದು ಸತ್ತು ಹೋದ್ರನೇ ಒಳ್ಳೇದು ಅಂತ ಅಂದುಕೊಂಡನೋ ಏನೋ?! ಇಂತಾದ್ದು ಪ್ರತಿ ದಿನ ನೋಡ್ತಾನೇ ಇರ್ತೀನಿ... ಹೆಣ್ಣು ಎಂದರೆ ಎಷ್ಟು ತಾತ್ಸಾರ ಗೊತ್ತೆ? ಒಂದೇ ಮಂತ್ರ ಹೆಣ್ಣು ಬೇಡ! ನಾನೂ ಹೆಣ್ಣಲ್ಲವಾ? ನಂಗೆ ಎಷ್ಟು ಅವಮಾನ ಆಗುತ್ತೆ ಗೊತ್ತಾ?

– ವಂದೂ ನೀನು ತುಂಬಾ ಸೆನ್ಸಿಟೀವ್...

* ನಮ್ಮನೆಯವರೂ ಹಾಗೇ ಅಂತಾರೆ...

– ನಿಜ ಹೇಳ್ಲಾ? ನೀನೊಂದು rare species...

* ಅದೆಲ್ಲ ಇರ್ಲಿ. ಏನು ಫೋನ್ ಮಾಡಿದ್ದು?

– ನಂಗೆ urgent ಆಗಿ ನಿನ್ನನ್ನು ಭೇಟಿ ಮಾಡಬೇಕಿತ್ತು... ನನ್ನ ಮಗಳಿಗೆ ಆರಾಮಿಲ್ಲ...

* ಹೌದಾ? ಏನು ವಿಷಯ?

– ಇಲ್ಲ ಅದನ್ನು ಫೋನಿನಲ್ಲಿ ಹೇಳಲ್ಲ... ಹೇಳೋಕಾಗಲ್ಲ...

* ಸರಿ... ನಾಳೆ ಕರ್ಕೊಂಡು ಬಾ... ಯಾವಾಗ ಬೇಕಾದ್ರೂ ಬಾ...

–ಸರಿ ನಾಳೆ ಸಿಗ್ತೀನಿ... O.K. Bye.

●

# ಸೋರುತಿಹುದು ಮನದ ಮಾಳಿಗೀ...

* ಹಲೋ... ಹಲೋ... ಅಮ್ಮಾ ನಾನು ಸಂಧ್ಯಾ ಕಣಮ್ಮಾ

– .......

* ಅಮ್ಮಾ... ಕೇಳಿಸ್ತಾ ಇದೆಯಾ? ನಾನು ಸಂಧ್ಯಾ...

– ಹಹ ಹಹ...

* ಅಮ್ಮಾ ಯಾಕಮ್ಮ ನಗ್ತಾ ಇದೀಯಾ?

– ............. ಹಹ್ಹ ಹಹ್ಹ...

* ಅಮ್ಮಾ... ಅಮ್ಮಾ... ಮಾತಾಡಮ್ಮ...

– ............. ನಂಗೇನು ಕೆಪ್ಪಲ್ಲ... ಕೇಳಿಸ್ತಾ ಇದೆ... ಹೇಳು...

* ನಿಜ ಏನಮ್ಮಾ? ಯಾಕಮ್ಮ... ಏನಾಗಿದೆ... ಹೇಳಮ್ಮಾ...?

– ಯಾರು ಹೇಳಿದ್ರು ಹುಷಾರಿಲ್ಲ ಅಂತ?! ಗುಂಡುಕಲ್ಲಿನ ಹಾಗೆ ಇದ್ದೀನಿ... ಒಂದು ಪಟ್ಟಿಗೆ ನೂರು ಕೊಡ ನೀರು ಸೇದಿ ಹಾಕಿದ್ದು ಎಲ್ಲರಿಗೆ ಮರೆತು ಹೋಗಿದೆ. ಬುಟ್ಟಿ ಬುಟ್ಟಿ ಪಾತ್ರೆ ಈಗ್ಲೂ ಅರ್ಧ ಗಂಟೆಲೀ ಬೆಳಗಿ ಇಡ್ತೀನೀ... ನಾಕು ಬಕೀಟು ಬಟ್ಟೆ ಒಗೆದು ಸರಸರ ಅಂತ ಹಿಂಡಿ, ಹರವಿ ಹಾಕ್ತಿನೀ...

* ಅಮ್ಮಾ...

– ಮೂರು ಹೆಣ್ಣು ಮಕ್ಕಳಿಗೆ, ಇಬ್ಬರು ಸೊಸೆಯಂದರಿಗೆ ಬಾಣಂತನ ಮಾಡಿದೀನೀ... ಹತ್ತು ಮೊಮ್ಮಕ್ಕಳನ್ನ ಕಣ್ಣು ಬೊಂಬೆ ಥರಾ ಜ್ವಾಪಾನ ಮಾಡಿಕೊಟ್ಟಿದ್ದೀನಿ. ಹತ್ತು ಸೇರು ಅಕ್ಕಿ ನೆನೆಸಿದರೆ ಈಗಲೂ ರುಬ್ಬಿ ಕೊಡ್ತೀನೀ... ಯಾರು ಹೇಳಿದ್ರು ನಂಗೆ ಹುಷಾರಿಲ್ಲ ಅಂತ...?! ಎಲ್ಲ ಸೇರಿ ನನ್ನ ಮೇಲೆ ಸಾಧಿಸ್ತಾ ಇದಾರೆ! ನಂಗೆ ಗೊತ್ತಾಗಲ್ಲ ಅಂತ ತಿಳಕೊಂಡಿದಾರೆ. ಯಾರೋ ಹೊಂಚುಹಾಕಿ ನನ್ನನ್ನ ಗಮನಿಸುತ್ತಾ ನನ್ನ ಮೇಲೆ ಕಣ್ಣಿಟ್ಟಿದ್ದಾರೆ. ಪೋಲೀಸಿನವರು ನನ್ನನ್ನು ಎಳಕೊಂಡು ಹೋಗ್ತಾರೋ ಏನೋ... ಭೂತದ ಕಾಟ... ತಪ್ಪು ಕಾಣಿಕೆ ಎತ್ತಿಡೋದು ಮರ್‍ತು ಹೋಯ್ತೊ ಏನೋ... ಒಬ್ಬರಾದ್ರೂ ನಂಗೆ ಸಹಾಯ ಮಾಡೋಲ್ಲವೇ? ನಂಗೆ ಮರೆತು ಹೋಗಿರೋದನ್ನ ಯಾರೂ ನಂಗೆ ಜ್ಞಾಪಿಸೋಲ್ಲವೇ... ನಾನು ಎಷ್ಟು ಕೇಳಿಕೊಂಡರೂ ಯಾರೂ ನನ್ನನ್ನ ತಿರುಪತಿಗ ಕರೆದುಕೊಂಡು ಹೋಗಲಿಲ್ಲವೇ?

ಅಯ್ಯಾ... ನನ್ನ ಕೈಲಿ ಆಗಲ್ಲ ಅಂದುಕೊಂಡಿದಾರೆ... ಯಾಕಾಗಲ್ಲ? ನನ್ನ ಹತ್ರ ಕಾಸಿಲ್ಲವಾ? ಕೈಕಾಲು ಇನ್ನೂ ಆಡ್ತಾ ಇದೆ... ಈಗ... ಈಗ... ಕೈಕಾಲು ಬೀಸಿ ಹೊರಟೆ ಅಂದ್ರೆ ನಡ್ಕೋತ ಬೇಕಾದ್ರೆ ಧರ್ಮಸ್ಥಳಕ್ಕೆ ಹೋಗಿ ತಪ್ಪುಕಾಣಿಕೆ ಹಾಕಿ ಹಂಗೇ ನಡ್ಕೋತ ವಾಪಸು ಬಂದು ಬಿಡ್ತೀನಿ...

* ಅಮ್ಮಾ... ಅಮ್ಮಾ... ಏನೇನೋ ಮಾತಾಡ್ತಾ ಇದೀಯಲ್ಲಮ್ಮಾ...

– ಏ... ಸುಮ್ನಿರೆ... ಬಾಯಿ ಮುಚ್ಚಿಕೊಂಡು ಸುಮ್ನಿರು. ಯಾಕೆ ನೀನೇ ಮಾತನಾಡಬೇಕಾ? ದೇವರು ನಂಗೆ ಬಾಯಿ ಕೊಟ್ಟಿರೋದು ಸುಮ್ಮನಿರೋಕಾ? ಯಾರೂ ನನ್ನ ಬಾಯಿ ಮುಚ್ಚಿಸೋಕೆ ಆಗಲ್ಲ ತಿಳ್ಕೊ... ಆ ತಿರುಪತಿ ತಿಮ್ಮಪ್ಪಾ... ಬಾ... ಬಾ... ನಂಗೆ ಮುಡಿಕೊಡು... ಅಡಿಗೆ ಮಾಡಿ ಇಟ್ಟಿದೀನಿ... ಬಂದು ಊಟ ಮಾಡಿಕೊಂಡು ಹೋಗು ಅಂತ ಎಷ್ಟು ದಿವಸದಿಂದ ಕರೀತಾ... ಇದಾನೆ... ನಾನು ಸುಮ್ನೆ ಹಿಂಗೆ ಮೈಮರೆತು ಕುಂತು ಬಿಟ್ಟಿದೀನಲ್ಲಾ... ಅಯ್ಯೋ... ಮಂಕೇ...

* ಅಮ್ಮಾ... ಯಾಕಮ್ಮಾ... ತಿರುಪತಿಗೆ ಹೋಗಬೇಕೆನಮ್ಮಾ?

– ಅಯ್ಯೋ... ನಾನೆಲ್ಲಿ ಹಾಗಂತ ಅಂದೆ? ಇಲ್ಲೇ ಮನೆ ಎದುರಿಗೆ ದೇವಸ್ಥಾನ ಇದೆ. ಎಡವಿ ಬಿದ್ದರೆ ದೇವರೇ ಕಾಲಿಗೆ ಸಿಗ್ತಾನೆ. ಅವನೇನು ವೈಭೋಗ ತಂದುಕೊಟ್ಟ ಅಂತ ಅಷ್ಟು ದೂರ. ಆ ಕರಿಮೂತಿ ನೋಡಕ್ಕೆ ಹೋಗಬೇಕ? ಸಿಗ್ಲಿ ಅವನು ಚಪ್ಪಲಿ ಸೇವೆ ಮಾಡ್ತೀನಿ ಅವನಿಗೆ... ಕೈಯಲ್ಲಿ ಕಾಸಿದೆ ಅಂತ ಇಂಥ ಅನ್ಯಾಯ ಮಾಡೋದೇ ನನ್ನ ಮೇಲೆ?

* ಅಮ್ಮಾ ಯಾಕಮ್ಮಾ ಹಿಂಗೆ ಮಾತಾಡ್ತೀಯಾ? ಏನಾಯ್ತಮ್ಮಾ ನಿಂಗೆ ಅನ್ಯಾಯ?

– ಅಲ್ಲ ಕಣೇ ಸಂಧ್ಯಾ... ನನ್ನ ರಾಮು ಹೆಂಡ್ತಿ... ನಂಗೆ ನಾಯಿಗೆ ಬೈದ ಹಾಗೆ ಬಯ್ಯೋದನ್ನ ನಿನ್ನಪ್ಪ ಸುಮ್ಮನೆ ನೋಡ್ತಾ ಕೂರೋದಾ? ಮೂವತ್ತು ವರುಷ ಗಿಡ ಸಾಕಿದ ಹಾಗೆ ಆ ನನ್ನ ಮಗನ್ನ ಸಾಕಿದನಲ್ಲೇ... ಅವನೂ ಸುಮ್ನೆ ಇರೋದಾ? ನಾನು ಹುಚ್ಚಿ ಅಂತೆ! ಬಾಯಿ ಮುಚ್ಚಿಕೊಂಡು ಇರದಿದ್ದರೆ ನನ್ನ ಮೇಲೆ ಕಂಪ್ಲೇಟು ಕೊಟ್ಟು ಲಾಕಪ್ಪಿನೊಳಗೆ ಹಾಕಿಸುತ್ತಾಳಂತೆ! ದೇವರೇ ದೇವರೇ... ನೀನೇ ಹೇಳು ನಾನೇನು ಕಳ್ಳಿನಾ, ಸುಳ್ಳಿನಾ... ನಾನೇನು ಕೊಲೆ ಮಾಡಿದೀನಾ? ನನ್ನ ಮೇಲೆ ಕೇಸು ಹಾಕಿಬಿಡ್ತೀನಿ ಅಂತಾಳಲ್ಲೇ... ಸೊಸೆ ಹೇಳೋ ಮಾತೇನೇ ಇದು? ಅವಳು ಬೇಕಾದ್ರೆ ಸಾವಿರ ಹೇಳಲಿ ನಾನು ಹೊಟ್ಟೆಗೆ ಹಾಕ್ಕೊತೀನಿ ಆದ್ರೆ ಆ ರಾಮು 'ಹಿಂಗೆ ನೀವು ಜಗಳಾ ಆಡಿದ್ರೆ ನಾಳೇನೆ ಬೇರೆ ಮನೆ ಮಾಡಿಕೊಂಡು ಹೋಗಿಬಿಡ್ತೀನೀ... ನೀ ಸತ್ರೂ ಒಂದು ಹಿಡಿ ಮಣ್ಣು ಹಾಕೊಕೂ ಬರೊಲ್ಲ,' ಅಂತಾನಲ್ಲೇ...

* ಅಮ್ಮಾ... ಅಮ್ಮಾ... ಇಲ್ಲಿ ಕೇಳಮ್ಮಾ... ನೋಡು...

– ನಿಮ್ಮಪ್ಪ ನನ್ನನ್ನ ಕೂಡಿಹಾಕಿದ್ರು ಕಣೇ... ಉಚ್ಚೆ ಕಟ್ಟಿಕಟ್ಟಿ ಸಾಕಾಗಿ ಗೋಗರೆದರೂ

ಬಾಗಿಲು ತೆಗೆಯಲಿಲ್ಲ ಕಣೇ... 'ಬಾಯಿ ಮುಚ್ಚಿಕೊಂಡು ಬಿದ್ದಿರು... ಬಾಯಿ ಬಿಟ್ಟೆಯೋ... ಬರೆ ಹಾಕಿ ಬಿಡ್ತೀನೀ' ಅಂತಾರಲ್ಲೇ... ಅಬ್ಬಾ... ನರಕಾ... ನರಕಾ... ಉಚ್ಚೆ ವಾಸನೆ ತಡೀಲಾರೆ... ತಡೀಲಾರೆ... ತಿಮ್ಮಪ್ಪಾ ತಪ್ಪುಕಾಣಿಕೆ ಕೊಡ್ತೀನೀ ಕಾಪಾಡಪ್ಪ...

* ಅಮ್ಮಾ ಇಲ್ಲ ಕೇಳು... ನಾನು ನಾಳೆನೇ ಅಲ್ಲಿಗೆ ಬರ್ತೀನಿ...

– ಯಾಕೆ? ಯಾಕೆ ಬರ್ತೀಯಾ? ಬಸುರಿನಾ? ಅಯ್ಯೋ ಇಲ್ಲ ನಂಗೆ ಬಾಣಂತನ ಮಾಡೋಕೆ ಆಗಲ್ಲ... ನಂಗೆ ಏನೇನೂ ಕೂಡೋದಿಲ್ಲ... ಸುಸ್ತು ಅಂದರೆ ಸುಸ್ತು... ಇದ್ದಕ್ಕಿದ್ದ ಹಾಗೆ ಮೈ ಬಿಸಿ ಆಗುತ್ತೆ... ಇದ್ದಕ್ಕಿದ್ದ ಹಾಗೆ ಚಳಿ ಆಗುತ್ತೆ... ಬೆವರು ಕಿತ್ಕೊಂಡು ಬರುತ್ತೆ... ಸಾರಿಗೆ ಉಪ್ಪು ಹಾಕಿದೆನೊ ಹುಳಿ ಹಾಕಿದೆನೊ ನೆನಪಿಗೆ ಬರೊಲ್ಲ... ನಿಮ್ಮಪ್ಪ ಏನಂತಾರೆ ಗೊತ್ತಾ? ನಂದು ನಾಟಕ ಅಂತೆ... ನಾಟಕ... ಹಾವಿನ ತಲೆ ಕೆಳಗೆ ಕಪ್ಪೆ ಇದ್ದ ಹಾಗೆ ಇದಿನೀ ನಾನು ನಂದು ನಾಟಕ ಅಂತೆ ನಾಟಕ...

* ಅಮ್ಮಾ...

– ರಾಮು ಅವನ ಹೆಂಡತಿ ಜತೆ ಸೇರಿ ಇಂಗ್ಲೀಷಿನಲ್ಲಿ ನನ್ನನ್ನ ಬಯ್ತಾನೆ ಕಣೇ... ನಂಗೆ ಅಡಿಗೆ ಮಾಡೋಕೆ ಬರೊಲ್ಲ... ಅಂತಾನಲ್ಲೇ... ಅಡಿಗೆ ಮನೆಗೆ ಕಾಲಿಡಬೇಡ ಅಂತಾನಲ್ಲೇ... ಅಲ್ವೇ... ಅಡಿಗೆ ಮನೆ ನಂದು, ಅಲ್ಲವಾ? ಅಡಿಗೆ ಮನೆಗೆ ಬರಬೇಡಾ ಅಂದರೆ ನಾ ಎಲ್ಲಿ ಹೋಗಬೇಕು? ಇಡೀ ಮನೇಲಿ ಅಡಿಗೆ ಮನೆ ಬಿಟ್ರೆ ನಂದು ಅಂತ ಜಾಗ ಎಲ್ಲಿದೆ ಹೇಳು? ಎಲ್ಲಾ ನಂಗೆ ಮೋಸ ಮಾಡ್ತಾರಲ್ಲೇ...

* ಅಮ್ಮಾ... ಇಲ್ಲಿ ಕೇಳಮ್ಮಾ... ನೋಡು...

– ಅದೇ ನಿನ್ನ ಅತ್ತೆ ರತ್ನಮ್ಮ ಎಷ್ಟು ಲಕ್ಷಣವಾಗಿದಾರೆ... ಥೇಟ್ ಲಕ್ಷ್ಮಿ ಥರಾ... ಆವೊತ್ತು ಅವರಿಗೆ ಅರವತ್ತು ಆದಾಗ ಹಬ್ಬ ಮಾಡಿದರಲ್ಲ... ಎಷ್ಟು ದೊಡ್ಡದಾಗಿ ಮಾಡಿದರಪ್ಪಾ... ಪುಣ್ಯವಂತೆ... ನಿನ್ನ ಮಾವ ತುಂಬಾ ಒಳ್ಳೆ ಮನುಷ್ಯ... ನಿಮ್ಮತ್ತೆಗೆ ಹೂದಂಡೆ ಕೊಟ್ಟು ಮುಡಿ... ಮುಡಿ... ಅಂತಿದ್ದ... ನಂಗೆ ನಾಚಿಕೆ ಆಗೋಯ್ತು... ನಿಮ್ಮ ಅತ್ತೆ ತಿನ್ನಿ, ತಿನ್ನಿ ಅಂತ ನಂಗೆ ನಾಕು ಕಡಬು ಬಡಿಸೋದಾ? ನೋಡು ನಿಮ್ಮ ಅತ್ತೆಗೆ ಏನಾದ್ರೂ ಒಂದು ಮಾತು ನೀನು ಬಯ್ದರೆ ನನ್ನಾಣೇ... ಅಲ್ವೇ... ನಿಂಗೆ ಮಕ್ಕಳು ಆಗದ ಹಾಗೆ ಆಪರೇಷನ್ನು ಆಗಿತ್ತು ಅಲ್ವಾ? ನನ್ನ ತಲೆ ನೋಡು... ಬಸುರೀನಾ ಅಂತ ಕೇಳ್ತಾ ಇದೀನೀ... ನೆನಪೆ ಇರಲ್ಲ... ಮರೆವು ಅಂದ್ರೆ ಮರೆವು...

* ಊಂ್ಹ... ಊಂ್ಹ... ಊಂ್ಹ...

– ಅಯ್ಯೋ... ಯಾಕೆ ಕಣ್ಣೀರು ಹಾಕ್ತಾ ಇದೀಯಾ? ಅಯ್ಯೋ ಅಳಬೇಡ... ಕಂದಾ... ನಾಸಿಲ್ಲವಾ? ಎಷ್ಟು ಗಟ್ಟಿ ಇದೀನೀ ನೋಡು ಗುಂಡುಕಲ್ಲಿನ ಥರಾ. ಬಸುರೀನಾ... ಬಯಕೆನಾ? ನಾನು ಮಾಡಿಹಾಕ್ತೀನೀ ನೀ ಅಳಬ್ಯಾಡ... ನಾ ಬದುಕಿರೊ ತನಕ ನಿಂಗೆ ಕಣ್ಣೀರು ಹಾಕೊ ಅಗತ್ಯಾನೇ ಇಲ್ಲ... ರಾಶಿ ರಾಶಿ ಪುಸ್ತಕ ಓದಿ ಓದಿ ಬಿಸಾಕಿದೀಯಾ... ಎಷ್ಟು

ದೊಡ್ಡ ಕೆಲಸದಲ್ಲಿ ಇದ್ದೀಯಾ... ಸಾವಿರ, ಸಾವಿರ ರೂಪಾಯಿ ಸಂಬಳ ತರ್ತೀಯಾ... ನಿಂಗೇನೆ ಧಾಡಿ ಅಳೋಕೆ...?!

* ಊಂ... ಊಂ... ಅಮ್ಮಾ... ಇಲ್ಲಿ ಕೇಳಮ್ಮಾ...

– ನೀನೇ ಹೇಳೇ ಸಂಧ್ಯಾ... ನೀನು ನನ್ನ ಮುದ್ದು ಮಗಳಲ್ಲವಾ?

* ಏನಮ್ಮಾ?

– ನನ್ನನ್ನ ಹುಚ್ಚಿ ಅಂತ ಕರೀಬಹುದಾ? ಅಷ್ಟಕ್ಕೂ ನಂಗೆ ಏನು ಕಮ್ಮಿ ಆಗಿದೆ ಅಂತ ಹುಚ್ಚು ಹಿಡಿಬೇಕು? ದೇವರಂಥಾ ಗಂಡ, ದೇವರಂಥಾ ಮಗ, ದೇವರಂತಾ ಸೊಸೆ... ಹಹ್ಹ... ಹಹ್ಹ... ಹಹ್ಹ... ನಾನು ಹುಚ್ಚಿ ಅಂತೆ... ಗುಟ್ಟಾಗಿ ಪಿಸ ಪಿಸ ಅಂತ ಬೇರೆ ಮಾತಾಡಿಕೋತಾರೆ... ಅವರಿಗೇ ಹುಚ್ಚು... ಹಹಹ... ಹಹಹ...

* ಹಲೋ... ಹಲೋ... ಅಮ್ಮಾ... ಹಲೋ...

– ..............................

●

# ‘ಆತ್ಮ ಯಾವ ಕುಲ... ಜೀವ ಯಾವ ಕುಲ...’

* ಹಲೋ... ಹಲೋ...

– ಹಲೋ... ಯಾರು... ಚುಮ್ಮಿನೇನವ್ವಾ, ಯಾವಾಗ ಬಂದೆ?

* ಹಲೋ ಮಮತಾ ಮನೆ ತಾನೆ? ೨೪೮೫೭೬೪... ನಂಬರು ತಾನೆ...

– ಹೌದು ಮಮತಾ ಮನೆನೇ... ಚುಮ್ಮಿ ಅಲ್ವಾ? ವಿಷ್ಯ ಹೇಳು... ಅಪ್ಪ ಅಮ್ಮ ಹೆಂಗವರೆ? ಏನವ್ವಾ ನೀನು ಆಗಾಗ ಫೋನು ಮಾಡಾಕಿಲ್ವ?

* ಆಂಟೀ ನಾನು ನೀತೂ ಅಂತ ಮಮತಾ ಫ್ರೆಂಡ್... ಸ್ವಲ್ಪ ಅವಳನ್ನ ಕರೀರೀ...

– ನೀತೂ... ಯಾರೋ ನಾ ಕಾಣೆ... ನಿನ್ನ ಮುಖಾನೇ ನೋಡಿಲ್ಲವೇ... ಬಾರವ್ವ ಮನೆಗೆ... ನಮ್ಮ ಮಮ್ತು ದಿನಕ್ಕೆ ನಾಕು ಸಲ ಫೋನ್ ಮಾಡೋದು ನಿಂಗೆ ತಾನೆ?

* ಲಾಸ್ಟ್ ವೀಕ್ ಬಂದಿದ್ದೆ ಆಂಟೀ... ನೀವು ಊರಲ್ಲಿ ಇರಲಿಲ್ಲ...

– ಹೂಂ... ರಾಯದುರ್ಗಕ್ಕೆ ಹೋಗಿದ್ದೆ, ನಮ್ಮತ್ತೆ ಪಾಪ ನೆಲಕಚ್ಚರೆ... ಉಸಾರಿಲ್ಲ...

* ಆಂಟೀ ಮಮ್ತಾಗೆ ಹುಶಾರಿಲ್ಲವಾ? ಕಾಲೇಜಿಗೆ ಬಂದಿಲ್ಲಾ?

– ಹೌದಾ ಬರ್ತಾ ಇಲ್ವಾ? ನಿನ್ನೆ ತಲೆ ನೋವು ಅಂತಿದ್ಲು... ಇವತ್ತು ಹೊಟ್ಟೆ ತುಂಬಾ ನೋವು ಅಂದ್ಲು... ಕ್ಲಾಸಿಲ್ಲ ಅಂದ್ಲು. ಯಾಕೊ ಮಂಕು ಬಡಿದಂಗೆ ಅವಳೇ... ಇವತ್ತು ಯಾರ್ಯಾರ್ದು ಫೋನೂ ಬಂದಿಲ್ಲ... ಅವಳೂ ಮಾಡಿಲ್ಲ! ಊಟ ಮಾಡಂಗಿಲ್ಲ... ಅರ್ಧ ಚಪಾತಿ, ಒಂದು ದೋಸೆ... ಸಾಯಂಗೆ ಅವಳೆ. ನೀನಾದ್ರೂ ಹೇಳವ್ವಾ. ಮಾತೆತ್ತಿದರೆ ಸಿಡಿಸಿಡಿ ಅಂತಾಳೆ. ಹೊಟ್ಟೆತುಂಬಾ ಉಣ್ಣದೆ ಅಸ್ಥಿಪಂಜ ಆದಂಗೆ ಆಗವಳೆ... ತಿನ್ನಾಕೆ ಉಣ್ಣಾಕೆ ಇಲ್ದೆ ಉಪಾಸ ಮಾಡೋದು ಕಂಡೀವ್ನಿ... ಇದೊಳ್ಳೆ ಇದ್ದೂ ಉಪಾಸ ಮಾಡೋದು ಅಂದ್ರೆ? ನಾವೇನೂ ಉಪ್ಪು ನಂಚಿಕೊಂಡು ಇದ್ವಿ. ಇವಕ್ಕೆ ತುಪ್ಪ ಹಾಕಿದ್ರೂ ಬೇಡಾ... ನೀನು ಹೊಟ್‌ತುಂಬಾ ಉಣ್ತೆಯೋ ಇಲ್ವೋ?

* ಪರವಾಗಿಲ್ಲ... ಹಹ್ಹ ಹಹ್ಹ...

– ಯಾಕೆ ನಗ್ತಿಯಾ? ಇಚಾರಿಸಿದ್ರೆ ತಪ್ಪಾ? ನಮ್ಮ ದೊಡ್ಡ ಮಗ ಗೆದ್‌ಬಿಟ್ಟ...

ಭಲೇ ಬುದ್ಧಿವಂತ. ದೊಡ್ಡ ಕೆಲ್ಸದಲ್ಲಿ ಅವ್ನೆ. ನಮ್ಮೆಡಗೀನೂ ಚುರುಕೇ. ರ್‍ಯಾಂಕು ಪ್ಯಾಂಕು ತಗೊಂಡವಳೇ... ಆದರೆ ಸಿಡುಕು. ನೀ ಒಸಿ ಹೇಳು. ಹೆಮ್ಮಕ್ಕಳಿಗೆ ಮೂಗಿನ ಮೇಲೆ ಕೋಪ ಇರಬಾರ್ದು. ಸಂದಾಕಿರಾಕಿಲ್ವ...

* ಆಂಟೀ ಮಮತಾಗೆ ಕೊಡಿ... ಪ್ಲೀಸ್.

– ಬಂದ್ಲು... ಇರವ್ವಾ... (ಮಮ್ತೂ ಮಮ್ತೂ...) ನಿಮ್ಮನೆ ಎಲ್ಲೋ...

* ರಾಮಮಂದಿರದ ಹತ್ರ ಸಂಕಳ್ಳಿ... ಬೈಪಾಸ್...

– ಓ... ಅಲ್ಲಿ... ಹನುಮಪ್ಪನ ಗುಡಿ ತಾವ... ಗೊತ್ತಾಯ್ತು... ನಾನೂ ಎಣ್ಣೆ ಬಿಡಕ್ಕೆ ಬಂದೀವ್ನೀ... ಆ ಹನುಮಪ್ಪಂಗೆ ಹರಸ್ಕೊಂಡರೆ ಕೆಲ್ಸ ಆದಂಗೆ... ಭಲೇ ನೀಯತ್ತಿನ ದೇವರು...

* ಹಹ್ಹ ಹಹ್ಹ... ಆಂಟೀ...

– ತಗೋ ಬಂದ್ಲು... ತಗೋಳವ್ವಾ ಮಾತಾಡು... ಹಲೋ... ನೀತೂ...

* ಏನೇ... ನಿಮ್ಮ ಮದರಾ?

– ಹೂಂ... ಸ್ವಲ್ಪ ಹೆಡ್‌ಲಾಂಗೂ!

* ಏ ಪಾಪ... ಯಾಕೆ ಹಾಗೆಂತೀಯಾ?

– ಅಲ್ವೆ... ಫೋನ್ ಬಂದ್ರೆ ಸಾಕು... ಯಾರ್ದು ಬೇಕಾದ್ರೂ ಆಗಿರಲಿ... ಮಾತು... ಮಾತು... ಹಿಂದೆ ಮುಂದೆ ನೋಡಲ್ಲ! ಮೊದ್ಲು ಫೋನ್ ಮುಟ್ಟೋದಕ್ಕೆ ಭಯ ಪಡ್ತಿದ್ರು. ನಾವು ಧೈರ್ಯ ತುಂಬಿ ಮಾತಾಡಕ್ಕೆ ಕಲಿಸಿದ್ವಿ ಈಗ ಅದೇ ತಲೆನೋವಾಗಿದೆ...

* ಏ... ಹೋಗ್ಲಿಬಿಡೆ... ಪಾಪ...

– ನೀನು ಅವರನ್ನ ನೋಡೇ ಇಲ್ಲವಲ್ಲ... ಬಂದು ಪರಿಚಯ ಮಾಡ್ಕೋ... ನಿಂಗೆ ಗೊತ್ತಾಗುತ್ತೆ...

* ಪಾಪ, ಬಿಡೆ.

... ನಿಂಗೊತ್ತಿಲ್ಲ! ನಮ್ಮಣ್ಣ ಸೆಕ್ರೆಟರಿ ಅಲ್ವಾ? ಮೊನ್ನೆ, ಏನಾಯ್ತು ಗೊತ್ತಾ? ಮಂತ್ರಿಗಳಿಂದ ಫೋನ್ ಬಂದಿತ್ತು. ಅವರೂ ನಮ್ಮೂರು ಕಡೆಯವರೇ. ನಮ್ಮಮ್ಮ ಅವ್ರಿಗೆ ಗೊತ್ತು. ಹಾಗಾಗಿ ಏನು ಎತ್ತ ಅಂತ ವಿಚಾರಿಸಿದಾರೆ... ಅದಕ್ಕೇ ನಮ್ಮಮ್ಮ 'ಒಂದೆರಡು ಮೂಟೆ ಕಡ್ಲೆಕಾಯಿ ಊರಿಂದ ತರಸೋ ವ್ಯವಸ್ಥೆ ಮಾಡಬೇಕು... ನೀವೇನಾದ್ರೂ ಅತ್ಲಗೆ ಹೋದ್ರೆ ಹೊತ್ತಾಕ್ಕೊಂಡು ಬನ್ನಿ' ಅಂತ ನಮ್ಮವ್ವಾ ಅವ್ರಿಗೆ ಹೇಳೋದಾ?

* ಹಹ್ಹ... ಹಹ್ಹ... ಹಹಹ

– ಅವರು ನಮಗೆ ಚೆನ್ನಾಗಿ ಗೊತ್ತು. ಇಲ್ಲಾಂದ್ರೆ ಏನು ತಿಳಿದುಕೊಂಡಿರೋರು?

ನಮ್ಮಣ್ಣಾ 'ಏನಮ್ಮಾ ಮಂತ್ರಿಗಳ ಹತ್ರ ಹಿಂಗೆ ಮಾತಾಡ್ತಿಯಲ್ಲ' ಅಂತ ಅಂದ್ರೆ... ನಮ್ಮವ್ವಾ ನಮ್ಮಣ್ಣನ್ನೇ ದಬಾಯಿಸೋದಾ? 'ಮಂತ್ರಿಯಾದ್ರೇನು? ಮನಸ್ಯಾ ಅಲ್ವಾ? ತಂದ್ರೇನಾಯ್ತು? ತಂದಿದ್ದಕ್ಕೆ ಅವನಿಗೂ ನಾಕು ಸೇರು ಕಡ್ಲೆಕಾಯಿ ಕೊಟ್ಟರಾಯ್ತು, ಅಂತಾರೆ...'

* ಹಹ್ಹ... ಹಹ್ಹ... ಏ... ತುಂಬಾನೆ ಇನ್ನೊಸೆಂಟ್ ಇದಾರೆ ಬಿಡೆ...

–ಹೌದು. ನೀನೇ ಇಷ್ಟು ನಗ್ತಾ ಇದೀಯಾ? ಬೇರೆಯವರು ಎಷ್ಟು ಆಡಿಕೊಂಡು ನಗಲ್ಲಾ ಹೇಳು?

* ಏನೇ... ಫೋನು ಮಾಡಲಿಲ್ಲ? ಕಾಲೇಜಿಗೂ ಬರಲಿಲ್ಲಾ? ಹುಶಾರಿಲ್ಲವಾ? ನಿಂಗೆ ಸ್ಕಾಲರ್‌ಶಿಪ್ ಬಂದಿದೆ. ನೋಟಿಸ್ ಬೋರ್ಡಿನಲ್ಲಿ ಹಾಕಿದಾರೆ...

– ನಿನ್ನೆ ಬೆಳಿಗ್ಗೆ ಬಂದಿದ್ದೆ... ನೋಡ್ದೆ... ಸಿಟ್ಟು ಬಂದು ವಾಪಾಸು ಬಂದೆ...

* ಬಂದಿದ್ಯಾ? ಮತ್ತೆ ಕ್ಲಾಸಿಗೆ ಬರಲಿಲ್ಲವಾ? ಯಾಕೇ ಸಿಟ್ಯಾಕೆ?

– ಮತ್ತೆ... ಸ್ಕಾಲರ್‌ಶಿಪ್ ಬಂದಿದೆ ಅಂತ ಹಾಕಿದ್ರೆ ಸಾಕಾಗಲ್ವ? ಪರಿಶಿಷ್ಟ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ಅಂತ ಕೆಟಗರೈಸ್ ಮಾಡಿ ಯಾಕೆ ಹಾಕಬೇಕು? ಏನಗತ್ಯ ಹೇಳು?

* ಓಹ್ ಅದಾ... ಅದ್ರಲ್ಲಿ ತಪ್ಪೇನು? ಎಸ್.ಟಿ. ಎಸ್.ಸಿ. ಫಂಡ್ಸ್ ಮಾತ್ರ ಬಿಡುಗಡೆಯಾಗಿದೆಯಂತೆ... ಜನರಲ್ ಮೆರಿಟ್ಟು ಲೇಟ್ ಅಂತೆ.

– ಆ ರಾಗಿಣಿ... ವ್ಯಂಗ್ಯವಾಗಿ ನಿಮ್ದು reservation ಅಂತ ಗೊತ್ತಿರಲಿಲ್ಲ. ನಿಮ್ದೇ ಲಕ್ಕು... ಅಂತಾಳಲ್ಲ... ನಂಗೆ ಮೈ ಉರಿದುಹೋಯ್ತು... ನಮ್ಮ ಲಕ್ಕಂತೆ! ನಿಜ ಹೇಳು ಎಸ್.ಸಿ. ಆಗಿ ಹುಟ್ಟೋದು ಲಕ್ಕಾ?

* ಏ... ಬಿಡು. ನೀನು ರ್‍ಯಾಂಕು ಸ್ಟೂಡೆಂಟು ನಿಂಗೆ reservation ಇಲ್ದೆ ಇದ್ರೂ ಬರ್‍ತಾ ಇತ್ತು!

– ಅದು ಅವಳಿಗೆ ಗೊತ್ತಿಲ್ವಾ?!

* ನಿಜ ಹೇಳಲಾ? ನಿನ್ನ ಬಣ್ಣ, ಕಣ್ಣು, ಬುದ್ಧಿ, ಮಾತು ಎಲ್ಲ ನೋಡಿ ನಿನ್ನನ್ನ 'ಬ್ರೊಮ್ಮನ್' ಅಂತ ಅಂದುಕೊಂಡಿದ್ದರು... ನಿನ್ನ ಹೆಸ್ರು ಬೇರೆ ಮಮತಾ ರಾವ್ ಅಂತ ಇದೆ... ನಾನೂ ಹಾಗೇ ಅಂದುಕೊಂಡಿದ್ದೆ!

– ಏ ನಮ್ಮಜ್ಜ ರಾಯದುರ್ಗದ ಉಜ್ಜಪ್ಪ. ಹಳ್ಳಿಲೀ ರಾವು–ರಾ.ಉ. ಮನೆ ಅಂತ ಫೇಮಸ್ಸು. ನಮ್ಮಪ್ಪಂಗೆ ಸ್ಕೂಲಿಗೆ ಸೇರಿಸಬೇಕಾದ್ರೆ ರಾವು ಮನೆ ಶಿವು ಅಂತ ಹೆಸರು ಬರೆಸಿದ್ರಂತೆ. ಅದು ಆಮೇಲೆ ಶಿವರಾವು ಆಯ್ತು. ನಮ್ಮಣ್ಣ ಶಂಕರ್ ರಾವು. ನಾನು ಮಮತಾ ರಾವು. ಬೇಕಂತೆ ಕೊಟ್ಟರೋ ಏನೋ... ಯಾಕೆ ಶಾಕ್ ಆಯ್ತಾ?

* ಹೂ... ಶಾಕೂ ಆಯ್ತು, ಸಂತೋಷಾನೂ ಆಯ್ತು. ನಾವು ಬುಂಡೆ ಬೆಸ್ತರು... ನಿನ್ನ ಬೊಮ್ಮನ್ ಅಂದುಕೊಂಡು ನನ್ನ ಮನೆಗೆ ಕರ್ದೇ ಇರಲಿಲ್ಲ... ನಿಮ್ಮನೆಗೆ ಬಂದಾಗ ನಂಗೂ ಸ್ವಲ್ಪ ಅನುಮಾನ ಆಯ್ತು... ನಾ ಬಂದಿದ್ದು ಎರಡೇ ಸಲ ಅಲ್ವಾ? ಅದೂ ಐದೈದು ನಿಮಿಷ... ನಿಮ್ಮಮ್ಮ ಬೇರೆ ಇರಲಿಲ್ಲ... ಇವತ್ತೇ ನಾನು ಅವರ ಹತ್ರ ಇಷ್ಟೊತ್ತು ಮಾತಾಡಿದ್ದು... ಅಷ್ಟಕ್ಕು ನಿನ್ನ ಪರಿಚಯ ಆಗಿದ್ದೇ ಇತ್ತಿತ್ತಲಾಗ... ನಂಗೆ ಹ್ಯಾಗೆ ಗೊತ್ತಾಗಬೇಕು?

– ಏನು ಬೆಸ್ತರಾ/ ನಿನ್ನ ಥಳುಕು–ಬಳುಕು ನೋಡಿ ಮಾರವಾಡಿ ಅಂದುಕೊಂಡಿದ್ದೆ! ಅಂತೂ ಎಲ್ಲಾ ಕ್ಲಿಯರ್ ಆಯ್ತು... ಹಹಹ...

* ಹಪ್ಪ... ಏನೋ ಒಂಥರಾ... ಈಗ ಸಲೀಸಾಯ್ತು ಬಿಡು... ನಿನ್ನೆಸರು ಬೋರ್ಡ್ ಮೇಲೆ ಬಿದ್ದಾಗಿಂದ ಎಷ್ಟು ಗುಸುಗುಸ ಪಿಸಪಿಸ ನಡೆದಿದೆ ಗೊತ್ತಾ?

–ಹೌದಾ?

* ಹೂಂ... ಅದೇ ಮಾದೇಶ್ ಯೂನಿಯನ್ ಲೀಡರು...

– ಲೀಡರು? ರೌಡಿ ಅನ್ನು!

* ಏ ಸುಮ್ನಿರೆ... ಪಾಪ... ಇವತ್ತು ಬಂದು ನನ್ನ ಹತ್ರ ಅದೂ ಇದೂ ಮಾತನಾಡಿದನಪ್ಪಾ... ಏನಾದ್ರೂ help ಬೇಕಿದ್ರೆ ಮಾಡ್ತಾನಂತೆ... ನಿನ್ನನ್ನೂ ಕೇಳ್ದ! ಯಾರನ್ನೋ ಉದ್ದೇಶಿಸಿ ಏನೋ ಹೇಳಿದಂಗೆ... ನಮ್ಮವರೂ ಬುದ್ಧಿವಂತರು ಇರ್ತಾರೆ ಅಂತ ತಿಳಿದುಕೊಳ್ಳಲಿ... ಅಂತ ಏನೇನೋ ಹೇಳ್ದ...

– ಥೂ ಈ ಜಾತಿ ಅನ್ನೋದು ಹೇಗೆ ಸುತ್ತಿಕೊಂಡಿದೆ ಅಲ್ವಾ? ನಾನು ಹೈಸ್ಕೂಲಿನಲ್ಲಿದ್ದಾಗ ನಾಕು ಜನ ಹುಡುಗೀರು ಎಷ್ಟು ಫ್ರೆಂಡ್ಸ್ ಆಗಿದ್ವೀ... ಒಟ್ಟಿಗೆ ಹಂಚಿಕೊಂಡು ಊಟ ಮಾಡ್ತಾ ಇದ್ವೀ... ಯಾವಾಗ ನಾನು ಎಸ್.ಸಿ. ಅಂತ ಗೊತ್ತಾಯ್ತೋ... ಅವರ ವರ್ತನೆನೇ ಬದಲಾಗಿ ಹೋಯ್ತು. ಹೇಗೆ inhuman ಆಗಿ ನನ್ನ avoid ಮಾಡಿದರು ಗೊತ್ತಾ? ಕಾಲ ಬದಲಾಗಿದೆ ಅಂತಾರೆ... ಆದ್ರೆ ಈ ವಿಷಯದಲ್ಲಿ ಮಾತ್ರ ಇನ್ನೂ ಹಾಗೆ ಇದೆ!

* ಅಯ್ಯೋ... ನಂಗೊತ್ತಿದೆ. ಆ ಸಂಧ್ಯ ಇದಾಳಲ್ಲ... ಅವಳು ನಂಗೆ ಪಿ.ಯು.ನಲ್ಲೂ ಕ್ಲಾಸ್‌ಮೇಟ್. ಒಂದು ಸಲ ನಾವು ೪–೫ ಜನ ಹುಡುಗೀರು ಏನೋ ಕೆಲಸದ ಮೇಲೆ ಅವರ ಊರಿಗೆ ಹೋಗಿದ್ವಿ... ಹಾಗೇ ಅವರ ಮನೆಗೂ ಹೋದ್ವಿ... ಊಟಕ್ಕೆ ಕೂತಾಗ ಎಲ್ಲರಿಗೂ ತಟ್ಟೆಹಾಕಿ ನಂಗೆ ಎಲೆ ಹಾಕಿದ್ರು... ಅಬ್ಬಾ... ಹೇಗನಿಸ್ತು ಗೊತ್ತಾ? ಅನ್ನ ಅಲ್ಲ... ವಿಷ ಉಂಡ ಹಾಗೆ ಆಯ್ತು. ಸೀನ್ ಕ್ರಿಯೇಟ್ ಮಾಡಬಾರ್ದು ಅಂತ ಸುಮ್ನಿದ್ದೆ. ಈಗಲೂ ನೆನೆಸಿಕೊಂಡರೆ ದುಃಖ ಆಗುತ್ತೆ... ನಾವೇನು ಮನುಷ್ಯರಲ್ಲವಾ? ನಮ್ಮನ್ನ ಯಾಕೆ ಹಾಗೆ

ಟ್ರೀಟ್ ಮಾಡಬೇಕು? ಬುದ್ಧಿವಂತರು, ಬುದ್ಧಿವಂತರು ಅಂತ ಬೇರೆ ಸರ್ಟಿಫಿಕೇಟು! ಇದೇನಾ ಬುದ್ಧಿ?!

– ಹಾಗಾದ್ರೆ... ಬ್ರೊಮ್ಮಿನ್ ಅಂತ ತಿಳ್ಕೊಂಡೂ ನನ್ನ ಫ್ರೆಂಡ್‌ಷಿಪ್ ಯಾಕೆ ಮಾಡ್ದೇ? ನಿಜ ಹೇಳು...

* ಬ್ರೊಮ್ಮಿನ್ ಇರಬಹುದು... ಅಂತ ಅಂದ್ಕೊಂಡೆ... ಆದ್ರೆ ಅನುಮಾನಾನೂ ಇತ್ತು. ಅಷ್ಟಕ್ಕೂ ನೀನೇ ತಾನೆ ನನ್ನನ್ನ ಫಸ್ಟು ಫ್ರೆಂಡ್ ಮಾಡ್ಕೊಂಡಿದ್ದು? ನಾನಲ್ಲವಲ್ಲ? ನೆನಪು ಮಾಡ್ಕೊ, ನಾ ದೂರಾನೆ ಇದ್ದೆ. ನೀನೇ ಹತ್ರ ಬಂದೆ. ನಾನು ಲೆಕ್ಕದಲ್ಲಿ ತುಂಬಾ ವೀಕ್. ಕಷ್ಟಾನೋ ಸುಖಾನೋ ನಿಂಜತೆ ಇದ್ರೆ ಫೇಲಾಗೋದು ತಪ್ಪುತ್ತೆ ಅಂದುಕೊಂಡೆ. ನಾನು ಶತವಡ್ಡಿ ಆದ್ರೂ ನೀನು ಎಷ್ಟು ತಾಳ್ಮೆಯಿಂದ ಪಾಠ ಹೇಳಿಕೊಟ್ಟೆ. ನೋಟ್ಸ್ ನಂಗೆ ಮಾತ್ರ ಕೊಡ್ತಾ ಇದ್ದೆ. ನಾನೂ ಕೇಳಲಿಲ್ಲ ನೀನೂ ಹೇಳಲಿಲ್ಲ... ಜಾತಿ ವಿಷಯ ನಮ್ಮ ನಡುವೆ ಬರಲೇ ಇಲ್ಲ!

– ಅದು ಸುಳ್ಳು. ನಾವು ಅದರ ಬಗ್ಗೆ ಮಾತನಾಡಲಿಲ್ಲ ಅಷ್ಟೇ. ನೀನು ನನ್ನನ್ನ ಬ್ರೊಮ್ಮಿನ್ ಅಂತ ತಿಳ್ಕೊಂಡೆ. ನಾನು ನಿನ್ನನ್ನ ಮಾರವಾಡಿ ಅಂದುಕೊಂಡೆ. ಅದು ಇತ್ತು.. ಇದ್ದೇ ಇದೆ... ಅವನ್ನ ಮೀರಬೇಕು... ಆವಾಗ್ಲೆ ನಾವು ನಿಜವಾದ ಮನುಷ್ಯರು... ನಾನಂತೂ caste ಬಗ್ಗೆ ತುಂಬಾ ಸೆನ್ಸಿಟೀವ್ ಆಗಿದೀನಿ... ನಂಗೆ ತುಂಬಾ ಜನ hurt ಮಾಡಿದಾರೆ... ನಾನು ಸುಮ್ಮನೆ ರ್‍ಯಾಂಕ್ ಬಂದಿಲ್ಲ... ಅದು ಛಾಲೆಂಜ್ ಆಗಿ ತಗೊಂಡಿದೀನಿ... ತೆಗಿಲೀ ನೋಡೋಣ ನನಗಿಂತ ನಾಕು ಮಾರ್ಕ್ಸ್... I challenge...

* ಏ ಸುಮ್ಮಿರು... ಛಾಲೆಂಜ್ ಮಾಡಬೇಡ... ನೀನೇ ತೆಪ್ಪಗೆ ಫಸ್ಟ್ ಬಾ... ಎಲ್ಲರಿಗೂ ತಲೆ ಇದೆ... ಅದ್ರಲ್ಲಿ ಬುದ್ಧಿನೂ ಇದೆ... ಅಂತ ಗೊತ್ತಾಗಲಿ...

– ಹಷ್ಟು... ಒಂದು ಸಣ್ಣ ಸಂಗತಿ... ರಾತ್ರೊ ರಾತ್ರಿ equationಗಳು ಎಷ್ಟು ಬದಲಾದವು ನೋಡು...

* ಹೂಂ... ಲಾಸ್ಟ್ ಬೆಂಚಿನಲ್ಲಿ ಕೂರ್ತಾರಲ್ಲ... ಚನ್ನಮ್ಮಾ... ರತ್ನಮ್ಮಾ... ಅವರಿಗೂ ಸ್ಕಾಲರ್‌ಶಿಪ್ ಬಂದಿದೆ. ಒಳ್ಳೆ ಕಂಗಾಲಾದವರಂತೆ ಇಬ್ರೇ ಒಟ್ಟಿಗೆ ಇರ್‍ತಾ ಇದ್ರು... ಇವತ್ತು ನನ್ನನ್ನ ನೋಡಿ ನಕ್ಕರು! ನಗೋಕೂ ಇವತ್ತು ಧೈರ್ಯ ಬಂತು ಅಂತ ಕಾಣುತ್ತೆ... ಪಾಪ ಅವಳೂ ಎಸ್.ಸಿ. ಕಣೇ...

– ಪಾಪ ಅಂತ ಯಾಕೆ ಅಂತೀಯಾ? ಎಸ್.ಸಿ. ಆಗಿ ಹುಟ್ಟೋದು ಪಾಪ ಏನು? ಆ ಜೋಶಿ ದಿನಕ್ಕೆ ಹತ್ತು ಮೆಸೇಜ್ ಕಳಿಸ್ತಾ ಇದ್ದ. ಎರಡು ಸಲ ಫೋನ್ ಮಾಡ್ತಾ ಇದ್ದ... ನಿನ್ನೆಯಿಂದ ಮೆಸೆಜೂ ಇಲ್ಲ, ಫೋನೂ ಇಲ್ಲ! caste ಇದ್ರೆ ಇರಲಿ ಅನ್ನಬಹುದಿತ್ತು... ಆದ್ರೆ ಅದರ ಹಿಂದೆ ಕ್ರೂಯಲಿಟಿ ಇದ್ಯಲ್ಲ... ಅಬ್ಬಾ how ಕ್ರೂಯಲ್ ಇಟ್‌ಈಸ್... ಅದಕ್ಕೆ ಅದು ಇರಬಾರ್ದು...

* ಏ... ಯಾಮಾರಬೇಡವೆ. ಆ ಜೋಶಿ ಅಂದ್ರೆ ಜೋಷಿಪುರದವನು ಅಷ್ಟೇ... ಅವನು ನಮ್ಮ ಪೈಕಿನೇ.

– ವಾಟ್? ಹೌದಾ?

* ಶಾಕ್ ಆಯ್ತಾ? 'ನಿನಗಿಂತ ಮೇಲು' ಹಾಗಂತ ಅಂದುಕೊಂಡು ಬುದ್ಧಿ ತೋರ್ಸಿದಾನೆ...

– ......................................

* ಹಲೋ... ಯಾಕೆ? ಸೈಲೆಂಟ್ ಆಗಿಬಿಟ್ಟೆ... ಬಿಟ್ಟುಬಿಡೆ. ವರಿ ಮಾಡ್ಕೊಬೇಡ...

– ... ಪಶು, ಪಕ್ಷಿ... ಪ್ರಾಣಿ... ಕ್ರಿಮಿ ಕೀಟಗಳೇ ಮೇಲು ಕಣೇ... ಮನುಷ್ಯ... ಖಂಡಿತ ಅಲ್ಲ!

●

# ನೀರ... ಮೇಲಣ... ಗುಳ್ಳೆ...

* ಹಲೋ... ಹಲೋ... ನಂದೂ... ನಾನು...

– ಯಾವಾಗ ಬಂದ್ಯೆ... ಮದುವೆ ಚೆನ್ನಾಗಾಯ್ತಾ?

* ಹೂಂ... ನೀನೂ ಬರಬಹುದಿತ್ತಪ್ಪಾ... ಕೊನೆ ಮಿನಿಟ್ ತಂಕಾ ಕಾದ್ವಿ... ಎರಡು ದಿನ ಅಡುಗೆ ಕೆಲ್ಸ ಇಲ್ಲದೆ ಬರೇ ಊಟ–ತಿಂಡಿ ಮಾಡಿಕೊಂಡು ಹರಟೆ ಹೊಡಕೊಂಡು, ಆರಾಮಾಗಿ ಇದ್ವೀ... ಚಂದ್ರಾ, ಶುಭ, ರೇಣು, ದಿವ್ಯಾ ಎಲ್ಲ ಬಂದಿದ್ರಪ್ಪಾ. ಒಳ್ಳೇ ಪಿಕ್‌ನಿಕ್ ಥರಾ ಇತ್ತು. ನಂಗಿಂತ ನಿಮಗೇ ಅವರು ಚೆನ್ನಾಗಿ ಪರಿಚಯ... ಯಾಕೆ ಬರಲಿಲ್ಲ, ಏನಾರಾ ಜಗಳಾ – ಗಿಗಳಾ?

– ಹಾಗೇನಿಲ್ಲ... ವಿಪರೀತ ಆಡಂಬರ – ದೌಲು ಕಂಡ್ರೆ ರೋಸಿ ಹೋಗುತ್ತೆ! invitation ನೋಡಿದ್ಯಾ? ಒಳ್ಳೆ ಬಾಳೆ ಎಲೆಯಷ್ಟು ದೊಡ್ಡದಿದೆ... ಬೆಳ್ಳಿ ತಟ್ಟೇಲೀ ಬೇರೆ ಇಟ್ಟುಕೊಟ್ಟಿದ್ದಾರೆ...

* ಏನು ತಟ್ಟೆನಾ? ಬೆಳ್ಳೀದೂ... ಅದೂ ನಿಂಗೇನಾ?

– ಹೂಂ... ಚಿಕ್ಕ ಬೆಳ್ಳೀ ತಟ್ಟೆ... ಆದ್ರೂ... ಇದ್ಯಾವ ಸೀಮೆ ರಿವಾಜು ಅಂತೀನೀ...

* ನಂಗೆ ಬೆಳ್ಳಿಯ ಅರಿಶಿನ–ಕುಂಕುಮ ಬಟ್ಟಲು ಜತೆ ಕೊಟ್ರು... ನಂಗಿಂತ, ನಿನಗಿಂತ ಇನ್ನೂ ಹೆಚ್ಚು ಆಪ್ತರಿಗೆ ಚಿನ್ನದ ತಟ್ಟೆನೇ ಕೊಟ್ಟಿದಾರೋ ಏನೋ...?!

– ಹೇಗಿತ್ತು ಮದುವೆ?

* ಭರ್ಜರಿ ಕಣೇ... ಅದೇನು ವೈಭವ ಅಂತೀಯಾ? ಇದೇ ಫಸ್ಟ್‌ಟೈಮ್ ಇಂಥಾ ಮದುವೆ ನೋಡಿದ್ದು... ಗಡಿಬಿಡಿ, ಗೊಂದಲ, ಜಗಳಾ... ಏನೂ ಇಲ್ಲ... ಎಲ್ಲಾ ಸುಸೂತ್ರವಾಗಿತ್ತು... ಸ್ವಾಗತ ಮಾಡೋಕೆ, ತಾಂಬೂಲ ಕೊಡೋಕೆ, ಊಟ ಬಡಿಸೋಕೆ, ಪುರೋಹಿತರು ಕೇಳಿದ್ದನ್ನು ತಂದುಕೊಡೋಕೆ, ಬಂದ ಜನಾನಾ ವಿಚಾರಿಸಿಕೊಳ್ಳೋಕೆ ಎಲ್ಲ... contract ಅಂತೆ, ಅವರದೇ ಜನಾ... ಛತ್ರ, ಊಟ, ಅಲಂಕಾರ... ಎಲ್ಲ ಅವರದ್ದೇ ಅಂತೆ... ದುಡ್ಡು ಕೊಟ್ಟರೆ ಆಯ್ತು... ಜನ ಎಷ್ಟು ಅಂತೀಯಾ? ಐದು ಸಾವಿರ ಅಥವಾ ... ಇನ್ನೂ ಜಾಸ್ತಿನೇ... ಗಿಜಿಗಿಜಿ ಗಿಜಿಗಿಜಿ ಅಂತಿತ್ತು. ಗಂಡು–ಹೆಣ್ಣನ್ನು ಮಾತಾನಾಡಿಸೋದಿರಲಿ ಹತ್ತಿರ ಹೋಗಲಿಕ್ಕೂ ಆಗಲಿಲ್ಲ... ಟಿ.ವಿ. ಪರದೆ ಮೇಲೆ ನೋಡಿದ್ದಷ್ಟೇ... ಪ್ರೆಸೆಂಟೇಶನ್ಸ್ ಕೂಡ ಸ್ಟೇಜ್ ಮೇಲೆ ಕೊಡೋಕೆ ಆಗಲಿಲ್ಲ. ವಾಪಾಸು ಬರ್ತಾ ಶಾರದಮ್ಮನ ಕೈಲಿ ಕೊಟ್ಟು

ಬಂದ್ವಿ. ನಾನೊಂದು ರಾಧಾ–ಕೃಷ್ಣನ ಗಂಧದ ವಿಗ್ರಹ ತಗೊಂಡು ಹೋಗಿದ್ದೆ. ಅಯ್ಯೋ ಅವರ ವೈಭವದ ಮುಂದೆ ನಮ್ದು ಯಾವ ಲೆಕ್ಕ? ಒಬ್ಬನೇ ಮಗಾ ಅಂತೆ. ಶಾರದಮ್ಮನಿಗೆ ಭಾರೀ ಬೀಗರು ಸಿಕ್ಕವರೇ. ನಂಗೆ ರಾಧಾ ಮೊದ್ಲೇ ಹೇಳಿದ್ಲು, Engagementಗೆ ಸಾವಿರದ ಮೇಲೆ ಜನ ಬಂದಿದ್ರು ಅಂತ. ನಮ್ಮಂತವರಾದರೆ ಅದೇ ದುಡ್ಡಲ್ಲಿ ಹತ್ತು ಮದುವೆ ಮಾಡಬಹುದು ಅನ್ನಿಸ್ತು. ಬೆಳಿಗ್ಗೆ, ಮಧ್ಯಾಹ್ನ, ರಾತ್ರಿ, ಪ್ರತಿಸಲಾನೂ ಮೂರು ಮೂರು ಸ್ವೀಟ್, ಬಾಳೆ ಎಲೆ ಊಟಾನೂ ಇತ್ತು. ಸ್ಟಾಲೂ ಹಾಕಿದ್ರೂ... ನೂರೆಂಟು ಬಗೆ. ನಾನು ಇದೇ ಫಸ್ಟ್ ಟೈಮ್ ನೋಡಿದ್ದಪ್ಪಾ. ಸಾಲಾಗಿ ಸ್ಟಾಲು. ಜನ ಹ್ಯಾಂಗೆ ತಿಂತಿದ್ರು ಗೊತ್ತಾ?

– ಹಹ್ಹ... ಹಹ್ಹ... ಬೆಂಗಳೂರಿನ ಜನ ಒಂದು ಮದುವೆ ತಪ್ಪಿಸಿಕೊಳ್ಳಲ್ಲ ಗೊತ್ತಾ? ಅಷ್ಟಕ್ಕೂ ಅವರು ಪರಸ್ಪರ ಮುಖ ನೋಡೋದು ಮದುವೆ, ಮುಂಜಿ, ಸಾವಿಗೆ ಮಾತ್ರ. ಮಿಕ್ಕ ಟೈಮಲ್ಲಿ ಒಬ್ಬರನ್ನೊಬ್ಬರು ನೋಡೋದೇ ಇಲ್ಲ. ಅವರ ಫಂಕ್ಷನ್‌ಗೆ ಇವರು, ಇವರ ಫಂಕ್ಷನ್‌ಗೆ ಅವರು ತಪ್ಪಿಸಲ್ಲ. ನೋಡೋರಿಗೆ ಎಷ್ಟು contact ಇಟ್ಟುಕೊಂಡಿದಾರೆ ಅಂತ ಅನ್ನಿಸಬೇಕು.

* ಸುಬ್ಬಣ್ಣನ ಅಜ್ಜ ಗಾಣದಲ್ಲಿ ಎಣ್ಣೆ ತೆಗೆದು ಮಾರ್ತಾ ಇದ್ರಂತೆ. ಸುಬ್ಬಣ್ಣನ ಕಾಲಕ್ಕೆ ಮಿಲ್ಲು ಬಂತು. ಆದ್ರೂ ಮಾರಾಯ್ತಿ... ಮಿಲ್ಲಿಂದ ಹೀಗೇ ಸುರಿಯೋ ಅಷ್ಟು ದುಡ್ಡು ಬರುತ್ತಾ?

– ನಿಂಗೊತ್ತಿಲ್ವಾ. ಸುಬ್ಬಣ್ಣ ಎಲೆಕ್ಷನ್‌ಗೆ ನಿಲ್ಲಬೇಕು ಅಂತ ಇದ್ದಾರೆ.

* ಹೌದಾ?

– ಹೂಂ. ಈಗ ಮದುವೆಗೆ ಹೋಗಿ ಉಂಡುಕೊಂಡು ಬಂದಹಂಗೆ ಅಲ್ಲ. ನಾಳೆದಿನ ಶಾರದಮ್ಮನ ಜತೆ ಎಲೆಕ್ಷನ್ ಕ್ಯಾನ್‌ವಾಸ್‌ಗೂ ಹೋಗಬೇಕಾಗುತ್ತೆ.

* ಏ ಇಲ್ಲಪ್ಪಾ.

– ಅದ್ಹೇಗೆ ಆಗುತ್ತೆ? ಬೆಳ್ಳಿ ಕುಂಕುಮದ ಬಟ್ಟಲು, ಮೂರು ಮೂರು ಸ್ವೀಟು. ಋಣ ತೀರಿಸಬೇಡವೆ? ದುಡ್ಡಿದೆ ಅವರ ಹತ್ರ. ಅವರಿಗೀಗ ಜನ ಬೇಕು.

* ಏನೋಪ್ಪಾ...

– ನಿಂಗೂ ಮಗಾ ಇದಾನಲ್ಲ. ಅಲ್ಲೇ ಯಾರನ್ನಾದರೂ ಭಾರಿ ಬೀಗರನ್ನು ಹುಡುಕಬೇಕಿತ್ತು?

* ಅರೆ. ನಿಂಗೆ ಹೆಂಗೆ ಗೊತ್ತಾಯ್ತು? ಅದೂ ಪ್ಲಾನ್ ಇತ್ತು ಅಂತ ಇಟ್ಕೋ. ರಾಹುಲ್‌ಗೂ ೨೮ ಆಯ್ತು. ಯಾಕೋ ಒಂದೂ ಸೆಟ್ ಆಗ್ತಾ ಇಲ್ಲ. ಒಂದೆರಡು ಜಾತಕ ತಂದಿದೀನಿ. ಹುಡುಗಿರೇನೋ ಇದಾರೆ. ಒಳ್ಳೆ ಫ್ಯಾಮಿಲಿ, ಅನುಕೂಲಸ್ಥರು ಎಲ್ಲ ಸರಿ, ಆದ್ರೆ ಕಂಡೀಷನ್ನು ಹಾಕ್ತಾರೆ. ಒಂದು ಹುಡುಗಿ ನಮ್ಮ ರಾಹುಲ್‌ಗೆ ತುಂಬಾ ಇಷ್ಟ ಆಯ್ತಪ್ಪಾ. ಮುಂದಿನವಾರ ನಮ್ಮ ಮನೆಗೇ ಬರ್ತಾರಂತೆ. ಅವರು ನಮ್ಮನೆ ನೋಡಬೇಕಂತೆ! ಹುಡುಗಿ ತುಂಬಾ ಚೆನ್ನಾಗಿದ್ದಾಳೆ, ಓದಿದಾಳೆ, ಕೆಲ್ಸದಲ್ಲಿ ಇದಾಳೆ. ತಿಂಗಳಿಗೆ ಅರವತ್ತು ಸಾವಿರ

ರೂಪಾಯಿ ಸಂಬಳ ಅಂತೆ. ಚನ್ನಾಗಿ ಹಾಡ್ತಾಳೆ. ಅಡುಗೇನೂ ಇಷ್ಟ ಆದಾಗ ಮಾಡ್ತಿನಿ; ಟೈಮ್ ಇರಲ್ಲ ಅಂದ್ಲು. ಈಗಿನ ಕಾಲದ ಹುಡುಗಿ, ಯಾಕೋ ವೇಷ ನಂಗೆ ಹಿಡಿಸ್ಲಿಲ್ಲ. ಒಬ್ಬಳೇ ಮಗಳು, ತುಂಬಾ ಅನುಕೂಲವಾಗಿದಾರೆ. ನಮ್ಮನೆಯವರಿಗೂ ಇಷ್ಟ ಇದೆ. ಹುಡುಗಿ ಅಪ್ಪಂದು ಬಿಸಿನೆಸ್ ಅಂತೆ. ನಮ್ಮ ರಾಹುಲ್‌ಗೂ ಇಷ್ಟ ಇದೆ ಅಂತ ಗೊತ್ತಾಯ್ತು.

– ಹೂಂ. ಇನ್ನೊಂದು ಭಾರಿ ಮದುವೆ ಅನ್ನು!

* ಹಪ್ಪ. ಋಣಾನುಬಂದ ಅಲ್ವಾ. ದೇವರಿಚ್ಛೆ! ಜಾತಕ ಕೂಡಿ ಬರಬೇಕು.

– ಸರಿ ಸರಿ...

* ಅದೆಲ್ಲ ಇರ್ಲಿ... ಏನಡಿಗೆ ಇವತ್ತು?

* * *

* ಹಲೋ... ನಂದೂ...

– ಏನು ಸಮಾಚಾರಾ? ಫಿಕ್ಸ್ ಆಯ್ತಾ? ಬಂದಿದ್ರಾ?

* ಹೂಂ. ಬಂದಿದ್ರು...

– ನಿನ್ನೆ ಫೋನ್ ಮಾಡಿದ್ಯಂತೆ. ನಾನು ಅಂಗಡಿಗೆ ಹೋಗಿದ್ದೆ. ತುಂಬಾ ಟೆನ್‌ಷನ್‌ನಲ್ಲಿ ಇದ್ದೀಯಾ ಅಂತ ನಮ್ಮನೆಯವರು ಹೇಳಿದ್ರೂ. ಏನಾಯ್ತು? ಯಾಕೆ?

* ದೊಡ್ಡವರ ಸಹವಾಸ ಕಷ್ಟ ಕಣೇ.

– ಯಾಕೆ?

* ಹುಡುಗಿ ಮಾಂಸ ತಿಂತಾಳಂತೆ. ಅದೇನೋ ಜಿನ್ ಕುಡಿತಾಳಂತೆ. ಸೀರೆ ಉಡಲ್ಲವಂತೆ. ಪ್ಯಾಂಟೇ ಹಾಕೋದಂತೆ. ಅದೇನೋ hangout ಅಂತೆ, ಡ್ಯಾನ್ಸ್ ಮಾಡ್ತಾಳಂತೆ. ಎಲ್ಲ ಪಟಪಟ open ಆಗಿ ಹೇಳ್ತಾಳೇ ಕಣೇ. ಒಂಚೂರು ಅಂಜಿಕೇನೆ ಇಲ್ಲ! ಅವಳ ಭಾಷೆ–ವೇಷ ಎರಡೂ ನಂಗೆ ಇಷ್ಟ ಆಗಲಿಲ್ಲ.

– ಆಮೇಲೆ?

* ರಾಹುಲ್ ಇಷ್ಟಪಟ್ಟ. ನಂಗೇ ಗೊತ್ತಿರಲಿಲ್ಲ! ಮಾಂಸ–ಮಡ್ಡಿ ಇವನೂ ತಿಂತಾನಂತೆ. ಅದೇನೋ ಬೀರು ತಕ್ಕೋತಾನಂತೆ. ಇಬ್ರೂ ಮಾತಾಡಿಕೊಂಡರು. ಇನ್ನೂ ಒಂದು ಕಂಡೀಷನ್ನು.

– ಏನು? ಏನದು?

* ಮದುವೆ ನಂತರ ಬೇರೆ ಮನೆ ಮಾಡಬೇಕು ಅಂತ. ಪರಸ್ಪರ ದೂರ ಇದ್ದು ಬಂದು ಹೋಗಿ ಮಾಡಿದ್ರೆ ಸಂಬಂಧ ಚೆನ್ನಾಗಿರುತ್ತೆ. ಕ್ಲಾಶಸ್ ಇರಲ್ಲ ಅಂತ ಅವರಪ್ಪ ಹೇಳ್ತಾನೆ. 'ನನ್ನ ಮಗಳು ತುಂಬಾ ambitious. ಜೀವನದಲ್ಲಿ ಏನೇನೋ ಸಾಧಿಸಬೇಕು

ಅಂತ ಇದ್ದಾಳೆ. ಫ್ಯಾಮಿಲಿ ಪ್ರಾಬ್ಲಂ ಇದ್ದರೆ ಅವೆಲ್ಲ ಸಾಧಿಸೋಕೆ ಆಗಲ್ಲ. ಅಮೆರಿಕಾ, ಯುರೋಪ್ ಅಂತೆಲ್ಲ ತಿರುಗಾಡಬೇಕಾಗುತ್ತೆ? ನಾವು ಫ್ರೀಯಾಗಿ ಬೆಳೆಸಿದೀವೀ. ಇರೋ ವಿಷಯ ಮುಚ್ಚುಮರೆ ಇಲ್ಲದೆ ಹೇಳಿದೀವೀ. ಯೋಚನೆ ಮಾಡಿ. ಒತ್ತಾಯ ಇಲ್ಲ.' ಅಂತ ಅವರಮ್ಮ ಹೇಳ್ತಾಳೇ. ಅವಳೂ ಬಾಬ್‌ಕಟ್ ಲೇಡಿನೇ.

– ರಾಹುಲ್ ಏನಂದ?

* 'ನಾನು ಹೇಗೆ ಇರಬೇಕು ಅಂತ ಅಂದುಕೊಂಡಿದ್ದೇನೋ ಹಾಗೆ ಇದಾಳೆ ಹುಡುಗಿ. ನಂಗೆ ತುಂಬಾನೇ ಇಷ್ಟ ಇದೆ. ಏನು ಮಾಡೋದು? ಫ್ರೀಯಾಗಿ ಕ್ಲಾಶಸ್ ಇಲ್ದೆ ಬದುಕಬೇಕು ಅಂತ ಅವಳ ಆಸೆ. ಇರೋ ವಿಷಯ ಮುಚ್ಚಿಡದೆ ಹೇಳಿದಾಳೆ. ನೀವು ಹೂಂ ಅಂದ್ರೆ ಓಕೆ. ಇಲ್ಲಾಂದ್ರೆ ಬೇಡ ಅಂದ.'

– ಸರಿ ಇನ್ಯಾಕೆ ಟೆನ್‌ಷನ್?

* ಅದನ್ನ ಹೆಂಗೆ ಹೇಳ್ದ ಅಂದ್ರೆ 'ಕಾಲ ಬದಲಾಗಿದೆ. ನೀವೂ ಬದಲಾಗಬೇಕು' ಅನ್ನೋ ರೀತಿ. ಇಂಥ ಸಂಬಂಧ ಬೇಡ ಅಂತ ಕಡ್ಡಿ ಮುರಿದ ಹಾಗೆ ಹೇಳ್ತಾನೇ ಅಂತ ಅಂದುಕೊಂಡಿದ್ದೆ! ಅಪ್ಪ–ಅಮ್ಮನ ದೂರ ಇಡೋಕೂ ರೆಡಿ ಇದಾನೆ ಅಂತ ಗೊತ್ತಾಗಿ ಎದೆಗೆ ಚೂರಿ ಹಾಕಿದ ಹಾಗಾಯ್ತು! ಅಲ್ಲವೇ ಅಜ್ಜಿ–ತಾತನ ಜತೆ ಬೆಳೆದೋನಿಗೆ ಸ್ವಲ್ಪನಾದ್ರೂ concern ಬೇಡವಾ? ನಾನು ಅವರನ್ನು ನೋಡಿಕೊಂಡ ರೀತೀಲಿ, ತನ್ನ ಹೆಂಡತಿ, ತನ್ನ ಅಮ್ಮನನ್ನು ನೋಡಿಕೊಳ್ಳಬೇಕು ಅಂತ ಅವನಿಗೆ ಅನ್ನಿಸೋದು ಬ್ಯಾಡವಾ? ಮನೇಲಿ ನಾಕು ಜನದ ಜತೆ ಹೊಂದಿಕೊಳ್ಳಲಾರದವರು ಆಫೀಸಿನಲ್ಲಿ, ಹೊರಜಗತ್ತಿನಲ್ಲಿ ನೂರಾರು ಜನರ ಜತೆ ಹೇಗೆ ಹೊಂದಿಕೋತಾರೆ? ಆಗ ಕ್ಲಾಶಸ್ ಬರಲ್ಲವಾ? ಈ ಕಂಡಿಷನ್ನು ಕೇಳಿ ನಮ್ಮನೆಯವರೂ ಶಾಕ್ ಆದ್ರೂ. ಅವರು ಒಂದು ದಿನ, ಒಂದು ದಿನ ರಾಹುಲ್‌ನ ಬಿಟ್ಟು ಇದ್ದೋರಲ್ಲ. ಅಷ್ಟು ಪ್ರೀತಿ. attachment...

– ಅಯ್ಯೋ. ನಿಂಗೊತ್ತಿಲ್ವಾ? ಅತ್ತೆ–ಮಾವ–ನಾದಿನಿ–ಮೈದುನ ಇವರು ಇರಲೇಬಾರದು ಅಂಥ ಮನೆ ಹುಡುಕ್ತಾರೆ. ಹಾಗೆ ನೋಡಿದರೆ ನೀನೇ ಲಕ್ಕೀ. ಮನೇ ಮಾತ್ರ ಬೇರೆ ಮಾಡಬೇಕು ಅಂದಿದ್ದಾಳೆ. ಹೋಗಿ ಬರೋಕೂ ಪರ್ಮಿಷನ್ ಇದೆಯಲ್ಲಾ?

* ನನ್ನ ರಕ್ತ ಹಂಚಿಕೊಂಡು ಹುಟ್ಟಿದ ಮಗ ಈ ರೀತಿ ಆಲೋಚನೆ ಮಾಡೋಳನ್ನ ಕಟ್ಕೋತಿನಿ ಅಂತಾನಲ್ಲ. ಇದೇನಾ ಕಳ್ಳುಬಳ್ಳಿ ಸಂಬಂಧಾ? ಸಂಬಂಧ? ಸಂಬಂಧಾ ಅನ್ನೋದು ದೊಡ್ಡ ಸುಳ್ಳು, ಮೋಸ.

– ಆಮೇಲೆ?

* ನಿನ್ನಿಷ್ಟ ಕಣ್ಣಪಾ ಅಂದೆ. ಇನ್ನೂ ಫೈನಲ್ ಆಗಿ ಹೇಳಿಲ್ಲ. ನೋಡಬೇಕು...

– ಓ.ಕೆ. ನಾಳೆ ಫೋನ್ ಮಾಡು. ಸರಿ... ಇಡ್ಲಾ?

●

# ಇಲ್ಲಿರಲಾರೆ... ಅಲ್ಲಿಗೆ ಹೋಗಲಾರೆ...

* ಹಲೋ...

ಹಲೋ... ಹಲೋ... ಚಿನ್ನೂ...

* ಸ್ಕೂಲಿಂದ ಯಾವಾಗ ಬಂದೆ ಪುಟ್ಟಾ?

– ಫೋರೋ ಕ್ಲಾಕ್...

* ಯುನಿಫಾರಂ ಬಿಚ್ಚಿ ಬೇರೆ ಬಟ್ಟೆ ಹಾಕ್ಕೊಂಡ್ಯಾ ಪುಟ್ಟಾ?

– ಹೂಂ...

* ಹಾಲು?

– ಕುಡ್ದೆ...

* ಕಾಂಪ್ಲೇನ್?

– ಯಸ್...

* ಬಾಕ್ಸ್‌ನಲ್ಲಿ ಕೇಕು, ಪಫ್ಸ, ಚಿಪ್ಸ, ಚಕ್ಕುಲಿ ಎಲ್ಲ ಇದೆ. ತಿಂದುಬಿಟ್ಟು ಸ್ವಲ್ಪ ಹೊತ್ತು ಜಾಕಿ ಜತೆ ಆಟಾಡಿ ಆಮೇಲಿ ಡೈರಿ ನೋಡ್ಕೊಂಡು ಹೋಂವರ್ಕ್ ಮಾಡು... ಆಯ್ತಾ ಚಿನ್ನು?

– ಮಮ್ಮಾ ನಂಗೆ ಕಾರ್ಟೂನ್ ನೋಡಬೇಕು.

* ಹೂಂ. ಅರ್ಧಘಂಟೆ ನೋಡು.. ಆದ್ರೆ ಗೇಮ್ಸ್ ಆಡಬೇಡಾ. ಓ.ಕೆ.? ನೀನು good girl ಅಲ್ವಾ? ಹೋಂವರ್ಕ್ ತಪ್ಪಿಸಬೇಡ... ಬೆಳಿಗ್ಗೆ ಜಾಗಿಂಗ್‌ಗೆ ಪಪ್ಪಾ ಜತೆ ಹೋಗು... ನಾನು ಇನ್ನು ಎರಡು ದಿವಸದಲ್ಲಿ ಬಂದುಬಿಡ್ತೀನಿ, ಒ.ಕೆ.?

– ಹೂಂ...

* ರಂಗಮ್ಮ ಇದಾರೋ ಎಲ್ಲಾರ ಹಾಳಾಗಿ ಹೋಗಿದಾರೋ? ಹಾಲಿಗೆ ನೀರು ಹಾಕದೆ ಗಟ್ಟಿ ಕೊಡೋಕೆ ಹೇಳು! ಇದಾರಾ?

– ಗಾರ್ಡನ್‌ನಲ್ಲಿ ಗಿಡಕ್ಕೆ ನೀರು ಹಾಕ್ತಾ ಇದಾರೆ...

* ಹೂಂ... ಗಿಡಕ್ಕೆ ನೀರು ಹಾಕ್ತಾ ಇದಾಳೋ, ಪಕ್ಕದಮನೆಯವರ ಹತ್ರ ಗಾಸಿಪ್ ಮಾಡ್ತಾ ಇದಾಳೋ... keep an eye on her... ಪುಟ್ಟಾ, ಮೀಟಿಂಗ್‌ನಲ್ಲಿ ಇದ್ದೀನಿ... ಆಮೇಲೆ ಫೋನ್ ಮಾಡ್ತೀನಿ... ಅರ್ಜಂಟ್ ಇದ್ರೆ ನೀನೆ ರಿಂಗ್ ಮಾಡು ಓ.ಕೆ.?

– ಮಮ್ಮಾ...

* ಏನಪ್ಪಿ?

– ನಂಗೆ ಬೇಜಾರು... ನಾಳೆನೇ ಬನ್ನಿ...

* ಹಾಗೆ ಅನ್ನಬಾರದು ಕಂದಾ... ನೀನು good girl ಅಲ್ವಾ? ರಂಗಮ್ಮಾ ಇದಾರೆ, ರಾಜು ಇದಾರೆ...ಜಾಕಿ ಇದೆ... ಪಪ್ಪಾ ಇದಾರೆ...

– ಪಪ್ಪಾ ನಿನ್ನೆ ಸಿಕ್ಕೇ ಇಲ್ಲಾ... ಇವತ್ತು ಮಾರ್ನಿಂಗ್ ಸಿಕ್ಕೇ ಇಲ್ಲ... ನೈಟ್ ಸಿಕ್ತಾರೋ... ಟ್ರೈ ಮಾಡ್ತಿನೀ... ರಿಂಗ್ ಮಾಡ್ದೆ, ರೀಚ್ ಆಗ್ತಾ ಇಲ್ಲ.

* ಓ.ಕೆ. ನಾನು ಹೇಳಿ ಪಪ್ಪಾಗೆ contact ಮಾಡೋಕೆ ಹೇಳ್ತೀನಿ...

– ರಂಗಮ್ಮ ಬರೀ ಟಿ.ವಿ. ನೋಡ್ತಾಳೆ... ಮಮ್ಮಾ

* ಬರೀ ಟಿ.ವಿ. ಗೂಬೆ ಆಗಿದಾಳೆ ಅವಳು... ವರಿ ಮಾಡಬೇಡ. ಅವಳಿಗೆ ನಿಂಗೆ ಕತೆ ಹೇಳಲಿಕ್ಕೆ ಹೇಳ್ತೀನಿ. ಮೀಟಿಂಗ್ ನಡೀತಾ ಇದೆ. ಆಮೇಲೆ ರಿಂಗ್ ಮಾಡ್ತಿನೀ. ಓ.ಕೆ. ಟೇಕ್ ಕೇರ್. ಬೈ ಚಿನ್ನೂ...

– ಬೈ ಮಮ್ಮಾ...

* * *

* ಮಮ್ಮಾ...

– ಏನು ಕಂದಾ. ಸಾರಿ ರಿಂಗ್ ಮಾಡೋಣ ಅಂತ ಇದ್ದೆ. ಈಗ ಮೀಟಿಂಗ್ ಮುಗೀತು. ಹೋಂವರ್ಕ್ ಆಯ್ತಾ ಕಂದಾ?

* ಆಗ್ತಾ ಇದೆ. ಮಮ್ಮಾ ಸೊಳ್ಳೆ ಕಚ್ತಾ ಇದೆ. ಕಾಲಲ್ಲಿ ಫೋರ್ tablet ಥರಾ four ಗುಳ್ಳೆ ಬಂದಿದೆ.

– ರಂಗಮ್ಮ ಇಲ್ವಾ? ಕೊಡು ಅವಳಿಗೆ ಮಾತಾಡ್ತೀನಿ.

* ಅವಳು ವೆಜಿಟೆಬಲ್ ತರ್ತೀನಿ ಅಂತ ಹೋದ್ಲು ಮಮ್ಮಾ.

– ಥತ್. ನಾನಿಲ್ಲ ಅಂದ್ರೆ ತರಕಾರಿ ನೆವ ಮಾಡ್ಕೊಂಡು ತಂಗಿ ಮನೆಗೋ, ದೇವಸ್ಥಾನಕ್ಕೋ ಹೋಗ್ತಾಳೆ. ಕಿಟಕಿ–ಬಾಗಿಲು ಹಾಕ್ದೆ ಹೋಗಿದಾಳೆ ಅಂತ ಕಾಣುತ್ತೆ. ಅದಕ್ಕೆ ಸೊಳ್ಳೆ. ಸೋಫಾ ಹಿಂದೆ ಸ್ವಿಚ್ ಆನ್ ಮಾಡು. ಮಸ್ಕಿಟೊ ಕಾಯಿಲ್ ಇದೆ. ಸ್ವಲ್ಪ ಹೊತ್ತು

ಕಾಲು ಮೇಲೆ ಇಟ್ಕೊಂಡು ಕೂತ್ಕೊ. ಸೋಫಾದ ಕೆಳಗೆ ಜಾಸ್ತಿ ಸೊಳ್ಳೆ. ಪ್ಯಾಂಟ್ ಹಾಕ್ಕೋ. ಫುಟ್ ಕವರ್ ಮಾಡ್ಕೋ. ಚಳಿ ಇದ್ಯಾ ಪುಟ್ಟಾ.

* ಹೂಂ ಮಮ್ಮಾ ಕೋಲ್ಡ್ ಆಗ್ತಾ ಇದೆ.

– ಬೀರುವಲ್ಲಿ ಸ್ವೆಟರ್ ಇದೆ ಹಾಕ್ಕೊ.

* ಮಮ್ಮಾ tablet ಥರಾ ಗುಳ್ಳೆ ಕೆಂಪಗೆ ಉರಿತಾ ಇದೆ.

– ರಂಗಮ್ಮ ಬಂದ ಕೂಡಲೆ ಹೇಳು, ಏನಾದ್ರು ಹಚ್ತಾಳೆ. ಬಂದ ತಕ್ಷಣ ರಂಗಮ್ಮನಿಗೆ ರಿಂಗ್ ಮಾಡಕ್ಕೆ ಹೇಳು. ಓ.ಕೆ.? ಬೈ.

* * *

* ಹಲೋ, ಅಮ್ಮೋರೆ ನಾನು ರಂಗಮ್ಮಾ.

– ಎಲ್ಲಿ ಹಾಳಾಗಿ ಹೋಗಿದ್ದೆ ಮಗೂನ ಬಿಟ್ಟು? ತರಕಾರಿ ಇತ್ತಲ್ಲ? ರಾಜುಗೆ ಹೇಳಿದ್ರೆ ತರ್ತಾ ಇದ್ದ.

* ಅಮ್ಮಾರೇ, ಯಜಮಾನ್ರು ಊಟಕ್ಕೆ ಬರಲ್ವಂತೆ. ಲೇಟಾಗುತ್ತೆ ಊಟ ಮಾಡಿಕೊಂಡು ಮಲಿಕ್ಕೊಳಿ ಅಂದ್ರು. ಪುಟ್ಟಮ್ಯಾರು ಬೆಂಡೆಕಾಯಿ ಬಜ್ಜಿ ಬೇಕು ಅಂದ್ರು. ಚಪಾತಿ, ಸ್ವಲ್ಪ ಅನ್ನ – ಸಾರು ಮಾಡಿ ಮಡಗೀವ್ನೀ. ಬೆಂಡೆಕಾಯಿ ಬಜ್ಜೀನೇ ಬೇಕು ಅಂತ ಹಠ ಮಾಡಿದ್ರು. ಇಲ್ಲಿ ಎಲ್ಲೂ ಸಿಗದೆ ಮಾರ್ಕೆಟ್‌ಗೇ ಹೋಗಿ ತಂದೆ ಕಣ್ರವ್ವಾ. ಅಮ್ಮಾರೇ ಬೇಗ ಬಂದುಬುಡಿ. ಪುಟ್ಟಮ್ಯಾರು ಬೋ ಹಠ ಮಾಡ್ತಾರೆ. ಹೇಳಿದ ಮಾತು ಕೇಳಾಕಿಲ್ಲ. ಓದಾಕಿಲ್ಲ – ಬರೆಯಾಕಿಲ್ಲ. ಟಿ.ವಿ. ಮುಂದೆ ದೇವರು ಕುಂತಂಗೆ ಕುಂತು ಆಟ ಆಡ್ತಾರೆ. ಬೇಡ ಅಂದ್ರು ಕೇಳಾಕಿಲ್ಲ.

– ಥತ್! ಊಟ ಆಯ್ತಾ?

* ಇನ್ನೂ ಇಲ್ಲ, ಕೇಕು–ಚಿಪ್ಸು–ಜೂಸು ಕೊಟ್ಟೆ. ಸೊಳ್ಳೆ ಕಚ್ತು ಅಂದ್ರು. ತುಳಸಿ ಎಲೇದು ರಸ ತಿಕ್ಕೀವ್ನೀ. ಜಾಕಿನೂ ಇಲ್ಲೇ ಕುಂತದೆ. ಬೆಂಡೆಕಾಯಿ ಬಜ್ಜಿ ಮಾಡಿ ಊಟ ಮಾಡುಸ್ತೀನಿ.

– ರಂಗಮ್ಮಾ ಸ್ವಲ್ಪ ಮುದ್ದು ಮಾಡಿ ಹೋಂವರ್ಕ್ ಮಾಡಿಸು. ಬೇಜಾರು ಅನ್ನುತ್ತೆ. ಒಂದೆರಡು ಕಥೆ ಏನಾದ್ರೂ ಹೇಳು.

* ಏ. ಸಂಗೊತ್ತು ಕಣ್ರವ್ವಾ. ನಾನೇ ಅಲ್ಲವಾ ಅವಳನ್ನು ಕಣ್ಣಲ್ಲಿ ಇಟಕೊಂಡು ಸಾಕಿದ್ದು? ನಾ ಕತೆ ಕಟ್ಟಿ ಹೇಳ್ತೀನಿ. ನೀವೇನೂ ಗ್ಯಾನ ಮಾಡಬೇಡಿ. ಹತ್ತು ತಲೆ ದೆವ್ವದ ಕಥೆ ಹೇಳ್ತೀನಿ.

– ಏ ದರಿದ್ರ, ದೆವ್ವದ ಕಥೆ ಹೇಳಿ ಹೆದರಿಸಬೇಡ.

* ಏ. ಅಂಗೆಲ್ಲ ಪುಟ್ಟಮ್ಮಾರು ಹೆದರಾಕಿಲ್ಲ. ನೀವು ತಿಳಿದಂಗೆ ಅವರು ಇಲ್ಲ ಕಣ್ರವ್ವಾ. ಬೋ ಘಾಟಿ. ಚಾಲಾಕು.

– ಸ್ವಲ್ಪ ಯಜಮಾನರ ಮೇಲೆ ನಿಗಾ ಇಡು! ಯಾರು ಬರ್‍ತಾರೆ, ಹೋಗ್ತಾರೆ. ತಿಳೀತಾ? ನಾನಿಲ್ಲ ಅಂದ್ರೆ ಯಾರಿಗೂ ಲಂಗು–ಲಗಾಮು ಇಲ್ಲ!

* ಗೊತ್ತಾತು ಕಣ್ರವ್ವಾ.

– ಡ್ರೈವರ್ ರಾಜೂಗೆ ಫೋನ್ ಮಾಡೋಕೆ ಹೇಳು. ವಿಚಾರಿಸ್ತೀನಿ ತಿಳಿತಾ?

* ಏ. ನಂಗೊತ್ತಿಲ್ವಾ? ಯೋಸ್ನೆ ಮಾಡಬೇಡಿ. ಒಂದು ಕಣ್ಣು ಅಂಗೇ ಅವ್ರ ಮೇಲೆ ಮಡಗ್ತೀನೀ. ಸುಮ್ನಿರಿ. ಯೋಸ್ನೆ ಬುಟ್ಟಬುಡಿ.

* * *

* ರೀ, ನಾನು ರಾಜಿ.

– ಹೇಳು

* ರಾತ್ರಿ ಮನೇಗೇ ಬರಲಿಲ್ಲವಂತೆ?

– ಹೂಂ, ಆ ಗೂಬೆ ಆವಾಗ್ಲೆ wireless message ಕೊಡ್ತಾ?

* ಅವಳ್ಯಾಕೆ ಕೊಡ್ತಾಳೆ, ನಾನೇ ಕೇಳಿ ತಿಳ್ಕೊಂಡೆ.

– ಸರಿ, ಏನಾಯ್ತು? ಫ್ರೆಂಡ್ಸ್ ಎಲ್ಲ ಸೇರಿ ಹೊರಗಡೆ ಹೋಗಿದ್ವೀ.

* ನಂಗೆ ಗೊತ್ತಾಗಲ್ಲ ಅಂದುಕೊಂಡಿದೀರಾ?

– ನೋಡು ನಿಂದೇನೋ ನೋಡ್ಕೊ. ನಂಗೆ ಬುದ್ಧಿ ಹೇಳಕ್ಕೆ ಬರಬೇಡ. ತಿಂಗಳಲ್ಲಿ ಹದಿನೈದು ದಿವ್ಸ ಮನೇಲೀ ಇರಲ್ಲ. ಕಂಡಿದೀನಿ ನನ್ನ ಸಮಾಜಸೇವೆ?

* ನನ್ನ ಕಂಡ್ರೆ ಹೊಟ್ಟೆ ಉರಿ. ಅಸೂಯೆ.

– ಸರಿ. ಹೇಳು.

* ನಾಳೆ ಪೇರೇಂಟ್ಸ್ ಮೀಟಿಂಗ್ ಇದೆ. ಸ್ವಲ್ಪ ಪುಟ್ಟಿ ಜತೆ ಹೋಗಿ, ಪ್ಲೀಸ್. ನಂಗೆ ಬರ್‍ಲಿಕ್ಕೆ ಆಗ್ತಾ ಇಲ್ಲ.

– ನೋ. ಎಂ.ಡಿ. ಬರ್‍ತಾ ಇದಾರೆ. ಅವ್ರ ಹಿಂದೆ ಮುಂದೇನೇ ಇರಬೇಕಾಗುತ್ತೆ.

* ಪ್ಲೀಸ್. ನಾನೇ ಯಾವಾಗ್ಲೂ ಹೋಗ್ತೀನಿ. ಒಂದು ಸಲ ಹೋಗೋಕೆ ಆಗಲ್ಲವಾ?

– ಆಗಲ್ಲ. ನಾಳೆ ಆಗಲ್ಲ. ತಲೆ ತಿನ್ನಬೇಡ. ಯಾವಾಗ ನೋಡಿದ್ರೂ ಮೀಟಿಂಗು, ಕಾನ್ಫರೆನ್ಸು, ಭಾಷಣ, ಸನ್ಮಾನ. I am fed up. ನಿನ್ನ ಫ್ರೆಂಡು ಸುಮಾ ಇದಾಳಲ್ಲ, ಅವಳಿಗೆ ಹೇಳು. ಷಿ ಈಸ್ ನೈಸ್, ಪುಟ್ಟಿ ಜತೆ ಹೋಗ್ತಾಳೆ.

* ಸುಮಾ ಯಾಕೆ ರಂಗಮ್ಮನ್ನೇ ಪೇರೆಂಟು ಅಂತ ಜತೆಮಾಡಿ ಕಳಿಸ್ತೀನಿ. ವರಿ ಮಾಡ್ಕೊಬೇಡಿ. ಡ್ರೈವರ್ ರಾಜು ಇದಾನಲ್ಲ. ಅವನನ್ನ ಕಳಿಸ್ತೀನಿ.

– You shut up.

* * *

* ಚಿನ್ನೂ.

– ಏನು ಮಮ್ಮೀ.

* ನಿಂಗೇನು ತರ್ಲಿ ಪುಟ್ಟಾ? ಷಾಪಿಂಗ್ ಮಾಡ್ತಾ ಇದೀನೀ.

– ಉಹುಂ ಏನೂ ಬೇಡ.

* ನಿಂಗೆ ಏನೆಲ್ಲ ಷಾಪಿಂಗ್ ಮಾಡಿದೀನಿ ಗೊತ್ತಾ.

– ಯಾವಾಗ ಬರ್ತೀಯಾ ಮಮ್ಮಾ?

* ನಾಳೆ, ನಾಳೆನೇ ಬರ್ತೀನಿ, ಓ.ಕೆ.?

– ಇವತ್ತೇ ಬನ್ನಿ. ಈಗಲೇ ಬನ್ನಿ.

* ರಂಗಮ್ಮನಿಗೆ ಕೊಡು.

– ಅವಳು ಸಂಜೂ ಮನೆಗೆ ಹೋಗಿದಾಳೆ.

* ನೀನು?

– ಜಾಕಿ ಜತೆ ಇದೀನಿ. ಕಾರ್ಟೂನ್ ನೋಡ್ತಾ ಇದೀನೀ.

* ನೀನು good girl ಅಲ್ವಾ? ಹೋಂವರ್ಕ್ ಮಾಡು ಪುಟ್ಟಾ.

– ನೋ. I am bad bad girl.

* ಚಿನ್ನೂ ನಿಂಗೇನು ತರ್ಲಿ ಹೇಳು. ಅದನ್ನೇ ಷಾಪಿಂಗ್ ಮಾಡ್ತೀನೀ.

– ಮಮ್ಮಾ... ಒಂದು ಮೊಲ, ನವಿಲು, ಬೆಕ್ಕು... ಪುಟ್ಟದು ಮರಿ...

* ಸಾರಿ ಪುಟ್ಟಾ, ಇಲ್ಲಿ ಅಂಗಡೀಲಿ ಸಿಗಲ್ಲ.

– ಎದುರ‍್ಗಡೆ ಗಾರೆ ಕೆಲ್ಸ ಮಾಡ್ತಾರಲ್ಲ ಅವರ ಸನ್ನು ಹೇಳ್ದಾ, ಅವರ ವಿಲೇಜ್‌ನಲ್ಲಿ ಅವರ ಮನೇಲೀ ಮೊಲ, ನವಿಲು, ಬೆಕ್ಕು... ಎಲ್ಲ ಇವೆಯಂತೆ. ನಂಗೂ ತಂದುಕೊಡಿ ಮಮ್ಮೀ. ಪ್ಲೀಸ್.

* ಛೀ. ಅವರ ಹತ್ರ ಯಾಕೆ ಹೋಗಿದ್ದೆ. ಹೋಗಬೇಡ ತಿಳೀತಾ? ಹೋಗಬಾರ್ದು ಚಿನ್ನೂ.

– ಉಹುಂ... ಹೂಂ... ಹೂಂ... ಹೂಂ... ಓ.ಕೆ. ಬೈ. ಬೈ...

●

# ಅನುಗಾಲವೂ ಚಿಂತೆ ಜೀವಕೆ...

* ಹಲೋ... ಹಲೋ...

– ಯಾರು? ಯಾರು ಬೇಕಿತ್ತು?

* ನಾನು ರಾಧಮ್ಮ. ಚೆನ್ನಾಗಿದ್ದೀರಾ?

– ಹೂಂನಮ್ಮ ದೇವರ ದಯೆಯಿಂದ ಚೆನ್ನಾಗಿದ್ದೀನೀ.

* ವೇಣಿ ಇದಾಳಾ?

– ಈಗ... ಈಗ ದೇವರ ಪೂಜೆಗೆ ಕೂತ್ಲು. ಇನ್ನು ಒಂದು–ಒಂದೂವರೆ ತಾಸು ಬಿಟ್ಟು ಫೋನು ಮಾಡಿ ಸಿಕ್ತಾಳೆ. ಇಲ್ಲ ಪೂಜೆ ಮುಗಿದ ಕೂಡಲೆ ನಾನೇ ಹೇಳ್ತೀನೀ.

* ಒಂದೂವರೆ ತಾಸು? ಏನು ಏನಾರ ವಿಶೇಷ ಪೂಜೆನಾ? ಅರ್ಜಂಟ್ ಮಾತನಾಡಬೇಕಿತ್ತು.

* ಇಲ್ಲಪ್ಪಾ. ಸಾದಾ ಪೂಜೆ! ಇವತ್ತು ಮಂಗಳವಾರ ನಿಮ್ಮ ಪುಣ್ಯ. ಸೋಮವಾರ, ಶುಕ್ರವಾರ ಆಗಿದ್ದಿದ್ರೆ ಎರಡು–ಎರಡೂವರೆ ತಾಸು.

* ನಿಮ್ಮನೆ ದೇವರು ಪುಣ್ಯ ಮಾಡಿದಾನೆ ಬಿಡ್ರಿ. ಹಹ್ಹ ಹಹ್ಹ. ಮೊದಲು ನಂ ವೇಣೀ ಹಿಂಗಿರಲಿಲ್ಲವೇ. ಅಥವಾ ನಂಗೇ ಗೊತ್ತಿಲ್ಲವೋ. ನಾ ಸುಮಾರಾಗಿ ಬರ್ತಿದ್ದಿದ್ದೇ ಸಂಜೆ ಹೊತ್ತಿಗೆ. ಹಾಗಾಗಿ...

– ನೀವು ಹೇಳಿದ್ದು ಸರಿ. ಮೊದಮೊದಲು ಹತ್ತು–ಹದಿನೈದು ನಿಮಿಷ ಪೂಜೆ ಮಾಡೋಳು. ಹರ್ಷ ಪಿ.ಯು.ಸಿ.ಗೆ ಸೇರಿದ ಮೇಲೆ ಶುರುವಾಯ್ತು ಮಹಾಪೂಜೆ. ಅವನು ಬಿ.ಇ.ನಲ್ಲಿ ರ್‍ಯಾಂಕ್ ಬಂದ ಮೇಲೆ ಇದ್ದದ್ದೂ ಹೆಚ್ಚಾಯ್ತು. ಕೆಲಸ ಸಿಕ್ಕ ಮೇಲೆ ಒಂದೂವರೆ ತಾಸಿಗೆ ಬಂತು. ಅಮೆರಿಕಾಗೆ ಹೋದ ಮೇಲೆ ಎರಡು ತಾಸಿಗೆ ಬಂತು. ಈಗೀಗ ಬೆಳಿಗ್ಗೆ ತಿಂಡಿನೇ ಮಾಡೋದಿಲ್ಲ. ಎದ್ದು ಸ್ನಾನ ಮಾಡಿ ಹೂಕೊಯ್ದು, ದೇವರ ತೊಳೆದು, ಶುರುವಾಗಿಬಿಡುತ್ತೆ. ಸೀದಾ ಹನ್ನೆರಡೂವರೆಗೆ ಊಟ.

* ನಿಮಗೆ?

– ಬೆಳಿಗ್ಗೆ ಎದ್ದು ನಾನೆ ನೀರೊಲೆಗೆ ಬೆಂಕಿ ಹಾಕಿ, ಕಾಫಿ ಮಾಡಿಕೊಂಡು ಕುಡಿದು

ವಾಕಿಂಗ್ ಹೋಗ್ತೀನಿ. ಒಂದರ್ಧ ತಾಸು ಹೆಚ್ಚೇ ಹಾಯಾಗಿ ಪಾರ್ಕಿನಲ್ಲಿ ಕೂತು ಬರ್ತಾ ಹಂಗೆ ದರ್ಶಿನಿಲೀ ಇಡ್ಲಿ–ವಡೆ ತಿಂದು ಬಂದುಬಡ್ತೀನೀ. ಚೆನ್ನಾಗಿ ಮಾಡ್ತಾನೆ. ತುಂಬ ಸಮಯ ಆಯ್ತು... ಅಲ್ಲೊಂದು ಅಕೌಂಟೇ ಓಪನ್ ಮಾಡಿಬಿಟ್ಟಿದ್ದೀನಿ. ತಿಂಗಳ ಮೊದಲಿಗೆ ಅಡ್ವಾನ್ಸ್ ಕೊಟ್ಟುಬಿಡ್ತೀನಿ. ಜೇಬಲ್ಲಿ ಪರ್ಸು ಇಟ್ಟುಕೊಳ್ಳೋದು, ಮರ್ತುಹೋಗೋದು, ಚಿಲ್ರೆ ಕೊಡೋದು, ಯಾವ ರಗಳೆನೂ ಇಲ್ಲ! ಎಲ್ಲ ಸುಸೂತ್ರ. ನನ್ನ ಪಾಡಿಗೆ ನಾನಿದೀನಿ. ಹಾಗಾಗಿ ಜಗಳ ಇಲ್ಲ! ಅವಳಾಯ್ತು ಅವಳ ಪೂಜೆಯಾಯ್ತು. ಮಗ ಅಮೆರಿಕಾಗೆ ಹೋಗ್ಲಿ ಅಂತ ಮೊದಲು ಪೂಜೆಯಾಯ್ತು. ಈಗ ಮಗ ಅಲ್ಲಿಂದ ಬಂದು ಇಲ್ಲೇ ಇರಲಿ ಅಂತ ಪೂಜೆ! ಆ ದೇವರಿಗೆ ತಾನೆ ಬೇರೆ ಏನು ಕೆಲ್ಸ ಇದೆ ಹೇಳಿ. ಇವರು ಹೇಳಿದ ಹಾಗೆ ಕುಣಿಯೋದು ಬಿಟ್ರೆ!

* ಹಹ್ಹ... ಆಮೇಲೆ ಫೋನು ಮಾಡೋಕೆ ಹೇಳ್ತಿರಾ?

– ಆಯ್ತು. ಆಯ್ತು. ಹೇಗಿದಾರೆ ರಾಯರು? ಇತ್ತೀಚೆಗೆ ಸಿಕ್ಕೇ ಇಲ್ಲ. ಮೊದಲಾದ್ರೆ ಅವರೂ ಪಾರ್ಕಿಗೆ ಬರ್ತಾ ಇದ್ರು.

* ಇಲ್ಲ. ಇತ್ತಿತ್ತಲಾಗೆ ನಡೆಯೋದು ಭಾರಿ ಕಷ್ಟ ಆಗಿದೆ. ಕಾಲು ಊದ್ಕೊಂಡು ಬಿಡುತ್ತೆ. ಇಲ್ಲೇ ಮನೆ ಸುತ್ತಮುತ್ತ ಗಾರ್ಡನ್‌ನಲ್ಲಿ ಸುತ್ತಾಡ್ತಾರೆ. ಮೊನ್ನೆ ರಾತ್ರಿ ಇದ್ದಕ್ಕಿದ್ದ ಹಾಗೆ ಸುಸ್ತಾಗಿ ಬಿಟ್ರು. ನಾನೋ ಕಂಗಾಲು. ಅಮೇಲೆ ಪಕ್ಕದ ಮನೆಗೆ ಫೋನ್ ಮಾಡ್ದೆ. ಡಾಕ್ಟರನ್ನ ಕರ್ಕೊಂಡು ಬಂದ್ರು. ಬಿ.ಪಿ. ಜಾಸ್ತಿಯಾಗಿತ್ತು. ಶುಗರ್ ರೈಸ್ ಆಗಿತ್ತು. ಮರೆವು ಜಾಸ್ತಿ. ಅದೇನಾರ ಇನ್ಸುಲೀನ್ ತಗೊಳದನ್ನು ಮರೆತರೊ ಏನೋ. ಎದೆಬಡಿತ ಜಾಸ್ತಿಯಾಗಿತ್ತು. ನನ್ನ ಮಗ ಬೇರೆ ಅಮೆರಿಕಾಗೆ ಹೋಗಿ ಕೂತಿದಾನೆ. ಈ ವಯಸ್ಸಿನಲ್ಲಿ ನಾನೊಬ್ಬಳೇ ನಿಭಾಯಿಸಕ್ಕೆ ಆಗುತ್ತಾ? ಫೋನು ಮಾಡಿದ್ರೆ, ದುಡ್ಡು ಎಷ್ಟು ಬೇಕಾದ್ರೆ ಖರ್ಚಾಗಲಿ ಒಳ್ಳೆ ಕಡೆ ತೋರಿಸು ಅಂತಾನೆ. ಹೆಲ್ಪರ್ ಇಟ್ಕೊಳ್ಳಿ, ಅಡಿಗೆಯವರನ್ನು ಇಟ್ಕೊಳ್ಳಿ, ಗಾರ್ಡನರ್ ಇಟ್ಕೊಳ್ಳಿ, ಡ್ರೈವರ್ ಇಟ್ಕೊಳ್ಳಿ ಅಂತಾನೆ. ದುಡ್ಡಿನ ಮುಖ ನೋಡಬೇಡಿ ಅಂತಾನೆ. ಆದರೆ ಒಳ್ಳೇ ಜನ ಸಿಗಬೇಕಲ್ಲ. ಪ್ರತಿಯೊಬ್ಬರೂ ನಮ್ಮನ್ನು ಸುಲಿಯೋದಕ್ಕೇ ನೋಡ್ತಾರೆ. ನಾವು ತಿನ್ನೋದು ಎರಡು ತುತ್ತು. ಅದಕ್ಕೆ ಅಡಿಗೆಯವರು ಯಾಕೆ ಬೇಕು ಅಂತ ಅನಿಸುತ್ತೆ. ಆದ್ರೆ ಒಂದೊಂದು ಸಲ ಏನೂ ಕೂಡೊದಿಲ್ಲ! ಗುರ್ತು ಪರಿಚಯ ಇಲ್ದೆ ಇರೋರನ್ನ ಮನೇಲೀ ಬಿಟ್ಕೊಳ್ಳೋದಕ್ಕೆ ಭಯ ಆಗುತ್ತೆ. ನನ್ನ ಮಗನಿಗೆ ಇದೆಲ್ಲ ಅರ್ಥ ಆಗಲ್ಲ. ಇಲ್ಲೇ ಬಂದು ಬಿಡಪ್ಪಾ. ಒಳ್ಳೆ ಕಡೇ ನೋಡಿ ಮದುವೆ ಮಾಡ್ತೀನೀ ಅಂದ್ರೆ ಇಷ್ಟು ಬೇಗ ಬೇಡ ಅಂತಾನೆ. ಮುಂದಿನ ವಾರ ಬರ್ತಾ ಇದಾನೆ. ನಾಲ್ಕೈದು ಜನ ಅವನ ಸ್ನೇಹಿತರೂ ಬರ್ತಾ ಇದಾರೆ. ಅದೇನೋ ಕಾನ್ಫರೆನ್ಸ್ ಅಂತೆ. ಈ ಸಲ ಬಂದ್ರೆ ಇಲ್ಲೇ ಇದ್ದುಬಿಡು ಅಂತ ಹೇಳಿಬಿಡ್ತೀನಿ. ಪರದೇಶಕ್ಕೆ ಯಾಕೆ ಹೋಗಬೇಕು ಅಂತೀನೀ. ಇಲ್ಲೇ ಇದ್ದನಲ್ಲ. ಎಷ್ಟು ಒಳ್ಳೆ ಕೆಲ್ಸ ಇತ್ತು. ತಿಂಗಳಿಗೆ ಒಂದು ಲಕ್ಷ ರೂಪಾಯಿ. ಈಗ

ಅದಕ್ಕಿಂತ ಜಾಸ್ತಿ ಅಂತ ಅದೇನೋ ಡಾಲರ್ ಲೆಕ್ಕ ಅಂತೆ. ಇರೋನು ಒಬ್ಬ. ನಮಗಾದ್ರೂ ಅಷ್ಟು ದುಡ್ಡು ಯಾಕೆ ಬೇಕು ಹೇಳಿ. ನಾನು ಮದುವೆಯಾಗಿ ಬಂದಾಗ ನಮ್ಮನೆಯವರಿಗೆ ೨೦೦ ರೂಪಾಯಿ ಸಂಬಳ. ಎಷ್ಟು ಚೆನ್ನಾಗಿ ಜೀವನ ಮಾಡಿದ್ವೀ. ಸ್ವಂತ ಮನೆ ಕಟ್ಟಿಕೊಂಡ್ವಿ. ಪೆನ್‌ಷನ್ ಬರುತ್ತೆ. ಈ ಪಡಿಪಾಟಲು ಯಾಕೆ ಅಂತೀನೀ. ನಾನಂತು ಈ ಸಲ ಬಿಡಲ್ಲ. ಅತ್ತು ಕರೆದು ಇಲ್ಲೇ ಇರಿಸಿಕೊಳ್ತಿನೀ.

– ಹಹ್ಹ... ಹಹ್ಹ...

* ಯಾಕೆ ನಗ್ತಾ ಇದೀರಾ?

– ಈಗೆಲ್ಲ ಕಣ್ಣೀರಿಗೆ ಬೆಲೆ ಇಲ್ಲ ಕಣಮ್ಮಾ... Contract ಇರುತ್ತೆ. ಹಾಗೆಲ್ಲ ಇದ್ದಕ್ಕಿದ್ದ ಹಾಗೆ ಇಲ್ಲೇ ಇದ್ದು ಬಿಡೋಕೆ ಆಗಲ್ಲ. ನಮ್ಮ ಹುಡುಗ ನೋಡಿ. ಇನ್ನೂ ಐದು ವರ್ಷ ಅಂತೆ contract. ಬಾರೋ ಇಲ್ಲೇ ಅಂದ್ರೆ ಒಪ್ಪೋದೇ ಇಲ್ಲ. ಇಂಡಿಯಾದಲ್ಲಿ 'work culture' ಇಲ್ಲ ಪಪ್ಪಾ ಅಂತಾನೆ. ಅದೇನೋ ಅವನಿಗೆ ಅಲ್ಲಿ ಸಿಕ್ಕಿರೋ ಥರದ್ದು ಕೆಲ್ಸ ಇಂಡಿಯಾದಲ್ಲಿ ಇಲ್ಲವಂತೆ! ಅವನು ಏನು ಹೇಳ್ತಿದಾನೋ ನಂಗೆ ಅರ್ಥಾನೇ ಆಗಲ್ಲ. ಪ್ರತಿ ತಿಂಗಳೂ ದುಡ್ಡು ಕಳಿಸ್ತಾನೆ. ನಮ್ದೇನು ಉಂಡು ತಿನ್ನೋ ಉಡೋ ವಯಸ್ಸಾ? ಒಪ್ಪತ್ತಿದ್ರೆ ಸಾಕು. ಅವನ ಹೆಸರಲ್ಲೇ ಎಲ್ಲವನ್ನು ಇನ್‌ವೆಸ್ಟ್ ಮಾಡ್ತಾ ಇದೀನೀ. ಅದೇ ಕೆಲ್ಸ ನಂಗೆ!

* ಹೂಂ. ನಮ್ಮೋನೂ ಹಾಗೆ ಹೇಳ್ತಾ ಇದ್ದ. ಸೈಟುಗಳನ್ನು ತಗೊಳ್ಳಿ ಅಂತ. ಈ ವಯಸ್ಸಿನಲ್ಲಿ ಅದೂ ಇವರಿಗೆ ಮೊದ್ಲೇ ಓಡಾಡಕ್ಕೆ ಆಗಲ್ಲ. ನಾವು ಸೈಟು ವ್ಯವಹಾರ ಮಾಡೋದು ಹೌದಾ? ಈಗಂತೂ ಭೂಮಿ ವ್ಯವಹಾರ ಅಂದ್ರೆ ಬರೀ ಮೋಸ... ಅಂತೆ! ಯಾರಾದ್ರೂ ಟೋಪಿ ಹಾಕಿದ್ರೆ ಕಾಸೂ ಹಾಳು, ತಲೆಯೂ ಬೋಳು. ಒಂದು ರಾಶಿ ಷೇರು–ಪಾರು ಅಂತ ದಿನಾ ಕಾಗದ ಬಂದು ಬೀಳುತ್ತೆ. ಅದನ್ನೆಲ್ಲ ನಾನು ಬುಟ್ಟಿಯಲ್ಲಿ ತುಂಬಿ ಇಡೋದು. ಇವರು ಪುರುಸೊತ್ತಾದಾಗ ನೋಡ್ತಾರೆ. ಲಕ್ಷ್ಮಿ ಬಂದ್ರೆ ಒದ್ದುಕೊಂಡು ಬರ್ತಾಳಂತೆ. ಬ್ಯಾಂಕಿಗೆ ಜಮಾ ಮಾಡೋಕೆ ಪುರುಸೊತ್ತಿಲ್ಲ. ನಮ್ಮನೆಯವರು ಪರದಾಡ್ತಾರೆ. ಹೋದ ಸಲ 'ವರಮಹಾಲಕ್ಷ್ಮಿ' ಹೊತ್ತಿಗೆ ಸರಿಯಾಗಿ ನಮ್ಮನೆಯವರು ಆಸ್ಪತ್ರೆಗೆ ಅಡ್ಮಿಟ್ ಆಗಿದ್ರು. ಕಿಡ್ನಿಲೀ ಸ್ಟೋನ್ ಆಗಿತ್ತು. ಈ ಸಲಾನಾದ್ರೂ ವ್ರತ ಕೈಗೂಡತ್ತೋ ನೋಡಬೇಕು. ಸದ್ಯ ನಾನು ಬೇಯಿಸಿ ಹಾಕೋವಷ್ಟು ಗಟ್ಟಿಮುಟ್ಟಾಗಿ ಇದೀನಿ. ಎರಡು ಹೊತ್ತು ಶಿಸ್ತಾಗಿ ಬೇಯಿಸಿ ಹಾಕೋ ಮನೆಕಡೆ ನಿಗಾ ಇಡೊ ಸೊಸೆ ಸಿಕ್ಕಿದರೆ ಸಾಕು. ಬಡವರ ಮನೆ ಹುಡುಗಿ ಆದ್ರೂ ಪರವಾಗಿಲ್ಲ ಲಕ್ಷಣವಾಗಿದ್ದು, ಗುಣವಂತೆ ಆಗಿದ್ರೆ ಸಾಕು. ನಿಮ್ಮ ಕಡೆ ಎಲ್ಲಾರ ಹುಡುಗಿ ಇದ್ರೆ ಹೇಳಿ. ನೋಡೋಣಂತೆ.

– ರಾಧಮ್ಮೋರೇ ಕನಸು ಕಾಣಬೇಡಿ.

* ಯಾಕೆ? ಯಾಕೆ?

– ನಿಮ್ಮುಡುಗ ಈ ಮೊದ್ಲೇ ಎಲ್ಲಾರ ನೋಡ್ಕೊಂಡಿದಾನಾ ಅಂತ ಮೊದ್ಲು ವಿಚಾರಿಸಿ ನಂತರ ಮುಂದುವರೀರಿ. ಈಗಿನ ಹುಡುಗ್ರು ಎಲ್ಲದರಲ್ಲೂ ಫಾಸ್ಟ್. ನಮ್ಮುಡುಗ ಈಗಾಗಲೇ ಹೇಳ್‌ಬಿಟ್ಟಿದಾನೆ. ಅವನೇ ನೋಡ್ಕೋತಾನಂತೆ. ನಾವು ನಾಕು ಅಕ್ಷತೆ ಹಾಕಿ ಆಶೀರ್ವಾದ ಮಾಡೋದು ಅಷ್ಟೇ. ನನ್ನ ಹೆಂಡತಿ ಆಗ್ಲೇ ನೋಡಿ ಇಟ್ಟಿದಾಳೆ. ಮಗನ ಹತ್ರ ಹೇಳೋ ಧೈರ್ಯ ಇಲ್ಲ. ಮಗನಿಗೆ Professionally qualified ಬೇಕಂತೆ. ಅವನು ಕೇಳಲ್ಲ. ಇವಳು ಬಿಡಲ್ಲ. ಅವಳ ದೇವರೇ ಅವಳಿಗೆ ಬುದ್ಧಿ ಕೊಡಬೇಕು.

* ಅಯ್ಯೋ, ಅದ್ಹೇಗೆ ಬಿಡೋಕೆ ಆಗುತ್ತೆ! ಮಗ ಅಲ್ವಾ?

– ಮಗ, ಮಗ ಅಷ್ಟೇ. ಕೋಲೆ ಬಸವ ಅಲ್ಲವಲ್ಲ? ಹಹ್ಹ...

* ಏನೋಪ್ಪಾ ನಾವು ಜಾಸ್ತಿ ಓದಿಸಿ ತಪ್ಪು ಮಾಡಿದೆವಾ? ಸುಮ್ಮಗೆ ಡಿಗ್ರಿ ಮಾಡಿಸಿ ಒಂದು ಅಂಗಡಿ ಹಾಕಿ ಕೊಟ್ಟಿದ್ರೆ ಇಲ್ಲೇ ನಮ್ಮ ಕಣ್ಮುಂದೆ ಇರ್ತಾ ಇದ್ದ. ಬಿ.ಇ. ಓದಿಸಿದ್ದೇ ತಪ್ಪಾಯ್ತು.

– ಹಹ್ಹ... ಹಹ್ಹ... ನಿಮ್ಮ ಸ್ನೇಹಿತೆನೂ ಹಿಂಗೇ ಅಪದ್ಧ ಮಾತಾಡ್ತಾ ಇರ್ತಾಳೆ. ಹಹ್ಹ... ಹಹ್ಹ... ಫೋನು ಮಾಡೋಕೆ ಹೇಳ್ತೀನೀ. ಏನೋ ನಾಕು ಮಾತಾಡಿ ಸಮಾಧಾನ ಆಯ್ತು. ಇತ್ತೀಚೆಗೆ ಏನಾರ ಹೇಳ್ಕೊಳೋಣ ಅಂದ್ರೂ ಯಾರೂ ಸಿಗೋದಿಲ್ಲ. ನೆಂಟರಿಷ್ಟರ ಹತ್ರ ಹೇಳಿಕೊಂಡರೆ ಸಂತೋಷ ಪಡ್ತಾರೆ ವಿನಹಃ ಅಯ್ಯೋ ಅನ್ನೋದಿಲ್ಲ. 'ಮಗ ಅಮೆರಿಕದಲ್ಲಿ ಇದಾನೆ' ಅಂತ ಹೊಟ್ಟೆ ಉರ್ಕೊತಾರೆ. 'ನೀವೂ ಹೋಗಿ ಅಲ್ಲೇ ಇದ್ದುಬಿಡಿ' ಅಂತ ಅಡ್ವೈಸ್ ಮಾಡ್ತಾರೆ. ಹಂಗೆಲ್ಲ ಇಷ್ಟ ಬಂದ ಹಾಗೆ ಅಲ್ಲಿಗೆ ಹೋಗಿ ಇರೋಕೆ ಆಗುತ್ತಾ? ಅಲ್ಲಿಗೆ ಪರ್ಮನೆಂಟಾಗಿ ಯಾರನ್ನೂ ಬಿಟ್ಕೊಳೊದಿಲ್ಲವಂತೆ. ಅದೇನೋ ಪಾಸುಪೋರ್ಟು, ವೀಸಾ, ಇನ್ನುರೆನ್ಸು ಅಂತ ನೂರೆಂಟು ರಗಳೆ ಇದೆಯಂತೆ. ಇದೆಲ್ಲ ಅವರಿಗೆ ಅರ್ಥ ಆಗಲ್ಲ. ಸರಿ, ರಾಯರಿಗೆ ಕೇಳ್ದೆ ಅಂತ ಹೇಳಿ. ಪೂಜೆ ಮುಗಿದ ಮೇಲೆ ಇವಳಿಗೆ ಹೇಳ್ತೀನಿ.

* * *

* ಹಲೋ... ಫೋನು ಮಾಡಿದ್ರಾ? ಪೂಜೆಲೀ ಇದ್ದೆ.

– ಯಾಕ್ರೀ. ಇತ್ತೀಚೆಗೆ ದೇವರನ್ನು ತುಂಬಾನೇ ಹಚ್ಚಿಕೊಂಡಿರೋ ಹಾಗೆ ಕಾಣುತ್ತೆ.

* ಏನು ಮಾಡೋದು? ಬೇರೆ ಯಾರೂ ಇಲ್ಲವೇ ಹಚ್ಚಿಕೊಳ್ಳೋಕೇ.... ತುಂಬಾ ಸುಸ್ತು ಕಣ್ರೀ. ಕೈಕಾಲೇ ಆಡೋದಿಲ್ಲ. ಬುದ್ಧಿನೇ ಓಡೋದಿಲ್ಲ. ಒಂಥರಾ ಮಂಕು. ಏನು ಮಾಡೊಕೂ ಮನಸ್ಸಿಲ್ಲ. ಸುಮ್ಮನೆ ದೇವರ ಮುಂದೆ ಕೂತುಬಿಡ್ತೀನೀ. ಏಳೋಕೆ ಮನಸೇ ಬರಲ್ಲ.

– ಅಡಿಗೆ ಆಯ್ತಾ? ಏನು ಮಾಡಿದ್ರೀ.

* ಇವತ್ತು ನಂಗೆ ಉಪವಾಸ. ನಮ್ಮನೆಯವರಿಗೆ ಚಿತ್ರಾನ್ನ ಕಲಸಿಕೊಟ್ಟೆ. ಮೊಸರು, ಹಣ್ಣು ಇದ್ದೇ ಇದೆಯಲ್ಲ. ಒಬ್ಬರಿಗೋಸ್ಕರ ಏನಡಿಗೆ ಮಾಡೋದು? ಅರ್ಜೆಂಟು ಅಂತ ಅಂದ್ರಂತೆ, ಏನು ಸಮಾಚಾರ?

– ಏನಿಲ್ಲ. ನಮ್ಮ ಸುರೇಶ ಬರ್ತಾ ಇದಾನೆ.

* ಅ್ಹಂ? ಹೌದಾ? ಯಾವಾಗ?

– ಮುಂದಿನ ವಾರ.

* ಎಷ್ಟು ದಿನ ಇರ್ತಾನೆ? ಬಂದ್ರೆ ಈ ಸಲ ಬಿಡಬೇಡಿ.. ಮದುವೆ...

– ಅಯ್ಯೋ. ಅದೆಲ್ಲ ನನ್ನ ಕೈಲಿ ಇದೆಯಾ? ಏನೋ ಮುಖ ತೋರಿಸ್ತಾನಲ್ಲ, ಅದೇ ಸಂತೋಷ. ನಂಗೆ ಅರ್ಜಂಟಾಗಿ ಒಬ್ಬ ಅಡಿಗೆಯವರು ಬೇಕಿತ್ತು. ಅವನ ಸ್ನೇಹಿತರೆಲ್ಲ ಬರ್ತಾ ಇದಾರೆ. ಅವರಿಗೆಲ್ಲ ಹಳೇ ಥರದ ಅಡಿಗೆ ಮಾಡಿ ಹಾಕಬೇಕು ಅಂತ ನನ್ನ ಮಗ ಹೇಳಿದಾನೆ. ಆದೇರೀ, ಕಡುಬು... ಒಬ್ಬಟ್ಟು, ಕೊಟ್ಟೆ... ಪತ್ರೊಡೆ... ಶ್ಯಾವಿಗೆ–ಹಾಲು, ಅಡೆದೋಸೆ, ತಾಲಿಪಿಟ್ಟು, ಮುದ್ದೆ... ಪಾಪ ನಮ್ಮುಡುಗ ಅವನ ಸ್ನೇಹಿತರ ಹತ್ರ ನಮ್ಮಮ್ಮ ಇದೆಲ್ಲ ಮಾಡ್ತಾಳೆ ಅಂತ ಹೇಳಿಕೊಂಡಿರಬೇಕು. ಒಂದು ಕಾಲದಲ್ಲಿ ಬೇಕಾದಷ್ಟು ಮಾಡಿ ಹಾಕಿದೀನಿ. ಈಗೀಗ ಏನೂ ಮಾಡದೆ... ವಿಶ್ವಾಸಾನೇ ಇಲ್ಲ. ಹದ ತಪ್ಪಿ ಹೋದ್ರೆ ಅಂತ ಭಯ ಆಗುತ್ತೆ. ಏಳು–ಎಂಟು ಜನ ಬೇರೆ ಬರ್ತಾರೆ. ನನ್ನ ಕೈಲಿ ಆಗಬೇಕಲ್ಲ. ಯಾರಾದ್ರೂ ಅಡಿಗೆಯವರು ಇದ್ರೆ ಹೇಳ್ತಿರಾ? ಚೆನ್ನಾಗಿ ಮಾಡಬೇಕು. ಪಾಪ ಸ್ನೇಹಿತರ ಮುಂದೆ ಅವನಿಗೆ ಅವಮಾನ ಆಗಬಾರದು.

* ಕಡುಬು, ಶ್ಯಾವಿಗೆ. ಒಳ್ಳೇ ಹುಡುಗ! ಅದ್ಯಾಕೆ ಅಮೆರಿಕಾಗೆ ಹೋಗಿ ಸಾಯ್ತಾರೋ. ತಿನ್ನೋಕೂ ಗತಿ ಇಲ್ಲವಲ್ಲ ನಮ್ಮ ಮಕ್ಕಳಿಗೆ! ಅಲ್ಲಿ ಬರೇ ಬ್ರೆಡ್ಡು–ಮಾಂಸ ಅಂತೆ, ಪಾಪ ಅಮ್ಮನ ಅಡಿಗೆ ನೆನಪಾಗಿರಬೇಕು. ಆದ್ರೆ ಈ ತಿಂಡಿಗಳನ್ನು ಮಾಡೋರೇ ಇಲ್ಲವಲ್ಲರೀ. ಹಳೇ ಅಗ್ರಹಾರದಲ್ಲಿ ರಂಗಮ್ಮ ಅಂತ ಒಬ್ಬರು ಇದಾರೆ. ತುಂಬಾ ವಯಸ್ಸಾಗಿದೆ. ಕಾರಲ್ಲಿ ಕರ್ಕೊಂಡು ಬಂದು ಕಾರಲ್ಲಿ ರಾತ್ರಿ ಮನೆಗೆ ಬಿಡಬೇಕು. ರುಬ್ಬಿ, ಕುಟ್ಟಿ, ಎಲ್ಲ ಮಾಡಿಕೊಟ್ರೆ ಒಲೆ ಹತ್ರ ನಿಂತು ಮಾಡ್ತಾರೆ. ಅವರು ಹೇಳೋ ಸಾಮಾನನ್ನು ಅವರು ಹೇಳಿದ ಅಂಗಡಿಯಿಂದಲೇ ತಂದುಕೊಡಬೇಕು. ಹಿಟ್ಟು, ರವೆ ಮಿಲ್ಲಿನಲ್ಲಿ ಫ್ರೆಶ್ ಆಗಿ ಬೀಸಿ ತಂದು ಕೊಡಬೇಕು. ಅದ್ಯಾವುದೋ ಅಂಗಡಿ ಇದೆಯಪ್ಪಾ ಅಲ್ಲಿಂದಾನೇ ಬೆಣ್ಣೆ–ತುಪ್ಪ–ಎಣ್ಣೆ, ಕಾಳು–ಬೇಳೆ ತರಬೇಕು. ಬಣ್ಣ ಹಾಕಲ್ಲ, ಕಲಬೆರಕೆ ಇರೋಲ್ಲ ಅನ್ನುತ್ತೆ. ಅಜ್ಜಿ, ಬೋಂಡಾ ಎಷ್ಟು ಚೆನ್ನಾಗಿ ಮಾಡ್ತಾರೆ ಅಂತೀರಾ? ತಿನ್ನೋದೇ ಒಂದು ವೈಭೋಗ. ಉಂಡು 'ಸಂತೋಷ ಪಟ್ರೆ ಸಾಕು' ಅಂತ ದುಡ್ಡು ಇಸ್ಕೊಳ್ಳಲಿಲ್ಲ ಅಜ್ಜಿ. ನಾನೇ ಒಂದು ಒಳ್ಳೇ ಸೀರೆ ಉಡಿಸಿ, ಐನೂರು ರೂಪಾಯಿ ಎಲೆ ಅಡಿಕೆ ಜತೆ ಇಟ್ಟುಕೊಟ್ಟೆ. ಆವಜ್ಜಿ ಹೋಯ್ತು ಅಂದ್ರೆ ಆ ನಳಪಾಕಾನೂ ಅದ್ರ ಜತೆಗೇ ಹೋದಂಗೆ. ಆಯಮ್ಮ ಇದ್ದಾಗ ನಂಗೂ ಉಮೇದು

ಬಂದು ಸಾಕಷ್ಟು ಕಲಿತುಕೊಂಡೆ. ಅಡಿಗೆ ಅಂದ್ರೆ ಏನೋ ಒಂದು ಹದ. ಸಾಧಿಸಿಕೊಳ್ಳೋದು ಅಷ್ಟು ಸುಲಭ ಅಲ್ಲ.

– ಹುರಿದು, ತುರಿದು ಕೊಡೋಕೆ ಬೇಕಾದ್ರೆ ನಮ್ಮ ಶಾರಿಗೆ ಹೇಳ್ತೀನಿ. ರುಚಿಗೆ ಭಂಗ ಬರದ ಹಾಗೆ ಒಳ್ಳೆ ಅಡಿಗೆ ಮಾಡಿ ಹಾಕಿದ್ರೆ ಸಾಕು. ಏನೋ ಮಗ ಆಸೆ ಪಟ್ಟಿದಾನೆ. ಎಷ್ಟೆಲ್ಲ ದುಡ್ಡು ಇದೆ. ಆದ್ರೆ ಮಾಡಿಹಾಕೋಕೆ ತಾಕತ್ತು ಇಲ್ವೇ. ದುಡ್ಡಿದ್ರೆನೇ ಎಲ್ಲ ಅನ್ನೋದು ಎಷ್ಟು ಸುಳ್ಳು ನೋಡಿ. ಒಂದು ವಾರ ನಂಗೆ ಸಹಾಯ ಮಾಡೋಕೆ ಆಕೆಗೆ ಹೇಳ್ತೀರಾ? ದಯವಿಟ್ಟು.

* ಅಯ್ಯೋ. ಅದ್ಯಾಕೆ ಟೆನ್‌ಷನ್ ಮಾಡ್ಕೋತೀರಾ. ಇವತ್ತೇ ಫೋನು ಮಾಡ್ತೀನೀ. ನಾಳೆ ಬೇಕಾದ್ರೆ ಇಬ್ಬರೂ ಅವರ ಮನೆಗೆ ಹೋಗಿ ಮಾತಾಡಿಕೊಂಡು ಬರೋಣ. ನಾನು ಕೊಟ್ಟೆಕಡಬು ತಿನ್ನದೆ ಎಷ್ಟು ದಿನ ಆಯ್ತು. ಅದಕ್ಕೆ ಮಿಡಿ ಹಲಸಿನ ಪಳದ್ಯ ತುಂಬಾ ಚೆನ್ನಾಗಿ ಹೊಂದುತ್ತೆ. ನಮ್ಮ ತಾಯಿ ತುಂಬಾ ಚೆನ್ನಾಗಿ ಮಾಡ್ತಾ ಇದ್ರು. ಅರಿಶಿನದ ಎಲೆಯಲ್ಲಿ ಸಿಹಿಕಡುಬು ಅಬ್ಬಾ... ಎಷ್ಟು ಚೆನ್ನಾಗಿ ಮಾಡ್ತಾ ಇದ್ರು... ಎಲ್ಲಾ ಗತಕಾಲಕ್ಕೆ ಸೇರಿಹೋಯ್ತು. ಸರಿ, ನಾಳೆ ವಿಚಾರಿಸಿ ಹೇಳ್ತೀನಿ. ಆಯ್ತಾ. ಬರ್ಲಾ?

– ಒಳ್ಳೇದು. ನಾಳೆ ವಿಚಾರಿಸಿ. ಮರೀಬೇಡಿ. ಬರ್ತೀನಿ. ಫೋನ್ ಇಡ್ತೀನೀ.

●

# ಮುಂದೆ ಸಾಗುವ ಮುನ್ನ ಹಿಂದೆ ನೋಡಬಾರದೆ ಒಮ್ಮೆ...

* ಹಲೋ... ಹಲೋ... ಮೇಡಂ ನಾನು...

– ಓಹ್... ಏನು ಸಮಾಚಾರ? ಊರಿಗೆ ಬಂದಿದಿರಾ? ಎಲ್ಲಿಂದ ಫೋನ್ ಮಾಡ್ತಾ ಇರೋದು?

* ಇಲ್ಲಪ್ಪಾ ಊರಿಂದ್ಲೇ... ಮುಂದಿನವಾರ ಊರಿಗೆ ಬರ್ತೀನಿ...

ಚನ್ನಾಗಿದ್ದೀರಾ ಮ್ಯಾಡಂ...

– ಸದ್ಯಕ್ಕೆ... ಆರಾಮ... ಹಹ್ಹ... ಹಹ್ಹ... ನೀವು?

* ಚಳಿ–ಮಳೆ ಯಾವುದೂ ಇಲ್ಲವಲ್ಲ... ಅದಕ್ಕೆ ಆರಾಮು... ಹಹ್ಹ... ಮತ್ತೆ... ನಿಮಗೆ ಪುರುಸೊತ್ತು ಇದೆಯಾ?

– ಹಹ್ಹ... ಇಲ್ದೆ ಇದ್ರೂ ಮಾಡ್ಕೊತೀನೀ ಹೇಳಿ...

* ಥ್ಯಾಂಕ್ಯೂ ಮೇಡಂ, ಒಂದೈದು ನಿಮಿಷ 'ಮಹಿಳಾ ದಿನಾಚರಣೆ' ಬಗ್ಗೆ ನಿಮ್ಮ ಅಭಿಪ್ರಾಯ–ಅನಿಸಿಕೆ ಬೇಕಿತ್ತು. ಮಹಿಳಾ ದಿನಾಚರಣೆ ಸಂಬಂಧ ಆಕಾಶವಾಣಿಲೀ ಪ್ರತಿದಿನ ಬೆಳಿಗ್ಗೆ ೫–೬ ನಿಮಿಷ ಈ ಕಾರ್ಯಕ್ರಮ ಪ್ರಸಾರ ಮಾಡ್ತಾ ಇದೀವೀ... ಈ ತಿಂಗಳಿಡೀ ಪ್ರಸಾರ ಮಾಡ್ತಿವೀ... ಐದು ನಿಮಿಷ... ಫೋನ್‌ನಲ್ಲೇ ರೆಕಾರ್ಡ್ ಮಾಡಿಕೊಳ್ತೇನೀ...

– ಏನು ಕಾಲ ಬಂತಪ್ಪಾ... ಎಲ್ಲ ಫೋನ್‌ನಲ್ಲಿ. ಅಲ್ಲ ಇದ್ದಕ್ಕಿದ್ದ ಹಾಗೆ ಮೈಕು ಹಿಡಿದು ಬಿಟ್ರೆ... ಏನು ಮಾತನಾಡೋದು?

* ಒಂದರ್ಧ ಗಂಟೆ ಬಿಟ್ಟು ಫೋನ್ ಮಾಡ್ತಿನೀ... ದಿನಾ ಪಾಠ ಮಾಡ್ತೀರಾ... ನಿಮ್ಗೆ ಮಾತಾಡೋದು ಹೇಳಿಕೊಡಬೇಕಾ? ಹಹ್ಹ...

– ಹಾಗಲ್ಲ... ಹಹ್ಹ... ಸ್ವಲ್ಪ 'ಸೆನ್ಸಿಬಲ್' ಆಗಿ ಮಾತಾಡಬೇಕಲ್ಲ... ಜವಾಬ್ದಾರಿ... ಜವಾಬ್ದಾರಿ... ಹಹ್ಹ... ಹಹ್ಹ... ನಿಮ್ಮ ರೇಡಿಯೋದಾಗ ಏನೇನೋ ಮಾತಾಡಂಗೆ ಇಲ್ಲವಲ್ಲ... ಕಟ್ ಮಾಡಿಬಿಡ್ತಿರಾ...

* ಹಹ್ಹ... ಮೇಡಂ... ಹೇಳಿ... ಯಾವಾಗ ಫೋನ್ ಮಾಡ್ಲಿ...

– ನೀವು ಹಂಗೇ ಇದೀರಾ... 'ಕಾಯಕವೇ... ಕೈಲಾಸ'. ಆದ್ರೆ... ನಿಮ್ಮ ಕಾರ್ಯಕ್ರಮ ಯಾರು ಕೇಳ್ತಾರೆ... ಯಾರೂ ರೇಡಿಯೋ ಹಚ್ಚೋದೇ ನೋಡಿಲ್ಲ...

* ರೇಡಿಯೋ ಹ್ಯಾಗೆ ಮೂಲೆಗುಂಪಾಗಿದೆಯೋ ಹಾಗೇ ನಾವು ಕಾರ್ಯಕ್ರಮ ಮಾಡೋರೂ ಮೂಲೆಗುಂಪಾಗಿದೀವಿ... ಆದ್ರೂ... ಎಲ್ಲೋ... ಯಾರೋ ಒಬ್ಬ ಕಿವಿ ತೆರೆದುಕೊಂಡು ರೇಡಿಯೋ ಎದುರಿಗಿಟ್ಟುಕೊಂಡು ಕೂತಿದಾನೆ ಅನ್ನೋ ಭರವಸೆಯಿಂದ ಕೆಲ್ಸ ಮಾಡ್ತಿವೀ... ಸಂಬಳ ತಕ್ಕೋತಿವಲ್ಲ...

* ನೀವು ಕೆಲ್ಸಗಿತ್ತೀ... ನಂಗೊತ್ತು... ಈ ಅಕಾಲದಲ್ಲಿ ಇಡೀ ತಿಂಗಳು ನಿಮ್ಮ ಸ್ಟೇಶನ್‌ನಲ್ಲಿ ಮಾತ್ರ ಯಾಕೆ ಮಹಿಳಾ ದಿನಾಚರಣೆ ಅಂತ...

– ಮೇಡಂ... ಯಾಕೆ ಅಂದ್ರೆ... ನಾನು ಒಬ್ಬ ಮಹಿಳೆ ಅದಕ್ಕೆ...

* ಹಾಗಲ್ಲ... 'ಎಚ್ಚತ್ತ ಮಹಿಳೆ' ಅನ್ನೀ.

– ಹಹ್ಹ... ಹಹ್ಹ...

* ಸಂತೋಷ. ನಿಮ್ಮ concern ಮೆಚ್ಚಿದೆ. ಅದಕ್ಕೆ ಹೇಳೋದು ೩೩% ರೆಸರ್ವೇಶನ್ ಬೇಕು ಅಂತ... ಎಲ್ಲೋ ಏನೋ work ಆಗುತ್ತೆ... ಪರಿಣಾಮ ಇದ್ದೇ ಇರುತ್ತೆ... ಫಲ ಸಿಕ್ಕೇ... ಸಿಗುತ್ತೆ... ನಾನು ನಿಮ್ಮ ಜತೇಲಿ ಇದೀನಪ್ಪಾ... ಐದು ಘಂಟೆಗೆ ಫೋನ್ ಮಾಡಿ... ಏನೋ... ನನಗೆ ತಿಳಿದಂಗೆ ನಾಕು ಮಾತು ಹೇಳ್ತೀನೀ... ನಿಮಗೆ ಇಷ್ಟ ಆದ್ರೆ... ಪ್ರಸಾರಕ್ಕೆ ಯೋಗ್ಯವಾಗಿದೆ ಅಂತ ಅನ್ನಿಸಿದ್ರೆ ಬಳಸಿಕೊಳ್ಳಿ...

– ಥ್ಯಾಂಕ್ಯೂ... ಮತ್ತೆ ಫೋನ್ ಮಾಡ್ತಿನೀ...

* * *

* ಹಲೋ... ಮೇಡಂ ರೆಡಿನಾ? ಐದು ಘಂಟೆ... ರೇಡಿಯೋ ಟೈಮ್!

– ರೆಡಿ...

* ಹಾಗಾದ್ರೆ... ಎರಡು ನಿಮಿಷ ಬಿಟ್ಟು ಒಂದು ರಿಂಗ್ ಕೊಟ್ಟು 'ರೆಡಿ' ಅಂತಿನೀ... ನೀವು ಮಾತಾಡಕ್ಕೆ ಶುರುಮಾಡಿ... ಮಧ್ಯೆ ಏನಾದ್ರೂ ಎಡವಟ್ಟಾದರೆ ಗಾಬರಿಯಾಗಬೇಡಿ... ನಿಲ್ಲಿಸಬೇಡಿ... ಹೇಳ್ತಾ ಹೋಗಿ... ಆಮೇಲೆ ಬೇಕಾದ್ರೆ ನಾನು ಎಡಿಟ್ ಮಾಡ್ಕೋತೀನೀ... ಹಿಂದೆ ಮಹಿಳೆಯರ ಪರಿಸ್ಥಿತಿ ಹೇಗಿತ್ತು... ಈಗ ಹೇಗಿದೆ? ಮುಂದೆ ನೀವು ಏನು ಬಯಸುತ್ತೀರಿ... ಹೀಗೆ... ೫–೬ ನಿಮಿಷ... ನಿಮಗೆ ಅನಿಸಿದ್ದನ್ನು Frank ಆಗಿ ಹೇಳಿ... ನಂಗೆ ರೆಡಿಮೇಡ್ ಟಾಕ್ ಬೇಡ... ಸುಸಂಬದ್ಧವಾಗಿರದಿದ್ರೂ ಪರವಾಗಿಲ್ಲ... ಪ್ರಾಮಾಣಿಕವಾಗಿರಬೇಕು...

– ಅಲ್ರೀ... ಈಗ instructions ಕೊಡ್ತಿದೀರಲ್ರೀ... ಹಹ್ಹ...

* ಹೂಂ... ಮೊದಲೇ ಹೇಳಿದ್ರೆ... ಗಟ್ ಮಾಡ್ಕೊಂಡು... ಬರ್ಕೊಂಡು ಓದ್ತೀರಾ... ಬೋರ್ ಹೊಡಿತೀರಾ... ಅದಕ್ಕೆ... ಹಹ್ಹ... ಸಾರಿ... ತಮಾಷೆ ಮಾಡ್ದೆ...

– 'ಇದ್ದದ್ದನ್ನ ಹೇಳಿದ್ರೆ... ಎದ್ದು ಬಂದು ಎದೆಗೆ ಒದ್ದಂಗೆ' ಅಂತ ಗಾದೆ ಇದೆ... ಹಂಗೆಲ್ಲ ಹೇಳಲ್ಲ ನಾನು... ಹೂಂ... ನಾನು ರೆಡಿ...

* ಓ.ಕೆ... ರಿಂಗ್ ಮಾಡ್ತೀನೀ... ರೆಡಿ...

– ಇತ್ತೀಚಿನ ದಿವಸಗಳಲ್ಲಿ ಕೂತಿದ್ದಕ್ಕೂ, ನಿಂತಿದ್ದಕ್ಕೂ ದಿನಾಚರಣೆಗಳನ್ನು ಆಚರಿಸುವ ಒಂದು ಹೊಸ ಟ್ರೆಂಡ್ ಶುರುವಾಗಿದೆ. ಹಾಗಾಗಿ ಮಾರ್ಚ್ ೮ ಒಂದು ವಿಶೇಷ ದಿನ ಅಂತ ನನಗಂತೂ ಅನ್ನಿಸಲ್ಲ... ನನ್ನ ಬಗ್ಗೆನೇ ಹೇಳಬೇಕು ಅಂದ್ರೆ... ನಾನು ಯಾವತ್ತೂ ಹುಟ್ಟಿದ ದಿವಸ ಕೂಡ ಆಚರಿಸಿಕೊಂಡಿಲ್ಲ... ಆದ್ರೂ... ವರುಷದಲ್ಲಿ ಒಂದು ದಿನವಾದರೂ ಮಹಿಳೆಯರ ಬಗ್ಗೆ ಯಾರಾದ್ರೂ ವಿಶೇಷ ಗಮನ ನೀಡಿದ್ದೇ ಆದ್ರೆ... ನಾನು ಸಂತೋಷ ಪಡ್ತೀನೀ... ನಾನು ನನ್ನ ಅಜ್ಜಿಯ ಬದುಕು ನೋಡಿದೀನಿ... ಅವಳು ಶಾಲೆಯ ಮೆಟ್ಟಿಲೇ ಹತ್ತಲಿಲ್ಲ. ಸಾವಿರಾರು ಮಂದಿಗೆ ಅಡಿಗೆ ಮಾಡಿ ಹೊಟ್ಟೆ ತುಂಬಾ ಉಣಿಸಿದ್ದೇ ಅವಳ ಸಾಧನೆ... ಕೊನೆಗಾಲದಲ್ಲಿ ಪಾರ್ಶ್ವವಾಯು ಆಗಿ ಮೂಲೆ ಹಿಡಿದು ಎರಡೇ ಬೆರಳುಗಳಿಂದ ತುತ್ತನ್ನ ಬಾಯಿಗೆ ತೆಗೆದು ಇಡೋಕೆ ಸಾಹಸ ಮಾಡ್ತಾ ಇದ್ಲು... ಇನ್ನು ನನ್ನಮ್ಮ ಎಂಟನೇ ಕ್ಲಾಸು... ಮನೆಲೀ ನಾವು ೫ ಜನ ಹೆಣ್ಣುಮಕ್ಕಳು... ದುಡಿತೀದ್ದದ್ದು ಅಪ್ಪ ಮಾತ್ರ... ನಾವೆಲ್ಲ ಕೂಳಿಗೆ ದಂಡ ಅಂತ ಅವರ ವಿಚಾರ! ಒಂದು ಸಣ್ಣ ಕೆಲ್ಸ ಇದ್ದಿದ್ರೆ... ಒಂಚೂರು ಜಾಸ್ತಿ ಓದಿದ್ದಿದ್ರೇ... ಅಂತ ತನಗೆ ತಾನೆ ಅಮ್ಮ ನೂರು ಸಲ ಜಪ ಮಾಡೋಳು... ಒಂದು ತುತ್ತಿಗೋಸ್ಕರ ಮರ್ಯಾದೆ ಕಳೆದುಕೊಳ್ಳಬಾರದು. ಕಸ–ಮುಸುರೆಯಾದ್ರು ಮಾಡಿ ಬದುಕು ಮಾಡಬೇಕು. ಈ 'ಭಿಕ್ಷಾನ್ನ' ಬೇಡ... ಯಾರ ಅನ್ನದ ಹಂಗಿನಲ್ಲಿ ಇರಬಾರ್ದು. ಹಾಗೆ ಬದುಕು ಮಾಡಿ ಅಂತ ನಮ್ಗೆ ಬುದ್ಧಿ ಹೇಳೋಳು...

ಅಜ್ಜಿ, ಅಮ್ಮನ ಚಿತ್ರ ಈ ಹೊತ್ತಿಗೂ ನನ್ನ ಕಣ್ಮುಂದೆ ಇದೆ. ಅದಕ್ಕೇ ನಾನು ಕಷ್ಟಪಟ್ಟು ಓದಿ... ಕೆಲಸಕ್ಕೆ ಸೇರಿದೆ. ನಾವು ೫ ಜನ ಅಕ್ಕತಂಗಿಯರು ಈಗ ಕೆಲ್ಸದಲ್ಲಿ ಇದೀವೀ... ನಾನು ನನ್ನ ಅಜ್ಜಿಯ, ಅಮ್ಮನ ದಾರಿಯಲ್ಲಿ ಒಂದೇ ಹೆಜ್ಜೆ ಮುಂದೆ ಹೋಗಿರಬಹುದು... ಆದ್ರ ಆ ಹೆಜ್ಜೆ ನನ್ನಲ್ಲಿ ಅಪರಿಮಿತ ಬದಲಾವಣೆ ತಂದಿದೆ... ಅವರ ಪಾಡು ನನ್ನದಾಗಬಾರದು ಅಂತ ಯಾವಾಗಲೂ ಯೋಚಿಸುತ್ತಾ, ವಿಚಾರಮಾಡುತ್ತಾ... ನನ್ನ ದಾರಿ ಕಂಡುಕೊಂಡೆ. ನನ್ನ ಮುಂದಿನ ಪೀಳಿಗೆ... ನಾಕು ಹೆಜ್ಜೆ ಮುಂದೆ ಹೋಗಿದೆ... ಸಂತೋಷ ಪಡ್ತೀನೀ... ಆದ್ರೆ ಮುಂದೆ ಸಾಗುವ ಮುನ್ನ ಒಮ್ಮೆ ಹಿಂದೆ ನೋಡಬೇಕು ಅಂತಾನೂ ನಾನು ಅವರಲ್ಲಿ ಕೇಳಿಕೊಳ್ತೀನೀ... ಈ ಎಚ್ಚರ, ವಿವೇಕ, ಸ್ವಾತಂತ್ರ್ಯ ತನಗೆ ತಾನೆ ನಮಗೆ ಒದಗಿ

ಬರಲಿಲ್ಲ. ನಮ್ಮ ಅನೇಕ ಹಿಂದಣ ಮಹಿಳೆಯರ ಹೋರಾಟ–ತ್ಯಾಗದ ಫಲವಾಗಿ ಸಾಗಿ ಈ ಹೊತ್ತು ಇದ್ದುದರಲ್ಲಿ ಸಹ್ಯವಾದ ಬದುಕನ್ನು ಪಡೆದುಕೊಂಡಿದ್ದೇವೆ. ನನ್ನ ಹಿಂದಿನ ಪೀಳಿಗೆಯವರು ಕಷ್ಟಪಟ್ಟು ಗಳಿಸಿದ ಸ್ವಾತಂತ್ರ್ಯ ಫಲಾನುಭವಿ ನಾನು ಅಂತ ತಿಳ್ಕೊಂಡು ಅವರಿಗೆ ನಾನು ಕೃತಜ್ಞಳಾಗಿದೀನೀ...

ಇವತ್ತಿನ ದಿವಸ ಮಹಿಳೆ ಎಲ್ಲ ರಂಗಗಳಲ್ಲಿ ತನ್ನ ಸ್ವಂತಿಕೆಯ ಛಾಪನ್ನು ಮೂಡಿಸ್ತಾ ಇದಾಳೆ... ಎಲ್ಲ ವಲಯಗಳಲ್ಲಿ ತಕ್ಕಮಟ್ಟಿಗೆ ಸ್ಥಾನ–ಮಾನ ಕೂಡ ಪಡೀತಾ ಇದಾಳೆ... ಇಷ್ಟಾದ್ರೂ ಅವಳು ತನ್ನನ್ನು ತಾನೆ ನೋಡಿಕೊಳ್ಳುವ ಹಾಗೂ ಸಮಾಜ ಅವಳನ್ನು ನೋಡುವ ದೃಷ್ಟಿಯಲ್ಲಿ ತುಂಬಾ ಬದಲಾವಣೆ ಏನೂ ಆಗಿಲ್ಲ. ಮಹಿಳೆ ಎಷ್ಟೇ ಉನ್ನತ ಮಟ್ಟ ಮುಟ್ಟಿದ್ರೂ... ಎತ್ತರದ ಸ್ಥಾನಮಾನ ಪಡೆದ್ರೂ ಪುರುಷ ಅವಳನ್ನ ಸಮಾನವಾಗಿ ಕಾಣೋದಿಲ್ಲವಲ್ಲ... ಅದಕ್ಕೆ ದುಃಖ ಆಗುತ್ತೆ... ಪುರುಷರು ನಮ್ಮನ್ನು ಹಾಗೆ ಕಾಣೋದಿರಲಿ ಸ್ವತಃ ಮಹಿಳೆಯೇ ತನ್ನ 'ಸ್ವ' ಸ್ವರೂಪ ಗುರುತಿಸೋದ್ರಲ್ಲಿ ಸೋತಿರೋದು ನನಗೆ ಅಚ್ಚರಿ ಹುಟ್ಟಿಸುತ್ತೆ... ಈ ಹೊತ್ತು ತನ್ನ ನಿಲುವು, ನಡೆ, ಬುದ್ಧಿ, ವಿವೇಕ ಇದರ ಬಗ್ಗೆ ಬಹಳಷ್ಟು ಪಟ್ಟಣವಾಸಿ ವಿದ್ಯಾವಂತ ಮಹಿಳೆಯರು ಕಾನ್ಷಿಯಸ್ ಆಗಿ ಆಲೋಚನೆ ಮಾಡದೆ, ತನ್ನ ವ್ಯಕ್ತಿತ್ವದ ಸಾಮರ್ಥ್ಯದ ಬಗ್ಗೆ ವಿಶ್ವಾಸ ಹೊಂದದೇ ಬರೇ ದೇಹ ಸೌಂದರ್ಯ ಹೆಚ್ಚಿಸಿಕೊಳ್ಳುವತ್ತ ಹೆಚ್ಚು ವ್ಯಸ್ತಳಾಗಿರೋದು ನನ್ನಲ್ಲಿ ಆಶ್ಚರ್ಯ ತಂದಿದೆ. ಇತ್ತೀಚಿನ ದಿನಗಳಲ್ಲಂತೂ ಚೆನ್ನಾಗಿ ಕಾಣೋದಕ್ಕೆ ಎಲ್ಲ ಮಹಿಳೆಯರೂ ಹರಸಾಹಸ ಮಾಡ್ತಾ ಇರೋದು ಒಂದು ಥರಾ ಕ್ರೇಜ್ ಆಗಿದೆ. ಅವಳ ಅಮೂಲ್ಯವಾದ ಸಮಯ ಅವಳ ವ್ಯಕ್ತಿತ್ವ ವಿಕಾಸದ ಬದಲಾಗಿ ಉಡುಗೆ–ತೊಡುಗೆ, ಊಟ–ತಿಂಡಿ, ವ್ಯಾಯಾಮ, ಟಿ.ವಿ... ಪಾರ್ಟಿ, ಗಾಸಿಪ್ಪು ಇದರಲ್ಲಿ ಕಳೆದು ಹೋಗ್ತಾ ಇದೆ... ಅಂತರಂಗ ಬಡವಾಗ್ತಾ ಇದೆ... ಬಹಿರಂಗ ಶ್ರೀಮಂತವಾಗ್ತಾ ಇದೆ...

ಏನಿಲ್ಲ ಅಂದ್ರು ನಮ್ಮ ದೇಶದಲ್ಲಿ ನಾವು ಸರಿಸುಮಾರು ೫೦ ಕೋಟಿ ಇದ್ದೀವೀ... ವಿದ್ಯೆ, ಬುದ್ಧಿ, ಹಣ, ಗೌರವ ಈ ಎಲ್ಲದರಿಂದ ವಂಚಿತಳಾದ ನಮ್ಮ ಸಹೋದರಿಯರ ಬಗ್ಗೆ ಈಗಾಗಲೇ ಸವಲತ್ತು ಪಡೆದು ಹೆಚ್ಚಿನ ಸ್ಥಾನಮಾನ ಪಡೆದ ಮಹಿಳೆಯರು ತೋರುವ ಅಕ್ಕರೆ–ಆದರ–ಗಮನ ಅಷ್ಟಕಷ್ಟೇ. ನಾವು ಮಹಿಳೆಯರು ಬೇರೆ ಬೇರೆ ಹಂತಗಳಲ್ಲಿ ಹೇಗೆ ಸಣ್ಣ ಸಣ್ಣ ಗುಂಪುಗಳಾಗಿ, ಛಿದ್ರವಾಗಿ, ಹರಿದು ಹಂಚಿಹೋಗಿದ್ದೀವಿ... ಅಂದ್ರೆ ಒಂದು ಶಕ್ತಿಯಾಗಿ ನಮ್ಮನ್ನು ಸ್ಥಾಪಿಸಿಕೊಳ್ಳೋಕೆ ಆಗ್ತಾ ಇಲ್ಲ... ಸಮಾಜ ಕಟ್ಟುವುದರಲ್ಲಿ ಅರ್ಥಾತ್ ದೇಶ ಕಟ್ಟುವುದರಲ್ಲಿ ನಮ್ಮದೂ ಜವಾಬ್ದಾರಿ ಇದೆ ಅನ್ನೋದು ನಮಗೆ ಗೊತ್ತೇ ಇಲ್ಲ! ಇನ್ನು ವ್ಯಕ್ತಿಯಾಗಿ ಅವಳ ಅಸ್ತಿತ್ವಕ್ಕೇ ಸಂಚಕಾರ ಬಂದಿದೆ... ಆಕಾರ ಪಡೆಯೋ ಮೊದ್ಲೇ ಅವಳನ್ನು ಈ ಜಗತ್ತಿನಿಂದ ಅಳಿಸಿ ಹಾಕುವ ತಂತ್ರಜ್ಞಾನ ಬಂದಿದೆ! 'ಮಹಿಳಾ ದಿನಾಚರಣೆ' ಆಚರಿಸುತ್ತಿರುವ ಈ ಸಂದರ್ಭದಲ್ಲಿ ನಮ್ಮ ಬಗ್ಗೆ ನಾವೇ ಒಂದು ಆತ್ಮಾವಲೋಕನ

ಮಾಡಿಕೊಳ್ಳಬೇಕು ಎಂದಷ್ಟೇ ಓರ್ವ ಸಾಮಾನ್ಯ ಮಹಿಳೆಯಾಗಿ ನಾನು ಹೇಳೋಕೆ ಇಷ್ಟಪಡ್ತಿನೀ...

* * *

* ಥ್ಯಾಂಕ್ಯೂ... ಮುಗೀತಾ? ಇನ್ನೂ ಏನಾದ್ರೂ ಹೇಳೋದು ಇತ್ತಾ?

– ಹೇಳೋದು ಬೇಕಾದಷ್ಟು ಇದೆ. ಕೇಳೋರು ಬೇಕಲ್ಲ... ಹಹ್ಹ... ಹಹ್ಹ... ಓ.ಕೆ... ಬೈ... ಸಿಗ್ತೀನೀ...



# ಕಳ್ಳುಬಳ್ಳಿ ತಾನೆ ನಂಟನು ಬೆಸೆಯುವುದು...

* ಹಲೋ...

– ಹೇಳು...

* ಏನ್ಮಾಡ್ತಾ ಇದ್ದೆ?

– ನಿದ್ದೆ...

* Don't lie

– ಪ್ರಾಮಿಸ್...

* ನಿಮ್ಮಜ್ಜಿ! ಸುಳ್ಳು ಹೇಳ್ತಾ ಇದೀಯಾ... ನಾ ಹೇಳ್ತೀನಿ... ನೀನು question paper solve ಮಾಡ್ತಾ ಇದೀಯಾ...

– ಲೇ... ಅದು ಹ್ಯಾಗೆ ನಿಂಗೆ ಗೊತ್ತಾಯ್ತೋ?

* ದಿವ್ಯದೃಷ್ಟಿ... ಅದು ನಂಗೆ ಇದೆ ಅಂತ ಗೊತ್ತಿದ್ದೂ ಗೊತ್ತಿದ್ದೂ ಸುಳ್ಳು ಹೊಡಿತೀಯಲ್ಲ... ನನಗಿಂತ ನೀನೇ ಹತ್ತು ಮಾರ್ಕ್ಸ್ ಜಾಸ್ತಿ ತೆಗೀ ನಂಗೆ ಬೇಜಾರಿಲ್ಲ...

– ಹೌದು... ನಿಂಗೆ ದಿವ್ಯದೃಷ್ಟಿ ಇದೇಯಲ್ಲ... ನಾಳೆ ಏನೇನು questions ಬರುತ್ತೆ ಹೇಳು ನೋಡೋಣ?

* ಅಯ್ಯೋ... ಅದ್ಕೇನು? ತಗೋ ಬರಕೋ... ಆದರೆ ಮತ್ತೆ ನನ್ನನ್ನು ಬಯ್ಯಂಗಿಲ್ಲ...

– ಹಹ್ಹ... ಬಯ್ಯಂಗಿಲ್ಲವಾ? ಹೊಡಿಬಹುದಾ? ಇರ್ಲಿ... ಹೇಳು... ಬರ್ಕೊತೀನಿ... ಒಂದು ಛಾನ್ಸ್ ನೋಡೇ ಬಿಡ್ತೀನಿ...

* ಕತ್ತೆ ಕಣೆ ನೀನು... ಬೇಗ ಮಂಗ ಮಾಡಬಹುದು ನಿನ್ನನ್ನು?!

– ಹೌದು... ಕತ್ತೆ... ಮಂಗ... ಮೊಸಳೆ... next?

* ಗೂಬೆ! ಬರ್ಕೊ... ಬರ್ಕೊ...

– ಹೇಳು... ... ... ಥ್ಯಾಂಕ್ಸ್! ಏನೇ... ಎಲ್ಲಿ ಸಿಕ್ತೆ?

* ನಂದೀಶ ಕೊಟ್ಟ ಇಸ್ಕೊಂಡೆ. ಯಾರಿಗೂ ಕೊಡಬೇಡ ಅಂತ ಗುಟ್ಟಾಗಿ ಹೇಳ್ದ! ಯಾರಿಗೂ ಹೇಳಬೇಡ...

– ನೀತೂ...ಗೆ... ಅವಳಿಗೂ ಹೇಳಬಿಡು...

* ಅವಳಿಗೂ ಕೊಟ್ಟಿದೀನಿ... ಲೀಕ್ ಮಾಡಬೇಡಾ ಅಂತಾನೂ ಹೇಳಿದೀನಿ.

– ಹಪ್ಪ... ನಾನಂತು ಯಾರಿಗೂ ಹೇಳೋದಿಲ್ಲ...

* ನಂಗೊತ್ತು... ನಿಂಗೇ ನಂದೀಶಾ ಫಸ್ಟ್ ಕೊಟ್ಟಿದ್ದಿದ್ರೆ ನೀನು ನಂಗೂ ಕೊಡ್ತಾ ಇರಲಿಲ್ಲ... ಅಂಥಾ ಏನಾತಿ ನೀನು...

– ನಾಳೆ ಎಕ್ಸಾಂ ಆಗಲಿ ಆಮೇಲೆ ನಿನ್ನನ್ನು ವಿಚಾರಿಸಿಕೊಳ್ತೀನಿ... ಸದ್ಯ ಒಂದೇ ಪೇಪರು! ಮುಗಿದ್ರೆ ಸಾಕಪ್ಪಾ ಕಣ್ತುಂಬ ನಿದ್ರೆ ಮಾಡ್ತೀನಿ...

* ಎಕ್ಸಾಂಟೈಂನಲ್ಲಿ ಎಷ್ಟು ಚೆನ್ನಾಗಿ ನಿದ್ರೆ ಬರುತ್ತೆ... ಅದಕ್ಕೆ ಎಕ್ಸಾಂ ಮುಗಿಯೋದೇ ಬೇಡ ಅನಿಸುತ್ತೆ!

– ಹಪ್ಪ... ನಾಡಿದ್ದು ಮೂವಿಗೆ ಹೋಗೋಣ... ನಾನು sponsor ಮಾಡ್ತೀನಿ. ನೀ ಹೇಳಿದ ಪ್ರಶ್ನೆಗಳೇ ಬಂದ್ರೆ ಖರ್ಚು ನಂದು, ಇಲ್ಲ ನಿಂದು.

* ನೀತೂನ ಕರಿತೀ ತಾನೆ?

– ಖಂಡಿತ... ಎಲ್ಲಿ ಸೇರೋಣ?

* ನಿಮ್ಮನೇಲಿ? ಅದೇ ಹತ್ರ...

– ನೀತು ನಮ್ಮನೆಗೆ ಬರಲ್ಲ...

* Why?

– ನಮ್ಮಜ್ಜಿ ಊರಿಂದ ಬಂದಿದಾರೆ... ಅವಳು ನಮ್ಮಜ್ಜಿ ಇದ್ರೆ ಬರಲ್ಲ ಹಹ... ಹಹ...

* ಯಾಕೆ ನಗ್ತಾ ಇದೀಯಾ?

– ಹೋದ ಸಲ ನಮ್ಮಜ್ಜಿ ನಮ್ಮನೇಲಿ ಇದ್ದಾಗ ಬಂದಿದ್ಲು... ನಮ್ಮಜ್ಜಿ ಅವಳನ್ನ ಹಿಂದೆ–ಮುಂದೆ, ಹಿಂದೆ–ಮುಂದೆ ನೋಡಿದ್ದೇ ನೋಡಿದ್ದು. ಅವಳು ಟೈಟ್ ಜೀನ್ಸ್, ಶಾರ್ಟ್ ಟಾಪ್ ಹಾಕ್ಕೊಂಡು ಬಂದಿದ್ಲು... ಹಹ... ಹಹ...

* ಆಮೇಲೆ? ಹೇಳೇ ಬೇಗ...

– ಇಷ್ಟಿಷ್ಟು ದಪ್ಪ ತಿಕ ಇದೆ ಅಂತ ಜಗತ್ತಿಗೆ ತೋರಿಸೋಕೆ ಇದನ್ನ ಹಾಕ್ಕೊಂಡಿದೀಯಾ? ಯಾವತ್ತಾರ ಹಿಂದೆ ನೋಡ್ಕೊಂಡಿದೀಯಾ? ನಿಮ್ಮನೇಲಿ ಯಾರೂ ಏನೂ ಹೇಳ್ಲೇ ಇಲ್ವಾ? ಅಂತ ಕೇಳಿದ್ರು ಕಣೇ.... ನೀತೂ ಕೆಂಪಗಾಗಿ ನಾ ಯಾಕೆ ನೋಡಿಕೊಳ್ಳಲಿ? ನೋಡೋರು

ನೋಡ್ತಾರೆ ಅಂದುಬಿಟ್ಲು... ತಗೋ 'ಮಕಾ ನೋಡಿ ಮಣೆ ಹಾಕು' ಅಂತಾರೆ... ನಿಂದೊಳ್ಳೆ... ಒಸಿ ಉಳ್ಟಾ ಅಂದು ಬಿಟ್ರು ಕಣೇ... ನಂಗೇ ಅಳೂ ಬರೋ ಹಂಗೆ ಆಯ್ತು... ನಾನು ಸುಮ್ಮನಿರಜ್ಜೀ ಅಂತ ಗದರಿದ್ರೆ... ನಂಗೇ ಹಿಗ್ಗಾ ಮಗ್ಗಾ ಬೈದು... ನಿಂದೂ ಇದೇ ಕತೆನಾ? ಅಂತ ನಮ್ಮಮ್ಮನ್ನ ತರಾಟೆಗೆ ತಗೊಂಡ್ರು... ನಮ್ಮಜ್ಜೀ ಇರೋ ತನಕ ನಾನೂ ಜೀನ್ಸ್ ಹಾಕೋ ಹಾಗಿಲ್ಲ!

* ನೀತೂ ತುಂಬಾನೇ ಕ್ರೂಡ್ ಆಗಿ ಡ್ರೆಸ್ ಮಾಡ್ತಾಳೇ...

– ಏನಾರ ಮಾಡಿಕೊಳ್ಳಲಿ... ನಮ್ಮಜ್ಜಿ ಹಾಗೆ ಹೇಳಬಾರದಿತ್ತು... ನಮ್ಮಮ್ಮ ನೀತೂನ ಸಮಾಧಾನ ಮಾಡಿದರು.

ನಾನೂನು ಸಮಾಧಾನ ಮಾಡಿದೆ.

* ಹಂಗೇ ಆಗಬೇಕು ಅವಳಿಗೆ! ನಂಗೂ ಸೇರಲ್ಲಪ್ಪಾ. ರಸ್ತೇಲಿ ಎಲ್ಲರೂ ತಿರುಗಿ ತಿರುಗಿ ಅವಳನ್ನೇ ನೋಡ್ತಾರೆ... ಸದ್ಯ ನಂಗೆ ನಿಮ್ಮಜ್ಜಿ ಏನೂ ಹೇಳಿಲ್ಲಪ್ಪ... ನಾನು ಬಚಾವ್.

– ನಿಂಗ್ಯಾಕೆ ಹೇಳ್ತಾರೆ... ನಿಂಗೆ ದಿಟ್ಟಿ ತೆಗೀತಾರೆ... ನೀನೂ ನಮ್ಮಜ್ಜಿ ಥರಾನೇ...

* ಅಂತೂ ನನ್ನನ್ನ ಮುದುಕಿಯರ ಸಾಲಿಗೆ ಸಲೀಸಾಗಿ ಸೇರಿಸಿಬಿಟ್ಟೆ!

– ನಾಡಿದ್ದು... ನೀನೇ ಬಾ... ನಮ್ಮನೆಗೇ... ನಮ್ಮಜ್ಜೀನ ನೋಡಿದ ಹಾಗೆ ಹಾಗುತ್ತೆ...

* ಬರ್ತೀನಿ... ಎಣ್ಣೆ ಹಾಕಿ ತಲೆ ಬಾಚಿ, ಎರಡು ಜಡೆ ಹಾಕಿಕೊಂಡು ಹೂ ಮುಡಿದು, ರೇಷ್ಮೆಲಂಗ, ಉದ್ದ ಜಾಕೀಟು, ಲೋಲಾಕು–ಕುಂಕುಮ...

– ಏನೇ ಫ್ಯಾನ್ಸಿ ಡ್ರೆಸ್ಸಾ?

* ಹೂಂ... ಹೂಂ... ನಿಮ್ಮಜ್ಜೀನ ಮೆಚ್ಚಿಸಲಿಕ್ಕೆ...

– ಆಮೇಲೆ... ನಿನ್ನ ಮುಂದೆನೇ ನನ್ನ ಬಯ್ಯಸಲಿಕ್ಕೆ...

* ಹೂಂ... ಅದಕ್ಕೇ... ಹಹ... ಹಹ... ನಂಗೆ ನಿಮ್ಮಜ್ಜೀ ಕಂಡ್ರೆ ಇಷ್ಟ...

– ಯಾಕೋ...

* ಏ... ಆವೊತ್ತು ಗಂಟಲಲ್ಲಿ ತೆಂಗಿನ ನಾರಿನ ಕಿಸಿರು ಸಿಕ್ಕಿಹಾಕ್ಕೊಂಡು ಒದ್ದಾಡ್ತಾ ಇದ್ನಲ್ಲ... ಡಾಕ್ಟರ್ ಹತ್ರ ಹೋಗೋಕೆ ರೆಡಿ ಆಗಿದ್ದೆ. ನಿಮ್ಮಜ್ಜೀ... ಅಯ್ಯೋ... ಅದ್ಯಾಕೆ ಡಾಕ್ಟ್ರು–ಪಾಕ್ಟ್ರು.. ದುಡ್ಡು ಹೆಚ್ಚಾಗಿದೆಯೇ? ಎರಡು ಚಮಚೆ ಒಣ ಅವಲಕ್ಕಿ ಅದ್ರ ಮೇಲೆ ಎರಡು ಚಮಚೆ ಹುರಿಗಡಲೆ ತಿಂದ್ರೆ ಪಾಡಾಗುತ್ತೆ ತಿನ್ನು ಅಂತ ಕೊಟ್ರು. ಎರಡೇ ನಿಮಿಷಲ್ಲಿ ಗಂಟಲು ಕ್ಲಿಯರ್ ಆಯ್ತು... ಸೋ ಸಿಂಪಲ್... ಎರಡು ದಿವಸ ಏನೇನೋ ಮಾಡಿಕೊಂಡು ಒದ್ದಾಡ್ತಾ ಇದ್ದೆ ನೋಡು... ಸೋ... ಸಿಂಪಲ್...

– ಹೌದಾ? ನಂಗೆ ಮರ್ತೇ ಹೋಗಿದೆ... ಹೂಂ ನಮ್ಮಜ್ಜೀ ಹತ್ರ ಎಲ್ಲದಕ್ಕೂ ಮದ್ದು ಇದೆ ಕಣೇ... ಆದ್ರೆ ಪಾಪ... ಯಾವುದಕ್ಕೂ ಪೇಟೆಂಟ್ ಇಲ್ಲ! ಮಾಡಿದ್ದಿದ್ರೆ... ಮಿಲಿಯನೇರ್ ಆಗ್ತಾ ಇದ್ರು...

* ಛೇ... ಟೈಂ ವೇಸ್ಟ್ ಆಯ್ತು... ನಾಳೆ ಎಕ್ಸಾಂ ಇದೆ... ಓ.ಕೆ. ಸೀ ಯೂ...

– ಥ್ಯಾಂಕ್ಯೂ... ಬೈಬೈ... ಸೀ ಯೂ...

* * *

* ಹಲೋ...

– ಬೊಗಳೇ...

* ಬೌವ್... ಬೌವ್... ಬೌವ್... ಬೌವ್... ಹಹ್ಹ... ಹಹ್ಹ...

– ಹಹ್ಹ... ಹಹ್ಹ... ನಾಯಿಗಿಂತ ಚೆನ್ನಾಗಿ ಬೊಗಳುತ್ತೀಯಾ... ಕೂಲ್‌ಡೌನ್!

* ಏನ್ಮಾಡ್ತಾ ಇದೀಯಾ? ಸುಳ್ಳು ಹೇಳಬೇಡ... ದಿವ್ಯದೃಷ್ಟಿ... ದಿವ್ಯದೃಷ್ಟಿ...

– ಬೇಜಾರು ಮಾಡಿಕೊಂಡು ಸುಮ್ಮನೆ ಕೂತಿದ್ದೆ...

* ಹೂಂ... ಗೊತ್ತಾಗ್ತಾ ಇದೆ ವಾಯ್ಸ್‌ನಲ್ಲೇ... ಯಾಕಮ್ಮ ಬೇಜಾರು...

– ನಾನು ಕಳೆದ ಆರು ತಿಂಗಳಿನಿಂದ ರಾತ್ರಿ–ಹಗಲು ಓದಿ ಓದಿ ಎಲ್ಲ ವೇಸ್ಟ್ ಆಯ್ತು... ನೀ ಹೇಳಿದ್ದೇ questionsಗೆ ಪ್ರಿಪೇರ್ ಆಗಿದ್ರೆ ಸಾಕಿತ್ತು... ಆದ್ರೆ ಅಕಸ್ಮಾತ್ ಒಂದೂ ಬರದೇ ಹೋದ್ರೆ... ಹ್ಯಾಗೆ ನಂಬೋದು?

ನಾನು ನೀನು ತಮಾಷೆಗೆ ಹೇಳಿದ್ದು ಅಂತ ಅಷ್ಟೇನೂ ಸೀರಿಯಸ್ ಆಗಿ ತಗೊಂಡಿರಲಿಲ್ಲ... ಛೆ... ಏನೆಲ್ಲ ಓದಿಕೊಂಡಿದ್ದೆ ಎಲ್ಲಾ ವೇಸ್ಟ್...

* ಥೂ ನಿನ್ನ... ಓದಿದ್ದು ಎಲ್ಲಾದ್ರೂ ವೇಸ್ಟ್ ಆಗುತ್ತಾ? ಯಾವತ್ತಾದ್ರೂ ಒಂದು ದಿನ ಹೆಲ್ಪ್ ಆಗೇ ಆಗುತ್ತೆ. ಐದು ಪ್ರಶ್ನೆಗಳಿಗೆ ಉತ್ತರ ಬರೆದು ಮಾರ್ಕ್ಸ್ ತಗೊಂಡು ಬಿಟ್ರೆ ಆಗಿಬಿಡುತ್ತಾ? ತಲೆಲೀ ಏನೂ ಇಲ್ಲ ಅಂದ್ರೆ ಮುಂದೆ ಒಳ್ಳೆಯ ಕೆಲಸ ಸಿಕ್ಕರೂ ನಿಭಾಯಿಸಲಿಕ್ಕೆ ಆಗುತ್ತಾ? ಆಮೇಲಾದ್ರೂ ಬೆವರಿಳಿಸಲೇಬೇಕು. ದಡ್ಡಿ ಕಣೆ ನೀನು. ಪ್ರಶ್ನೆ ಗೊತ್ತಿದ್ರೂ... ಅಷ್ಟಿಷ್ಟು ಓದಿಕೊಂಡಿದ್ದರೂ... ಬರೀಬೇಕಾದ್ರೆ ಮರೆತೇ ಹೋಯ್ತು... ನೆನಪೇ ಆಗ್ತಾ ಇರಲಿಲ್ಲ... ಇದಾರಾ ನಿಮ್ಮಜ್ಜಿ?

– ಹೂ... ಇದಾರೆ... ಹ್ಯಾಂಗೆ ಮುಖದ ಮೇಲೆ ಅಂದು ಬಿಡ್ತಾರೆ ಗೊತ್ತಾ? manners ಇಲ್ಲ ಕಣೇ...

* ಹೂಂ... ಅದಕ್ಕಾ ಬೇಜಾರು?

– ಸದ್ಯ ಎಕ್ಸಾಂ ಮುಗೀತಲ್ಲಾ ಅಂತ ಚೆನ್ನಾಗಿ ನಿದ್ದೆ ಮಾಡಿ ಬೆಳಿಗ್ಗೆ ಹತ್ತಕ್ಕೆ ಎದ್ದೆ. ಹೆಮ್ಮಕ್ಕಳು ಏಳೋ ಹೊತ್ತಾ? ಅಂತ ವಟವಟ ಅಂತು. ಆಮೇಲೆ facial ಮಾಡ್ಕೋಣೋಣ ಅಂತ ಬಾಳೇಹಣ್ಣು–ಮೊಸರು–ಜೇನು–ಪಪಾಯ ಕಿವಿಚ್ತಾ ಇದ್ದೆ... ನಾನು ಮುಖಕ್ಕೆ ಹಚ್ಕೊಂಡು, ತಿಕ್ಕೋದು–ತೀಡೋದು ಎಲ್ಲಾ ನೋಡತಂಕ ನೋಡಿ... ಇದೇನಿದು ಹೊಟ್ಟೆಗೆ ತಿನ್ನದೆ ಮಕಕ್ಕೆ ಬಳ್ಕೊಳ್ಳೋದು? ರಕುತದೊಳಗೆ ಸೇರಬೇಕು ಆಗ ಮಕ ಫಳ ಫಳ ಅನ್ನುತ್ತೆ... ಇದೊಳ್ಳೆ ಗೋಡೆಗೆ ಸುಣ್ಣ ಬಳಿದಂತೆ... ಅಂತ ಏನೇನೋ ಅಂತು ಕಣೇ... ಎಲ್ಲದಕ್ಕೂ ತಲೆ ಹಾಕುತ್ತೆ... ಅಧಿಕ ಪ್ರಸಂಗ...

* ಹಹ... ಹಹ...

– ನಗು...

* ನಿಮ್ಮಜ್ಜಿ ಹೇಳಿದ್ದೂ ನಿಜಾನಪ್ಪ... ಅವರು ನೋಡು ಹ್ಯಾಂಗ ಲಕಲಕ ಅಂತ ಹೊಳೀತಾರೆ...

– ಹೂಂ... ಷೀ ಇಸ್ ಸೆವೆಂಟಿಫೈವ್. ಸ್ಕಿನ್ನು ಎಷ್ಟು ಚೆನ್ನಾಗಿದೆ ಗೊತ್ತಾ? ಸೋಪೇ ಯೂಸ್ ಮಾಡಲ್ಲ... ಬರೇ ಕಡ್ಲೆಹಿಟ್ಟು... ಈಗಲೂ ಎಷ್ಟುದ್ದ ಕೂದಲು ಗೊತ್ತಾ? ಗೋಲ್ಡನ್ ಹೇರ್... ಸೋ ಸ್ಮಾರ್ಟ್...

* ಈಗ ಗೊತ್ತಾಯ್ತು ನಿಜವಾಗ್ಲೂ ನಿಂಗೆ ಯಾಕೆ ಬೇಜಾರು ಅಂತ... ಯಾಕೆ ಹೊಟ್ಟೆಕಿಚ್ಚು? ಅವರ ಹತ್ರಾನೇ ಟಿಪ್ಸ್ ತಗೋ...

– ನಂಗೆ ಈಗಲೇ, ಈ ಕ್ಷಣ ರಿಸಲ್ಟ್ ಬೇಕು. ಅಜ್ಜಿ ಆದ ಮೇಲೆ ಅಲ್ಲ. ಅಲ್ಲೀ ತನಕ ನಾನು ಕಾಯೋದಕ್ಕೆ ತಯಾರಿಲ್ಲ! ನೀನು ಬೇಕಾದ್ರೆ ನಮ್ಮಜ್ಜೀನ ಅಡಾಪ್ಟ್ ಮಾಡ್ಕೋ...

* ಧಾರಾಳವಾಗಿ... ಸಂಜೆ ಬರ್ತೀನಲ್ಲ... ಮಾಡ್ಕೋತೀನಿ... ಓ...ಕೆ...?

– ಹಪ್ಹ... ಹಪ್ಹ... ಹೂಂ... ಹಂಗೆಲ್ಲ ನಮ್ಮಜ್ಜೀನ ಸುಲಭವಾಗಿ ಕೊಟ್ಟುಬಿಡ್ತೀನಾ? ಅವರು ನನ್ನಜ್ಜಿ...

* ಹೂಂ... ಹಪ್ಹ... ಹಪ್ಹ... ನಿನ್ನಜ್ಜಿ!

●

# ಪುಟ್ಟಸಿರುವೆ ಪಾಲಿಸೈ...

* ಹಲೋ... ರಾಜೀ... ಇದೀಯಾ? ಬರ್ತಾ ಇದೀನಿ...

– ಒಂದು ತಾಸು ಬಿಟ್ಟು ಬಾ... ರಾಮಣ್ಣೋರ ಮನೆಗೆ ಹೊರಟಿದೀನಿ... ಹತ್ತು ಗಂಟೆಗೆ 'ಬಾ' ಅಂದ್ರು. ನೀನೂ ಬರ್ತಿಯೇನು ನೋಡು...

* ಇಲ್ಲವ್ವಾ... ನೀನು ಹೋಗಿ ಬಾ... ಕೊನೆಗೂ ಕಾಣೋಕೆ ಅವಕಾಶ ಕೊಟ್ರಲ್ಲ... ಅಷ್ಟಾ ಸತಾಯಿಸೋದು?

– ಏನು ಮಾಡೋದು... 'ಕಾರ್ಯವಾಸಿ ಕತ್ತೆ ಕಾಲು ಕಟ್ಟು' ಅಂತ ಇದೆಯಲ್ಲ ಹಂಗೇ ನನ್ನ ಪಾಡು...

* ಜಾಸ್ತಿ ನಿರೀಕ್ಷೆ ಇಟ್ಕೋಬೇಡ... ನಿನ್ನ ಫೀಸ್ ಇರಲಿ.. ನೂರು ರೂಪಾಯಿ ಕೊಟ್ರೆ ಹೆಚ್ಚು!

– ಅಷ್ಟೆನಾ! ನೂರು ರೂಪಾಯಿ?! ಒಂದು ಟೆಕ್ಸ್ಟ್ ಬುಕ್ ಕೂಡ ಬರಲ್ಲ?! ಮತ್ತೆ... ಕಾಲೇಜಿಗೆ ಪ್ರೈಜ್ ಡಿಸ್ಟ್ರಿಬ್ಯೂಷನ್‌ಗೆ ಬಂದಿದ್ರಲ್ಲ ಆಯಪ್ಪ... ಅದೆಷ್ಟು ಮಾತಾಡ್ತು ಅಂತೀಯಾ? 'ಬಡ ಪ್ರತಿಭಾವಂತ ಹುಡುಗರು ದುಡ್ಡಿಲ್ಲ ಅನ್ನೋ ಕಾರಣಕ್ಕೆ ಓದು ನಿಲ್ಲಿಸಬಾರದು... ಅಂತ ಪರಿಸ್ಥಿತಿ ಬಂದ್ರೆ ಯಾವ ಹೊತ್ತಿಗೆ ಬೇಕಾದ್ರೂ ಬಂದು ನನ್ನನ್ನ ಕಾಣಬಹುದು! ನಾಕು ಕಾಸು ಕೈಯೆತ್ತಿ ಕೊಡುವಷ್ಟು ಒಳ್ಳೆ ಸ್ಥಿತೀಲಿ ಭಗವಂತ ಇಟ್ಟಿದಾನೆ...' ಅಂತೆಲ್ಲಾ ಹೇಳಿದರಲ್ಲೇ? ನಾವೆಲ್ಲ ಚಪ್ಪಾಳೆ ಹೊಡೆದಿದ್ದೇ... ಹೊಡೆದಿದ್ದು...

* ಹಹ್ಹ... ಹಹ್ಹ... ಎದುರಿಗೆ ಜನಸ್ತೋಮ ಇದ್ದಾಗ... ಒಂದೇ ಸಮ ಚಪ್ಪಾಳೆ ಬೀಳ್ತಿದ್ದಾಗ... ಬಾಯಿ ಏನೆಲ್ಲಾ ಆಡಿಬಿಡುತ್ತೆ... ಪಾಪ ನಿನ್ನಂತಹವರು ಆ ಮಾತುಗಳನ್ನು ಜೋಪಾನವಾಗಿ ಎದೇಲಿ ಇಟಕೊಂಡು ನಿಧಿ ಕಾದ ಹಾಗೆ ಕಾಯ್ಕೊಂಡು... ಇರ್ಲೀ... ನಾ ಯಾಕೆ ಡಿಸ್‌ಕರೇಜ್ ಮಾಡ್ಲಿ? ಭೆಟ್ಟಿಯಾಗಿ ಬಾ... ಮನಶ್ಯಾ ಬದಲಾಗಿದ್ರೂ ಬದಲಾಗಿರಬಹುದು?!

– ಏನೇ ಹಿಂಗಂತೀಯಾ? ಸಹಾಯ ಮಾಡೇ ಮಾಡ್ತಾರೆ ಅಂತ ನಂಬಿಕೊಂಡಿದೀನಲ್ಲೇ?

* ಮಾಡಲ್ಲ ಅಂತ ನಾ ಎಲ್ಲಿ ಹೇಳ್ದೆ? ನಿನ್ನ ಥರಾನೇ ನೂರು ಜನ ಬಂದು ಕಂಡ್ರೆ... ಪಾಪ... ಇಷ್ಟಿಷ್ಟೇ... ಪ್ರಸಾದ ಕೊಟ್ಟು ಹರಸಿ ಕಳಿಸ್ತಾರೆ...

– ರಾಜೇಂದ್ರನ್, ಅವರ ಹತ್ರಾನೂ ಹೋಗಿದ್ದೆ...

* ಕೊಟ್ರಾ?

– ಗಂಡ–ಹೆಂಡತಿ ಇಬ್ರೂ ಬಾಯಲ್ಲಿ ಸಕ್ಕರೆ ಇಟಕೊಂಡೇ ಮಾತಾಡ್ತಾರಪ್ಪಾ... ಎಲ್ಲ ಮಾತಾಡಿ... ಅಯ್ಯೋ ಪಾಪ ಅಂದು... 'ಬ್ಯುಸಿನೆಸ್ ವೀಕ್ ಇದೆ' ಸ್ವಲ್ಪ ದಿವಸ ಬಿಟ್ಟು ಬಾ ಅಂದ್ರು. ನಂಗೆ ಅಳೂನೇ ಬಂದುಬಿಡ್ತು. ಅಲ್ವೇ... ಅಡ್ಮಿಷನ್‌ಗೆ ಬರೀ ಹತ್ತು ದಿನ ಉಳಿದಿದೆ. ಫೀಸ್ ಕಟ್ಟಲಿಲ್ಲ ಅಂದ್ರೆ ಎಂಟ್ರೆನೇ ಇಲ್ಲ. ನಮ್ಮತ್ತೆನೂ ನನ್ನ ಕೈಲಾದಷ್ಟು ಸಹಾಯ ಮಾಡ್ತೀನಿ... ಅಂತ ಆವೊತ್ತು ಅಂದಿದ್ದರು. ಮೊನ್ನೆ ಫೋನ್ ಮಾಡಿದ್ರೆ... ಅಯ್ಯೋ ಬರೀ ೭೦%? ಎಷ್ಟು ಕಮ್ಮಿ ತೆಗೆದಿದ್ದೀಯಾ... ಅಂತ ಅನ್ನೋದಾ? ನಿಂಗೊತ್ತಲ್ಲ. ನಮ್ಮ ಕಾಲೇಜಲ್ಲಿ ಹೆಂಗೆ ಪಾಠ ಮಾಡ್ತಾರೆ ಅಂತ... ಎಲ್ಲಾ ಟ್ಯೂಷನ್‌ಗೆ ಹೋಗ್ತಾರೆ... ನಾನು ರಾತ್ರಿ–ಹಗಲು ಶ್ರದ್ಧೆಯಿಂದ ಓದಿ ಏನೋ ನನ್ನ ಕೈಲಾದಷ್ಟು ತೆಗೆದಿದೀನೀ... ದಿವಸಕ್ಕೆ ನಾಕು ಮೈಲಿ ಬೇರೆ ನಡಕೊಂಡು ಓಡಾಡಿದೀನಿ... ಬೆವರು ಸುರಿದು ಹೋಗ್ತಿತ್ತು... ಕಾಲೇಜಿಗೆ ಹೋಗುವಷ್ಟರಲ್ಲೇ ಸುಸ್ತಾಗಿ ಬಿಡ್ತಾ ಇತ್ತು... ಒಂದೊಂದು ಸಲ ಪಾಠ ತಲೆಗೇ ಹೋಗ್ತಾ ಇರಲಿಲ್ಲ... ಬಸ್ ಪಾಸಿಗೆ ಕೂಡ ದುಡ್ಡಿಗೆ ಗತಿಯಿಲ್ಲದೆ ನಡಕೊಂಡು ಓಡಾಡಿ ೭೦% ತೆಗೆದ್ರೆ... ಇಂಥಾ ಮಾತಾ? ಅವರ ಮಗ?! ಎರಡು ಸಲ ಡುಂಕಿ! ಹೆಂಗಾದ್ರೂ ಮನಸ್ಸು ಬರುತ್ತೋ... ಹಂಗಿಸೋಕೆ...

* ಯಾಕೆ ಪರದಾಡ್ತಿಯಾ? ನನ್ನ ಥರಾ ಟಿ.ಸಿ.ಹೆಚ್. ಸೇರಿಕೋ... ಕೆಲ್ಸ ಗ್ಯಾರಂಟೀ...

– ಅದಕ್ಕೂ ದುಡ್ಡು ಬೇಡವಾ? ಡೊನೇಷನ್ ಕೇಳ್ತಾರೆ. ನಂಗೆ ಟೀಚರ್ ಆಗೋಕೆ ಇಷ್ಟ ಇಲ್ಲ. ಬಿ.ಎಸ್.ಸಿ ಮಾಡಿ ಎಂ.ಎಸ್.ಸಿ ಮಾಡಿ... ರೀಸರ್ಚ್ ಮಾಡಬೇಕು. ಚಿಕ್ಕಂದಿನಿಂದ ಕಷ್ಟಪಟ್ಟು ಸಾಕಾಗಿ ಹೋಗಿದೆ. ದೊಡ್ಡ ಕೆಲಸ ತಕ್ಕೊಂಡು.. ನಂಗೆ ಯಾರ್‍ಯಾರು ಅವಮಾನ ಮಾಡಿದಾರಲ್ಲ... ಅವರ ಮುಖಕ್ಕೆ ಹೊಡೆದಂಗೆ ಬದುಕಬೇಕು. ತಂಗೀನ ತುಂಬಾ ಓದಿಸಬೇಕು. ನಮ್ಮಪ್ಪನ್ನ ಚೆನ್ನಾಗಿ ನೋಡಿಕೊಬೇಕು. ನಮ್ದು ಅಂತ ಒಂದು ಚಿಕ್ಕ ಮನೆ ಮಾಡಿಕೊಂಡು...

* ಒಳ್ಳೆ ಸಂಬಳದಾರನನ್ನು ಮದುವೆ ಮಾಡಿಕೊಂಡು... ರಾಣಿ ಥರಾ...

– ಥೂ. ಥೂ... ಏನೇನೋ ಹೇಳ್ಬೇಡ...

* ಅಯ್ಯಾ... ಏನೇನೋ ಎಲ್ಲಿ ಹೇಳ್ದೆ? ಕನಸಿಗೂ ಒಂದು ಲಗಾಮು ಹಾಕು. 'ಹಾಸಿಗೆ ಇದ್ದಷ್ಟು ಕಾಲು ಚಾಚು' ನನ್ನನ್ನು ನೋಡಿ ಕಲಿ...

– ಬಿಡೇ... ನಿಂದೂ ಒಂದು ಬದುಕಾ? ಒಂದೇ ಸಮ ಹಗಲು–ರಾತ್ರಿ ದುಡಿತೀಯಾ... ಇನ್ನೂ ಟ್ವೆಂಟಿ... ಮುದುಕಿ ಥರಾ ಆಡ್ತಿಯಾ... ನೀನು ಆ ಚಿಳ್ಳೆಪಿಳ್ಳೆಗಳ ಜತೆ ಹೊಡೆದಾಡೋದು ನೋಡಿ ಅಯ್ಯೋ ಅನಿಸುತ್ತೆ. ತಿಂಗಳಾ, ತಿಂಗಳಾ ಒಂದಿಷ್ಟು

ಸಂಬಳ ಬರುತ್ತೆ ಅನ್ನೋದು ಬಿಟ್ರೆ ಮುಂದಿನ ಭವಿಷ್ಯಾನೇ ಕ್ಲೋಸ್. ಆವೊತ್ತು ಕಾಲೇಜಿಗೆ ಬಂದಿದ್ರಲ್ಲ... ನಿಖಿತಾ ರಾಮನ್... ಅವರು ಹೇಳ್ತಾ ಇದ್ರು... ದೊಡ್ಡ ದೊಡ್ಡ ಕನಸು ಕಾಣಬೇಕಂತೆ... ಆವಾಗಲೇ ನಾವು ಏನಾದ್ರು ದೊಡ್ಡದು ಮಾಡಬಹುದು ಅಂತ.

* ಬಿಡು... ನಿನ್ನ ಟೈಪೇ ಬೇರೆ... ಕನಸು ಕಾಣೋದು ನನ್ನ ಜಾಯಮಾನ ಅಲ್ಲ. ಬೇರೆಯವರ ಹತ್ತಿರ ನಾ ಬೇಡೋದು ಸಾಧ್ಯವೇ ಇಲ್ಲ. ನಂಗೆ ಯಾರ ಹತ್ತಿರಾನೂ ಒಂದು ಮಾತು ಅನ್ನಿಸಿಕೊಳ್ಳೋಕೂ ಆಗಲ್ಲ. ನಂಗೆ ಊಟ, ಬಟ್ಟೆ, ಮರ್ಯಾದೆ ಕೊಟ್ಟ ನನ್ನ ಈ ಪುಟ್ಟ ಕೆಲಸದ ಬಗ್ಗೆ ಗೌರವ ಇದೆ. ದೇವರ ದಯ ಇದ್ರೆ ಕರಸ್ಪಾಂಡೆನ್ಸ್ ಕೋರ್ಸ್‌ನಲ್ಲಿ ಓದು ಮುಂದುವರಿಸ್ತೀನಿ... ತುಂಬಾ ದೂರ ಆಲೋಚನೆ ಮಾಡೋದಕ್ಕೆ ನನ್ನ ಕೈಲಿ ಆಗಲ್ಲ...

– ಅಲ್ವೇ... ಇದ್ದೋರಿಗೇ ಸಹಾಯ ಮಾಡೋಕೆ ಬೇರೆಯವರು ಹಾತೊರೆಯುತಾರೆ... ಇಲ್ದೇ ಇರೋರನ್ನ ಯಾರೂ ಕೇಳೋದೇ ಇಲ್ಲ!

* ಪ್ರಪಂಚದ ನಿಯಮಾನೇ ಹಾಗೆ. ಹಸಿದವನಿಗೆ ಊಟ ಮಾಡು ಅಂತ ಯಾರೂ ಹೇಳಲ್ಲ. ಹೊಟ್ಟೆ ತುಂಬಿದವನಿಗೆ ತಿನ್ನು ತಿನ್ನು ಅಂತ ಬಲವಂತ ಮಾಡ್ತಾರೆ. ಗತಿಯಿಲ್ಲದವನಿಗೆ ಮನೇಲೀ ಯಾರು ಆಶ್ರಯ ನೀಡೋದಿಲ್ಲ! ಮನೆ–ಮಾರು ಸರಿ ಇದ್ದೋನಿಗೆ... ನಾಕು ದಿವಸ ಇರು... ಇರು... ಅಂತ ಬಲವಂತ ಮಾಡ್ತಾರೆ... ಬೇಡಿದವನಿಗೆ ಕೊಡೋಕೆ ಹಿಂದೆ ಮುಂದೆ ನೋಡ್ತಾರೆ... 'ಬೇಡ' ಅಂದವನಿಗೆ ತಗೋ... ಇಟ್ಕೋ... ಅಂತ ಜುಲುಮೆ ಮಾಡ್ತಾರೆ... ಹೋಗ್ಲಿ... ನೀನು ಹೋಗಿ ಬಾ... ಫೋನ್ ಮಾಡು ಸಂಜೆ ಸಿಗ್ತೀನೀ...

* * *

* ಹಲೋ... ಹಲೋ... ರಾಜಿ... ಸಿಕ್ರಾ? ಏನಂದ್ರು?

– ಹೂಂ... ಒಂದು ಗಂಟೆ ಪ್ರವಚನ ಮಾಡಿ... ಎಲೆ ಅಡಿಕೆ ಜತೆಗೆ ನೂರು ರೂಪಾಯಿ ಇಟ್ಟು ಕೊಟ್ರು! ನಿನ್ನ ಅದೃಷ್ಟ ಇದ್ರೆ ಇದೇ ಒಂದು ಲಕ್ಷ ರೂಪಾಯಿ ಥರಾ ಆಗಿ ನಿನ್ನನ್ನು ಕಾಪಾಡುತ್ತೆ ಅಂತ ಹೇಳಿದ್ರು... ಅಲ್ಲವೇ ಆ ನೂರು ರೂಪಾಯಿ ದಿನಾ ಕೋಳಿ ಥರಾ ಮೊಟ್ಟೆ ಹಾಕುತ್ತಾ? ಏನು ಜನವೋ... ಆ ಬುಡುಬುಡಿಕೆ ದಾಸಯ್ಯನ ತಾವ ಯಾಕಾದ್ರು ಹೋದ್ನೋ ಅಂತ ಅನ್ನಿಸ್ತು... ಬರೀ ಮಾತು...

* ಹಷ್ಟ... ಹಷ್ಟ... ಹೋಗ್ಲಿ ರಮಾದೇವಮ್ಮನ ಹತ್ರ ಹೋಗಿ ನೋಡು. ಅವರು ಕಾಲೇಜಿನ ಬೋರ್ಡ್ ಮೆಂಬರು...

– ನೋ ಯೂಸ್. ಟ್ರೈ ಮಾಡ್ದೆ. ಅವರು ನನ್ನನ್ನು ಮೀಟ್ ಮಾಡೋದಕ್ಕೂ ನಿರಾಕರಿಸಿಬಿಟ್ರು.

* ಪ್ರಿನ್ಸಿಪಾಲ್ ಅವರನ್ನೇ ಕಾಣು. ರಿಕ್ವೆಸ್ಟ್ ಮಾಡ್ಕೋ... ಸ್ವಲ್ಪವಾದ್ರೂ ಡೊನೇಷನ್ ಆದ್ರೂ ಕಮ್ಮಿ ಮಾಡ್ತಾರ ನೋಡು.

– ಅದನ್ನು ನಾನು ಮಾಡಿಲ್ಲ ಅಂದ್ಕೊಂಡಿದೀಯಾ? ಅಯ್ಯೋ ಅವರು ಮಾತಾಡಿಸಿದ್ರೇನೆ ಉರಿದು ಬೀಳ್ತಾರೆ. ೮೦–೮೫% ತಗೊಂಡವರಿಗೆ ಸೀಟೇ ಕೊಟ್ಟಿಲ್ಲ. ನಿಮಗೆ ಸೀಟು ಕೊಟ್ಟಿದೀವೀ. ಫೀಸು ಕಮ್ಮಿ ಇದೆ. ಇನ್ನೂ ಎಷ್ಟು ಕನ್ಸೆಷನ್? ಬೇಕಾದ್ರೆ ಸೇರಿಕೊಳ್ಳಿ, ಇಲ್ಲಾಂದ್ರೆ ಬೇರೆ ಕಡೆ ಹೋಗಿ. ನಿಮಗೆಲ್ಲಾನೂ ಬಿಟ್ಟಿ ಆಗಬೇಕು... ಅಂತೆಲ್ಲಾ ಬೈದುಬಿಟ್ರು.

* ಅಯ್ಯಾ... ಪ್ರಿನ್ಸಿಪಾಲ್ ಆದಾಕ್ಷಣ ಬಯ್ಯೋ ಹಕ್ಕು ಬಂದುಬಿಡುತ್ತಾ? ಯಾವ ರೂಲ್ಸ್‌ನಲ್ಲಿ ಹೇಳಿದೆಯೋ... ಸಿಕ್ಕಸಿಕ್ಕವರಿಗೆಲ್ಲ ಬಯ್ಯಬಹುದು ಅಂತ... ನಮ್ಮ ಕಷ್ಟ ನಾವು ಹೇಳ್ಕೋತೀವೀ. ಆಗಲ್ಲ ಅಂದ್ರೆ ಆಗಲ್ಲ ಅಂತ ಹೇಳಲಿ, ಅದ್ಯಾಕೆ ಬಯ್ಯಬೇಕು? ಬಡವರು ಎಂದರೆ ಎಲ್ಲರಿಗೂ ತಾತ್ಸಾರ...

– ಅಯ್ಯೋ... ಆ ಮುದುಕನಿಗೆ ಬ್ಲಡ್ ಪ್ರೆಷರ್ ಇದೆ ಅನಿಸುತ್ತೆ. ಕೂಗಾಡ್ತಾ ಇತ್ತು. ಫೋನ್ ಮೇಲೆ ಫೋನ್ ಬರ್ತಾ ಇತ್ತು. ಚೆನ್ನಾಗಿ ಬೈದು... ಆಮೇಲೆ ಕೊನೆಗೆ... ಸ್ಕಾಲರ್‌ಶಿಪ್ಪು, ಫ್ರೀಷಿಪ್ಪು ಅಂತೆಲ್ಲ ಇರುತ್ತೆ... ಸದ್ಯ ಫೀಸ್ ಕಟ್ಟಿ ಸೇರಿಕೊಳ್ಳಿ ಆಮೇಲೆ ಏನಾದ್ರೂ ಮಾಡೋಣ ಅಂದ್ರು... ಆದ್ರೆ... ಐದು ಸಾವಿರ... ಎಲ್ಲಿಂದ ತರೋದು?

* ಸಾಲ ಮಾಡು...

– ಸಾಲಾನಾ? ನನ್ನನ್ನ ಹರಾಜು ಹಾಕಿಕೊಂಡ್ರೂ ನಾಕು ಕಾಸು ಹುಟ್ಟಲ್ಲ... ನಮಗ್ಯಾರು ಸಾಲ ಕೊಡ್ತಾರೆ?

* ಬ್ಯಾಂಕ್‌ನಲ್ಲಿ ಅದೇನೋ ಎಜುಕೇಷನ್ ಲೋನ್ ಇದೆಯಂತಲ್ಲ...

– ಬ್ಯಾಂಕಾ? ನಂದು ಒಂದು ಅಕೌಂಟ್ ಇಲ್ಲ. ಆ ಬ್ಯಾಂಕ್‌ನವರ ಭಾಷೇನೆ ಅರ್ಥ ಆಗಲ್ಲ... ಶೂರಿಟಿ ಬೇಕಂತೆ... ಡಬಲ್ ಶೂರಿಟಿ... ಉಹುಂ... ಯಾರು ಸೈನ್ ಹಾಕ್ತಾರೆ...?

* ದೊಡ್ಡ ದೊಡ್ಡ ಕನಸುಗಳು... ಚಿಕ್ಕ ದಾರಿ ಕೂಡ ಇಲ್ಲ! ಹೋಗ್ಲಿ...

– ಪ್ಲೀಸ್... ಅಲ್ಲಿ ಟ್ರೈ ಮಾಡು ಇಲ್ಲಿ ಟ್ರೈ ಮಾಡು ಅಂತ ಹೇಳಬೇಡ! ನಂಗೆ ಸಾಕಾಗಿದೆ...

* ಇಷ್ಟು ಬೇಗ? ಡೋಂಟ್ ಲೂಸ್ ಹಾರ್ಟ್... ಟ್ರೈ ಅಂಡ್ ಟ್ರೈ... ಅನ್‌ಟಿಲ್ ಯೂ ಸಕ್ಸೀಡ್...

– ಇದನ್ನು ನಿನ್ನ ಚಿಳ್ಳೆಪಿಳ್ಳೆಗಳಿಗೆ ಹೇಳು... ಕಣ್ಣು ಬಾಯಿ ಬಿಟ್ಕೊಂಡು ಕೇಳ್ತಾವೆ...

* ಎಷ್ಟು ದೊಡ್ಡದಾಗಿದೆ ಜಗತ್ತು... ಕೋಟ್ಯಂತರ ಜನ ಇದಾರೆ... ಒಬ್ಬರಾದ್ರೂ... ನಿನ್ನ ನೆರವಿಗೆ ಬರಬಹುದು...

– ಇಲ್ಲ. ನೋ ಮೋರ್ ಡಿಸ್‌ಕಷನ್. ನಾನೂ ಟಿ.ಸಿ.ಹೆಚ್‌ಗೆ ಸೇರ್ಕ್ಕೋತೀನೀ.

* ಇಷ್ಟು ಬೇಗ ಸೋತುಬಿಟ್ಟೆಯಾ?

– ಹಣೆಬರಹ... ಯಾರು ತಪ್ಪಿಸೋಕೆ ಆಗುತ್ತೆ?

* ಹೌದು. ಹೌದು. ಹಣೇಲಿ ಬರೆದಿರೋದನ್ನ ಯಾರೂ ಅಳಿಸೋಕೆ ಆಗಲ್ಲ! ಐದಲ್ಲ... ಹತ್ತು ಸಾವಿರ ಆಗ್ಲಿ. ನಿನ್ನಿಷ್ಟದ ಕೋರ್ಸ್ ತಕ್ಕೋ... ನಾನು ಸಹಾಯ ಮಾಡ್ತಿನೀ...

– ನೀನಾ? ನೀನಾ? ರಿಯಲಿ? ಥ್ಯಾಂಕ್ಸ್... ಥ್ಯಾಂಕ್ಸ್... ನೀನು ನಂಗೆ ಸಹಾಯ ಮಾಡೋ ಸ್ಥಿತೀಲಿ ಇಲ್ಲ ಅಂತ ತಿಳಕೊಂಡು ನಿನ್ನ ಹತ್ರ ಕಷ್ಟ ಸುಖ ಹೇಳಿಕೊಂಡೆನೇ ಹೊರತು ಸಹಾಯ ಕೇಳಲಿಲ್ಲ...

* ಸಹಾಯ ಮಾಡೋ ಸ್ಥಿತೀಲಿ ನಾನು ಈಗಲೂ ಇಲ್ಲ. ಆದ್ರೂ... ಮಾಡ್ತೀನಿ... ನಾಳೆ ನಿಂಗೆ ದುಡ್ಡು ತಂದು ತಲುಪಿಸ್ತೀನಿ... ಓ.ಕೆ.?

– ಥ್ಯಾಂಕ್ಸ್... ತುಂಬ... ತುಂಬ. ಥ್ಯಾಂಕ್ಸ್... ಇಲ್ಲಿಂದಾನೇ ನಿನ್ನ ಕಾಲು ಹಿಡಿತೀನಿ...

* ನೋ... ಯಾರೂ ಯಾರ ಕಾಲನ್ನು ಹಿಡಿಬಾರ್ದು... ನಾನು ಯಾರ ಕಾಲನ್ನೂ ಹಿಡಿಯೋದಿಲ್ಲ... ನೀನೂ ಹಿಡಿಬಾರ್ದು... ಪ್ರಾಮಿಸ್ ಮಾಡು. ನಾಳೆ ಸಿಗ್ತೀನಿ... ಓ.ಕೆ.?

– ........ ಬೈ... ಬೈ...



## ಒಂದು ದಿನ...

* ಹಲೋ... ಅಮ್ಮಾ... ಹೇಗಿದೀರಾ?

– ಚನ್ನಾಗಿದೀನೀ... ಎಲ್ಲ ಸೌಖ್ಯನಾ?

* ಹೂಂ... ಅಮ್ಮಾ ನಿಮಗೊಂದು assignment...

– ಏನೇ ಹಂಗಂದ್ರೆ...?

* ನಿಮಗೊಂದು ಕೆಲ್ಸ ಕೊಡ್ತಾ ಇದೀನಿ...

– ಈಗಿರೋದೆ ಸಾಕಾಗಿದೆ... ಏನು ಹೇಳು...

* ನಾನೊಂದು ಪೇಪರ್ ಪ್ರಸೆಂಟ್ ಮಾಡ್ತ ಇದೀನೀ... ನೀನು ಸಹಾಯ ಮಾಡ್ಬೇಕು... ಅರ್ಜಂಟ್ ಆಗಿ...

– ಹೇಳು... ನಂಗಂತು ಈಗ ಏನೇನೂ ಕೂಡೋದಿಲ್ಲ...

* ಅಯ್ಯೋ... ಆ ಥರಾ ಕೆಲ್ಸ ಅಲ್ಲಮ್ಮಾ... ನೋಡಿಲ್ಲಿ ನಾಳೆ ಬೆಳಗ್ಗೆ ನೀನು ಏಳ್ತಿಯಲ್ಲಾ ಆವಾಗಿಂದ ರಾತ್ರಿ ಮಲಗೊ ತನಕ ಏನೇನು ಕೆಲ್ಸ ಮಾಡ್ತೀಯೋ ಅದನ್ನೆಲ್ಲ ಒಂಚೂರು ಬಿಡದೆ ಟೈಮ್ ಸಮೇತ ಬರೆದಿಡಬೇಕು. ಚಿಕ್ಕದು–ದೊಡ್ಡದು ಎಲ್ಲಾನೂ...

– ಏ... ಇದೆಂತಹ ಹುಡುಗಾಟ? ಅದನ್ನು ಏನಂತ ಬರೆಯೋದು? ಆಚೆ ಹೋದ... ಈಚೆ ಹೋದ... ಕೂತ, ನಿಂತ, ತೊಳ್ದ, ಬಳ್ದ, ತಿಂದ, ಬಿದ್ಕೊಂಡ, ಎದ್ದ... ಛಿ... ಛಿ...

* ಅದನ್ನೇ... ಅದನ್ನೇ... ಬರೆದಿಡು... ಏನನ್ನೂ ಬಿಡಬಾರ್ದು...

– ಅಂದ್ರೆ? ಕೆಮ್ಮಿದ್ದೂ... ಸೀನಿದ್ದೂ...

* ಹ್ಹ ಹ್ಹ... ನೀನು ತುಂಬಾ ಶಾರ್ಪ್ ಇದಿಯಾ... That's good!

– ಇದೆಲ್ಲ ಯಾಕೆ ಅಂತ...

* ಸ್ವಲ್ಪ ಮಜ ತಗೊಳಣ ಅಂತ! ಪ್ಲೀಸ್ ಅಮ್ಮಾ... ನಾಡಿದ್ದು ಬೆಳಿಗ್ಗೆ ಫೋನ್ ಮಾಡ್ತೀನೀ... ನೀ ಫೋನ್‌ನಲ್ಲಿ ಹೇಳು ನಾ ಬರ್ಕೊತೀನಿ... ಇಲ್ಲ... ಫ್ಯಾಕ್ಸ್ ಮಾಡು.

– ಫ್ಯಾಕ್ಸಾ? ಅಯ್ಯೋ... ನಂಗೊತ್ತಾಗಲ್ಲ... ನೀ ಫೋನ್ ಮಾಡು... ನಾನು ಅಕ್ಷರ ಬರಿದೇನೇ ಶತಮಾನ ಆಯ್ತು... ಹ್ಯಾಗೆ ಬರಿಲೀ?

* ಅಯ್ಯೋ... ನೀನೇನು ಪ್ರಬಂಧ ಬರಿಬೇಕಾ? ಸಿಂಪಲ್! ಕೂತೆ... ನಿಂತೆ... ಅದು ಮಾಡ್ದೆ... ಇದು ಮಾಡ್ದೆ... ಆದ್ರೆ ಮಧ್ಯ ಮಧ್ಯ ಟೈಮ್ ಹಾಕು. ಅಷ್ಟೇ ಕಣಮ್ಮಾ...

– ಸರಿ... ಮಾಡ್ದೆ... ಮಡಗ್ದೆ... ಅಂತ ಬರೆಯೋದು? ಏನು ಕತೆನೋ...

* ಒಂದು ಸಲ ಬರೆದು ನೋಡು ಗೊತ್ತಾಗುತ್ತೆ... ಓ.ಕೆ. ನಾಡಿದ್ದು ಫೋನ್ ಮಾಡ್ತೀನೀ... ಅಪ್ಪಂಗೆ ಕೇಳ್ದೆ ಅಂತ ಹೇಳು.

* * *

* ಅಮ್ಮಾ... ರೆಡಿನಾ?

– ನೋಡು... ಈಗ ಒಂದು ನಿಮಿಷಾನೂ ಪುರುಸೊತ್ತಿಲ್ಲ. ಒಲೆಮೇಲೆ ಹಾಲಿಟ್ಟಿದೀನಿ... ನಾನೇ ಆಮೇಲೆ ಹನ್ನೊಂದಕ್ಕೆ ಫೋನ್ ಮಾಡ್ತೀನೀ...

* ಓ.ಕೆ. ಒಳ್ಳೆ ಅಮ್ಮಾ... ಸರಿ...

* * *

– ಹಲೋ

* ಪಪ್ಪ... ಪಪ್ಪ... ಹೇಳೀ ಬರ್ಕೊತೀನಿ... ತಿಂಡಿ ಆಯ್ತೇನಮ್ಮ?

– ರೊಟ್ಟಿ. ಹೀಗೆ ರಾಜು ಸ್ನೇಹಿತರು ಬಂದು ಬಿಟ್ಟಿದ್ರು... ಸದ್ಯ ಹಿಟ್ಟು ಕಲಸಿದ್ದು ಸರಿ ಹೋಯ್ತು. ನಾನು ಒಂದು ತೊಟ್ಟು ಕಾಫಿ ಮಾಡ್ಕೊಂಡು ಕುಡ್ದೆ. ಇನ್ನೇನು ಅಡಿಗೆಗೆ ಇಡ್ತೀನಿ. ಊಟಾನೇ ಮಾಡಿಬಿಡ್ತೀನೀ...

* ಏ... ಒಂಚೂರು ಅವಲಕ್ಕಿ ಮೊಸರಾದ್ರೂ ತಿನ್ನಬಾರದಿತ್ತಾ?

– ನೀನೇನು ಮಾಡಿದ್ದೆ?

* ಇವತ್ತು 'Bread toast. Butter and jam'.

– ಥೂ ದರಿದ್ರ... ಲಕ್ಷಣವಾಗಿ ಉಪ್ಪಿಟ್ಟು, ಅವಲಕ್ಕಿ, ದೋಸೆ, ಇಡ್ಲಿ, ರೊಟ್ಟಿ... ಮಾಡಿಕೊಬಾರ್ದಾ?

* ಡಯಟ್ಟು ಕಣಮ್ಮಾ...

– ಅದೇನು ಡಯಟ್ಟೊ? ಒಂದು ಗ್ರಾಂ ತೂಕ ಕೂಡ ಕಡಿಮೆಯಾಗಿರೋದು ನಾ ಕಾಣೆ...

* ಹೇಳೀ... ಬರ್ಕೊತೀನೀ...

– ಬರ್ಕೋಳೋ ಮುನ್ನ ಒಂದು ಸಲ ಕೇಳಿ ಬಿಡೆ ಓದ್ತೀನೀ...

* That's good. ಹೇಳೀ... ಕೇಳ್ತೀನಿ...

– ನಗಬಾರ್ದು...

* ಅಯ್ಯೋ... ಹೇಳಮ್ಮಾ... ಕೇಳ್ತೀನೀ...

* * *

* ಹೇಳಿ...

– ಬೆಳಿಗ್ಗೆ ೫.೩೦ಕ್ಕೆ ಎದ್ದೆ.

* ಅಷ್ಟು ಬೇಗಾ?

– ಸುಮ್ಮನೆ ಕೇಳು. ನಡುವೆ ಬಾಯಿ ಹಾಕಬೇಡ.

* ಹ್ಞ ಹ್ಞ... ಹೂಂ...

– ಬೆಳಿಗ್ಗೆ ೫.೩೦ಕ್ಕೆ ಎದ್ದೆ. ಹಾಸಿಗೆ ಮಡಿಸಿಟ್ಟು, ಟಾಯ್ಲೆಟ್‌ಗೆ ಹೋಗಿ, ಹಲ್ಲುಜ್ಜಿದೆ. ಬಾಯ್ಲರ್‌ಗೆ ಏಳು ಕೊಡ ನೀರು ತುಂಬಿ ಸ್ವಿಚ್ ಹಾಕ್ದೆ. ಅಂಗಳ ಗುಡಿಸಿ, ಬಾಗಿಲಿಗೆ ನೀರು ಹಾಕಿ, ರಂಗೋಲಿ ಎಳೆದೆ. ಗಿಡಗಳಿಗೆ ನೀರಿನ ಪೈಪ್ ಬಿಟ್ಟೆ. ಅಡಿಗೆ ಮನೇದು ಕಸಾನೆಲ್ಲ ಪ್ಲಾಸ್ಟಿಕ್ ಕವರ್‌ಗೆ ತುಂಬಿ ಗೇಟಿನ ಹೊರಗಡೆ ತಂದಿಟ್ಟೆ. ಮನೆಮುಂದೆ ಒಂದು ರಾಶಿ ಹೊಂಗೆಮರದ ಎಲೆ ಬಿದ್ದಿತ್ತು. ಗುಡಿಸಿ ಬೆಂಕಿ ಹಾಕಿ ಗೊಬ್ಬರ ಮಾಡಿದೆ. ಅಲ್ಲೇ ಸ್ವಲ್ಪ ದೂರ ದನ ಸಗಣಿ ಹಾಕಿತ್ತು. ಆ ತೊಪ್ಪೆನ ಒಳಗೆ ತಂದು ಗುಲಾಬಿ, ಮಲ್ಲಿಗೆ ಬಳ್ಳಿಯ ಗಿಡದ ಕೆಳಗೆ ಹಾಕಿದೆ. ಇಷ್ಟು ಮಾಡೋ ಹೊತ್ತಿಗೆ ೬.೩೦. ನೀರು ಬಾಯ್ಲರ್‌ನಲ್ಲಿ ಸುಮಾರಾಗಿ ಕಾದಿತ್ತು. ಎರಡು ಬಕೆಟ್ ತುಂಬ ಕೊಳೆ ಬಟ್ಟೆಗಳನ್ನು ಸೋಪಿನ ಪುಡಿ ಹಾಕಿ ನೆನೆಸಿಟ್ಟೆ. ಅಡಿಗೆ ಮನೆಯ ಸಿಂಕ್‌ನಲ್ಲಿದ್ದ ಪಾತ್ರೆಗಳನ್ನು ಹಿತ್ತಲಿಗೆ ತಗೊಂಡು ಹೋಗಿ ಇಟ್ಟೆ. ಗ್ಯಾಸು, ಅಡಿಗೆಮನೆ ಕಟ್ಟೆ ಎಲ್ಲಾ ಒರೆಸಿ, ಸಿಂಕಿಗೆ ಬಿಸಿ ನೀರು ಸುರಿದು ಕ್ಲೀನ್ ಮಾಡಿ, ಕಾಫಿಗೆ ಡಿಕಾಕ್ಷನ್ ಹಾಕ್ದೆ. ಈಗ ಟೈಮ್ ೭.೧೫. ಬೂತಿಂದ ಹಾಲು ತಗೊಂಡು ಬಂದು ಬಿಸಿ ಮಾಡಿದೆ. ನಿಮ್ಮತ್ತಿಗೆ ರತ್ನ ಆಗ಼್ಲೆ ಎದ್ದು ಮುಖ ತೊಳಿತಾ ಇದ್ರು. ಎಲ್ಲರಿಗೂ ಕಾಫಿ ಬೆರೆಸಿಕೊಟ್ಟೆ. ನಾನೂ ಕುಡಿದೆ. ನಿಮ್ಮತ್ತಿಗೆ ರಶ್ಮೀನ ಎಬ್ಬಿಸಿ ಮುಖ ತೊಳಸಿ ಹಾಲು ಕೊಟ್ಟಳು. ರಾಜು, ನಿಮ್ಮಪ್ಪ ವಾಕಿಂಗ್ ಹೋದ್ರು. ನಿಮ್ಮತ್ತಿಗೆ ಸ್ನಾನಕ್ಕೆ ಹೋದ್ಲು. ಅಷ್ಟೊತ್ತಿಗೆ ನಾನು ಹೂವು ಕೊಯ್ದು ತಂದಿಟ್ಟೆ. ನಿಮ್ಮತ್ತಿಗೆ ರಶ್ಮಿಗೆ ಸ್ನಾನ ಮಾಡಿಸಿ, ದೇವರ ಕೋಣೆ ಪುಜೆಮಾಡಿ, ದೇವರ ಪಾತ್ರೆ–ಪಡಗ ಬೆಳಗಿದಳು. ಈಗ ೮.೦೦ ಗಂಟೆ. ನಾನು ಕಾಯಿ ಒಡೆದು, ತುರಿದಿಟ್ಟೆ. ಇಡ್ಲೀನ ಬೇಯಲಿಕ್ಕೆ ಇಟ್ಟೆ. ನಿಮ್ಮತ್ತಿಗೆ ಮಿಕ್ಸರ್‌ನಲ್ಲಿ ಚಟ್ನಿ ರುಬ್ಬಿದಳು. ಕುಕ್ಕರ್‌ನಲ್ಲಿ ಅನ್ನಕ್ಕೆ ಇಟ್ಟೆ. ಈಗ ೮.೩೦. ಕೆಲಸದವಳು ಬಂದ್ಲು. ಅಲ್ಲಿ ಇಲ್ಲಿ ಬಿಸಾಕಿದ್ದನ್ನು ಎತ್ತಿ ಕೆಲಸದವಳು ಕಸ ಹೊಡೆಯಲು ಅಣಿ ಮಾಡಿಕೊಟ್ಟೆ. ತರಕಾರಿಯವಳು ಬಂದ್ಲು. ಸೊಪ್ಪು, ಮೂಲಂಗಿ, ಹಸಿಮೆಣಸು ತಗೊಂಡು ಅವಳನ್ನು ಕಳಿಸಿಕೊಟ್ಟೆ. ಈಗ ೯.೦೦. ಅದಾಗಲೇ ರಾಜು ವಾಕಿಂಗ್‌ನಿಂದ ಬಂದು ಸ್ನಾನಕ್ಕೆ ಹೋಗಿದ್ದ. ನಿಮ್ಮಪ್ಪ ಪೇಪರು ಓದ್ತಾ

ಕೂತಿದ್ರು. ಮತ್ತೆ ಒಂದು ಲೋಟ ಕಾಫಿ ಬೆರೆಸಿ ಅವರಿಗೆ ಕೊಟ್ಟೆ. ನೀರುಳ್ಳಿ ಸರಸರ ಹೆಚ್ಚಿ ಅನ್ನಕ್ಕೆ ಒಗ್ಗರಣೆ ಹಾಕಿ ಮೂವರಿಗೂ ಬಾಕ್ಸ್ ಕಟ್ಟಿದೆ. ನಿಮ್ಮತ್ತಿಗೆ ರಶ್ಮಿಗೆ ಇಡ್ಲಿ ತಿನ್ನಿಸಿ, ರಾಜೂಗೂ ಕೊಟ್ಟು, ತಾನೂ ತಿಂದು ಆಟೋ ಹತ್ತಿಸಿದ್ಲು. ನಿಮ್ಮತ್ತಿಗೆ, ಅಣ್ಣ ಒದ್ದಾಡಿಕೊತಾನೇ ಲೇಟಾಯ್ತು ಅಂತ ಆಫೀಸಿಗೆ ಹೋದ್ರು. ಈಗ ೯.೪೫. ನಿಮ್ಮಪ್ಪನಿಗೆ ಸ್ನಾನಕ್ಕೆ ನೀರು ತೋಡಿಕೊಟ್ಟು, ಅಡಿಗೆ ಮನೇಲಿದ್ದ ಉಳಿದಿದ್ದ ಪಾತ್ರೆ ಪಡಗ ಕೆಲಸದವಳಿಗೆ ಕೊಟ್ಟು ನಾನೂ ಸ್ನಾನಕ್ಕೆ ಹೋದೆ. ನಿಮ್ಮಪ್ಪ ಪೂಜೆಗೆ ಕೂತ್ರು. ಸರ್‍ರಂತ ಸ್ನಾನ ಮಾಡಿಕೊಂಡು ಬಂದು ನನ್ನ ಬಟ್ಟೆಗಳನ್ನೂ ಒಗೆಯೋಕೆ ಕೊಟ್ಟು, ದೇವರಿಗೆ ಅಡ್ಡಬಿದ್ದು, ನಿಮ್ಮಪ್ಪಂಗೆ ತಿಂಡಿ ಹಾಕಿಕೊಟ್ಟೆ. ಟೀಗೆ ನೀರಿಟ್ಟು ಕೆಲ್ಸದವಳಿಗೆ ತಿಂಡಿಕೊಟ್ಟು, ಅಡಿಗೆ ಮನೆಕಟ್ಟೆ ಒರೆಸೊಹೊತ್ತಿಗೆ ಗೇಟಿನಲ್ಲಿ ಹಸು ಬಂದು ನಿಂತಿತ್ತು.

* ಹಸುನಾ?

– ಹೌದೆ. ಒಂದು ಹಸು ದಿನಾನೂ ಬಾಗಿಲಿಗೆ ಬರುತ್ತೆ. ೧೧ ಗಂಟೆಗೆ ಸರಿಯಾಗಿ ಬರುತ್ತೆ! ಅದ್ಹೇಗೆ ಟೈಮ್ ಗೊತ್ತಾಗುತ್ತೊ? ಒಂದೆರಡು ಬಾಳೆಹಣ್ಣು, ತರಕಾರಿ–ಹಣ್ಣಿನ ಸಿಪ್ಪೆ ಒಂದೊಂದು ಸಲ ಅಕ್ಕಚ್ಚು ಹೀಗೆ ತಿಂದು–ಕುಡಿದು ಹೋಗುತ್ತೆ!

* ಹೂಂ... ಹೇಳೀ...

– ಹಸುಗೆ ಬಾಳೆಹಣ್ಣು ಕೊಟ್ಟು ನಾನೂ ಇಡ್ಲಿ ತಿಂದು, ಟೀ ಕುಡಿದು, ನಿಮ್ಮಪ್ಪಂಗೆ ಮಾತ್ರೆ ಕೊಟ್ಟು, ತಿಂದ ತಟ್ಟೇನ ತೊಳೆದು, ಬಿಸಾಕಿದ ಟವಲ್ಲು, ಸಾಕ್ಸು, ಪೆನ್ನು, ಪುಸ್ತಕ, ಬಾಚಣಿಕೆ ಎಲ್ಲ ಎತ್ತಿಟ್ಟು ಒಂದು ಗಳಿಗೆ ಕೂತು ಪೇಪರದು ಹೆಡ್‌ಲೈನ್ಸ್ ನೋಡ್ದೆ. ಈಗ ೧೧.೩೦. ಇಪ್ಪತ್ತು ಸಾವು ಅಂತ ಇತ್ತು. ಆಕ್ಸಿಡೆಂಟ್. ಎಣ್ಣೆಬೆಲೆ ೮೦ ರೂಪಾಯಿ! ಪಾಲಕ್ ಕೋಡಬಳೆ ಮಾಡೋದು ಹ್ಯಾಗೆ ಅಂತ ಇತ್ತು. ದಿನಾ ಮೆಂತೆ–ಮೊಳಕೆ ನೀರು ಕುಡಿದ್ರೆ ಶುಗರ್ ಕಡಿಮೆ ಆಗುತ್ತಂತೆ. ಯಾರೋ ಸಬ್‌ರಿಜಿಸ್ಟಾರ್ ಕೋಟಿಗಟ್ಟಲೆ ಆಸ್ತಿ ಮಾಡಿದಾನಂತೆ. ೨ ಕೆ.ಜಿ. ಬಂಗಾರ ೧೦ ಕೆ.ಜಿ. ಬೆಳ್ಳಿ. ಮೂರು ನಿವೇಶನ, ಎರಡು ಮನೆ... ನಾಕು ಕಾರು... ಹೀಗೆ... ಓದಬಾರದ್ದನ್ನೆಲ್ಲಾ ಓದಿ ತಿರಗಾ ಅಡಿಗೆ ಮನೆ ಕಡೆಗೆ ಬಂದಾಗ ೧೧.೫೦. ಸೊಪ್ಪು ಸೋಸಿ, ನೀರಿಗೆ ಉಪ್ಪು ಹಾಕಿ, ಸೊಪ್ಪು ನೆನೆಸಿಟ್ಟೆ. ಮೂಲಂಗಿಯ ಸಿಪ್ಪೆ ತೆಗೆದು ತುರಿದೆ. ಒಂದು ಹೋಳು ಕಾಯಿ ತುರಿದಿಟ್ಟೆ. ಮತ್ತೊಂದು ಪ್ಯಾಕೆಟು ಹಾಲು ಬಿಸಿ ಮಾಡಿ, ಇನ್ನೊಂದು ರೌಂಡು ಕಾಫಿಗೆ ಡಿಕಾಕ್ಷನ್ ಹಾಕ್ದೆ. ಈಗ ೧೨.೩೦. ಪೇಪರ್‌ನವರು ಬಂದ. ಬಿಲ್ ಕೊಟ್ಟೆ. ಪೋಸ್ಟ್ ಬಂತು, ಎತ್ತಿಟ್ಟೆ. ಮಂಡಕ್ಕಿಯವನು ಬಂದು ಹೋದ. ಮಂಡಕ್ಕಿ ಜರಡಿ ಹಿಡಿದು ಬಿಸಿಲಿಗೆ ಇಟ್ಟೆ. ಕುಕ್ಕರ್‌ನಲ್ಲಿ ಬೇಳೆ–ಅಕ್ಕಿ ಇಟ್ಟು, ಸಾಂಬರ್‌ಗೆ ಹುರಕೊಂಡು, ಮಸಾಲೆ ರುಬ್ಬಿದೆ. ಮೊಸರನ್ನ ಮಿಕ್ಸರ್‌ಗೆ ಹಾಕಿ ಸ್ವಲ್ಪ ಮಜ್ಜಿಗೆ ಮಾಡ್ದೆ. ಈಗ ೧.೪೫. ನಿಮ್ಮಪ್ಪಂಗೆ ಮುದ್ದೆ ಮಾಡಿ ಊಟಕ್ಕಿಟ್ಟೆ. ನಾನೂ ಊಟಮಾಡಿ ಅಡಿಗೆ ಮನೆಕಟ್ಟೆ ಒರೆಸೊ ಹೊತ್ತಿಗೆ ಸರಿಯಾಗಿ ೨.೪೫.

* ಅದೆಷ್ಟು ಸಲ ಅಡಿಗೆ ಮನೆಕಟ್ಟೆ ಒರಸ್ತೀಯಮ್ಮಾ... ಹೂಂ... ಹೇಳಿ...

– ಒಂದಿಷ್ಟು ಕಡ್ಲೆಕಾಳು ನೆನೆಹಾಕಿ... ಸಾಕಪ್ಪ ಅನಿಸಿ ಐದು ನಿಮಿಷ ಉರುಳಿಕೊಂಡೆ. ಯಾರದ್ದೋ ಫೋನು... ರಾಂಗ್ ನಂಬರ್! ಮತ್ತೆ... ಹತ್ತು ನಿಮಿಷ ಒಂಚೂರು ನಿದ್ದೆ ಹತ್ತಿತ್ತು... ರಶ್ಮಿ ಬಂದ್ಲು. ಈಗ ೩.೩೦. ಯೂನಿಫಾರಂ ಬಿಚ್ಚಿಸಿ, ಹಾಲು–ಕೇಕು ಕೊಟ್ಟೆ. ಮಂಡಕ್ಕಿಗೆ ಖಾರ ಹಚ್ಚಿ ನಾನೂ ಮುಖ ತೊಳಕೊಂಡು ತಲೆ ಬಾಚಿ, ಹಣೆಗಿಟ್ಟುಕೊಂಡೆ. ಈಗ ೪.೩೦. ಶುಗರ್ ಮಾತ್ರೆ ಖಾಲಿ ಆಗಿದೆ ಅಂದಿದ್ರು ನಿಮ್ಮಪ್ಪ... ಬೇರೆ ಸೀರೆ ಸುತ್ತಿಕೊಂಡು ಅಲ್ಲೇ ಮನೆ ಹತ್ರ ಮೆಡಿಕಲ್ ಸ್ಟೋರ್‌ಗೆ ಹೋಗಿ ಮಾತ್ರೆ, ಹಣ್ಣಿನಂಗಡಿಯಿಂದ ಬಾಳೆಹಣ್ಣು ತಂದೆ. ದಾರಿಲೀ ಕನಕಮ್ಮನ ಮನೆ ಇತ್ತು. ಬಾಗಿಲಲ್ಲೇ ಜಗಲಿ ಮೇಲೆ ಕೂತು ೧೫ ನಿಮಿಷ ಮಾತಾಡಿ ಮನೆಗೆ ಬಂದಾಗ ೫.೩೦. ಒಣಗಿರೊ ಬಟ್ಟೆನೆಲ್ಲಾ ತಂದು ಮಡಿಸಿಟ್ಟೆ. ನೀರು ಬಂತು. ಕುಡಿಯೋ ನೀರು ಹಿಡಿದಿಟ್ಟೆ. ಫಿಲ್ಟರ್ ತೊಳೆದು ಅದಕ್ಕೂ ನೀರು ಹಾಕ್ದೆ. ಗಿಡಕ್ಕೆ ನೀರಿನ ಪೈಪು ಹಾಕ್ದೆ. ಪಂಪ್ ಆನ್ ಮಾಡಿ ನೀರು ಸಿಂಟೆಕ್ಸ್‌ಗೆ ಏರಿಸಿದೆ. ೬.೧೫ಕ್ಕೆ ನಿಮ್ಮತ್ತಿಗೆ ಬಂದ್ಲು. ಕೈಕಾಲು ಮುಖ ತೊಳೆದು ಬಟ್ಟೆ ಬದಲಾಯಿಸಿ ದೇವರಿಗೆ ದೀಪ ಹಚ್ಚಿದ್ಲು. ನಾನು ಹೊರಗೆ ಒಳಗೆ ಎಲ್ಲ ಕಡೆ ದೀಪ ಬೆಳಗಿ ಸೊಳ್ಳೆ ಬರದೆ ಇರಲಿ ಅಂತ ಕಿಟಕಿ ಬಾಗಿಲು ಹಾಕ್ದೆ. ೬.೩೦ಕ್ಕೆ ನಿಮ್ಮಣ್ಣ ಬಂದ. ಎಲ್ಲರೂ ಮಂಡಕ್ಕಿ–ಕಾಫಿ ಕುಡಿದ್ವಿ. ನಿಮ್ಮತ್ತಿಗೆ ಬರ್‍ತಾನೆ ಕಾಯಿ, ಬೆಂಡೆ, ದಾಳಿಂಬರೆ ತಂದಿದ್ಲು. ನಿಮ್ಮಣ್ಣ ನ್ಯೂಸ್ ಹಾಕ್ದ. ಈಗ ೭ ಗಂಟೆ. ಅದೂ ಇದೂ ಮಾತಾಡ್ತಾ ನಾನೂ ಅಲ್ಲೇ ದಾಳಿಂಬರೆ ಬಿಡಿಸ್ತಾ ಕೂತೆ.

– ಅಂತೂ ಕೂತೆಯಲ್ಲ?! ಹಹ್ಹ...

* ಹೂಂ ಕಣೇ... ಒಂದರ್ಧ ಘಂಟೆ ದಾಳಿಂಬರೆ ಬಿಡಿಸ್ತಾ... ಟಿ.ವಿ. ನೋಡ್ದೆ... ಈಗ ೭.೨೦. ಅದ್ಯಾವುದೋ 'ಬೊಂಬೆ ಕುಣಿತ', ಸ್ವಲ್ಪ ನೋಡಿ, ದಾಳಿಂಬರೆ ಸಿಪ್ಪೆ ತೊಳೆದು ಒಣಗಲಿಕ್ಕೆ ಹಿತ್ತಲ ಕಡೆ ಇಟ್ಟೆ. ನಿಮ್ಮತ್ತಿಗೆ ಬೆಂಡೆಕಾಯಿ ಸೋಸಿ ಹುರಿದ್ಲು. ನಾನು ಚಪಾತಿ ಹಿಟ್ಟು ಕಲಸಿದೆ. ನಿಮ್ಮತ್ತಿಗೆ ರಶ್ಮಿಗೆ ಹೋಂವರ್ಕ್ ಮಾಡಿಸಲು ಹೋದ್ಲು. ನಾನು ಚಪಾತಿ ಹಾಳೆ ಮಾಡಿ ಎಣ್ಣೆ ಸವರಿ ಇಟ್ಟೆ. ಈಗ ೮.೩೦. ನಿಮ್ಮತ್ತಿಗೆ ಚಪಾತಿ ಬೇಯಿಸಿ ಎಲ್ಲರಿಗೂ ತಟ್ಟೆ ಹಾಕಿದ್ಲು. ಈಗ ೯.೦೦ ಗಂಟೆ. ಟಿ.ವಿ. ಮುಂದೇನೇ ಎಲ್ಲರಿಗೂ ಚಪಾತಿ, ಪಲ್ಲೆ ಒಯ್ದು ಕೊಟ್ಟಳು. ನಾನೂ ಚಪಾತಿ – ಪಲ್ಯ ತಿಂದು, ಮಿಕ್ಕಿರೊ ಸ್ವಲ್ಪ ಅನ್ನ–ಸಾರು ಹೊರಗಡೆ ಗೇಟ್ ಹತ್ರ ನಾಯಿಗೆ ಹಾಕಿ ಪಾತ್ರೆಗಳನ್ನು ಗಲಬರಿಸಿ ಸಿಂಕಿನಲ್ಲಿ ಜೋಡಿಸಿ, ಹಾಲು ಮುಚ್ಚಿಟ್ಟು, ಕಸ–ಕಡ್ಡಿ ಎತ್ತಿ ಹಾಕಿ, ಗ್ಯಾಸು ಆಫ್ ಮಾಡಿ, ಅಡಿಗೆ ಮನೆ ಕಟ್ಟೆ ಒರೆಸಿ ನಿಮ್ಮಣ್ಣಂಗೆ ಒಂದು ಲೋಟ ಬಿಸಿನೀರು ಕೊಟ್ಟು ನನ್ನ ರೂಂ ಸೇರಿಕೊಂಡಾಗ ೧೦.೩೦. ನನ್ನ ಹಾಸಿಗೆ ಹಾಸಿಕೊಂಡು ನಿಮ್ಮಪ್ಪಂಗೆ ಹಾಸಿಗೆ ಹಾಸಿ ಕೊಟ್ಟು, ಒಂದು ಪುಟ ರಾಮನಾಮ ಬರ್‍ದು...

– ಅಯ್ಯೋ... ಈಗಲೂ ಬರೀತೀಯೇನಮ್ಮಾ?

* ಹೂಂ... ಹತ್ತು ವರುಷದವಳಿದ್ದಾಗ ನಮ್ಮಜ್ಜಿ ನಂಗೆ ದೀಕ್ಷೆ ಕೊಟ್ಟಿದ್ದು... ನಿಮಗೂ ಹೇಳಿಕೊಟ್ಟಿದ್ದೆ ನಾನು. ನೀವುಗಳು ನಾಕು ದಿವಸ ಕೂಡ ಬರೀಲಿಲ್ಲ. ರಶ್ಮಿನೂ ಅಷ್ಟೇ... ಎರಡೇ ದಿನ.. ಬಿಟ್ಟುಬಿಟ್ಟಳು.

– ಹೂಂ... ಹೇಳಿ...

* 'ರಾಮನಾಮ' ಬರೆದು ಪುಸ್ತಕ ಮುಚ್ಚಿಟ್ಟು ಭೂಮಿಗೆ ಬೆನ್ನುಕೊಟ್ಟಾಗ ೧೦.೫೦. ಇನ್ನೇನು ನಿದ್ದೆ ಹತ್ತಬೇಕು, ನೆನಪಾಯ್ತು, ಹೆಪ್ಪೇ ಹಾಕಿಲ್ಲ. ಎದ್ದು ಹೆಪ್ಪು ಹಾಕಿ ಮಲಗಿದೆ. ಈಗ ೧೧.೧೫... ಅದ್ಯಾವಾಗ ನಿದ್ದೆ ಹತ್ತಿತೊ... ದಢದಢ ಅಂತ ಸದ್ದಾಯ್ತು... ಎದ್ದು ಲೈಟ್ ಹಾಕಿ ಕಿಟಕಿಲೀ ನೋಡದ್ರೆ ಬೆಕ್ಕು! ಬಚ್ಚಲಿಗೆ ಹೋಗಿಬಂದು ಮತ್ತೆ ಮಲಗಿದೆ. ಮತ್ತೆ ಎಚ್ಚರ ಆದಾಗ ೫ ಗಂಟೆ. ಆಮೇಲೆ ನಿದ್ದೆನೇ ಹತ್ತಲಿಲ್ಲ. ಕಿಟಕಿಯಿಂದ ತಂಪುಗಾಳಿ ಬರ್‍ತಾ ಇತ್ತು. ನಿಧಾನ ಕತ್ತಲು ಹರಿತಾ ಇತ್ತು... ಚಿಲಿಪಿಲಿ, ಚಿಲಿಪಿಲಿ... ಎದ್ದೆ. ೫.೩೦. ಇದನ್ನೆಲ್ಲ ಕಟ್ಟಿಕೊಂಡು ಏನ್ಮಾಡ್ತಿಯೇ... ಕಾಸು ಹುಟ್ಟದೇ ಇರೋ ಕೆಲ್ಸಗಳು...?

– ಯೋಚನೆ ಮಾಡ್ತೀನಿ... ಯೋಚನೆ ಮಾಡ್ತೀನಿ...

●

# ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಲಿ...

* ಹಲೋ... ಹಲೋ... ರುಕ್ಕೂ.

– ಯಾರು?

* ಸಾವಿತ್ರಮ್ಮ... ಚೆನ್ನಾಗಿದ್ದೀರಾ? ರುಕ್ಕೂ ಇಲ್ವಾ?

– ಅಯ್ಯೋ... ನಿಮಗೆ ಗೊತ್ತಿಲ್ವಾ? ಇಷ್ಟೊತ್ತಿಗೆ ಎಲ್ಲಿರ್ತಾಳೆ ಬ್ಯಾಂಕಿಗೆ ಹೋಗಿದಾಳೆ. ಯಾಕೆ ಏನಾರ ಅರ್ಜೆಂಟ್ ಇತ್ತಾ?

* ಬೇಗ ಹೋದ್ಲಾ? ಹತ್ತೂವರೆಗಲ್ವಾ?

– ಅದೇನೋ... ಇತ್ತೀತ್ತಲಾಗಿ ತುಂಬಾ ಕೆಲ್ಸ ಅಂತೆ... ಇವನನ್ನು ಕಾದ್ರೆ ಲೇಟಾಗುತ್ತೆ ಅಂತ ಬಸ್ನೋ ಆಟೋನೋ ಹಿಡ್ಕೊತಾಳೆ... ಮೇನೇಜರು ತುಂಬಾ ಕಟ್ಟುನಿಟ್ಟು. ತಡ ಆದ್ರೆ ರಜಾ ಹಾಕಿಸ್ತಾರೆ ಅಂತಿದ್ಲು. ಹತ್ತು ಘಂಟೆಗೆ ಹತ್ತು ನಿಮಿಷ ಇರಬೇಕಾದ್ರೆನೇ ಮನೆ ಬಿಟ್ಟುಬಿಡ್ತಾಳೆ. ನಾನು ಹಂಗೂ ನನ್ಮಗನಿಗೆ ಹೇಳ್ದೆ ಒಂಚೂರು ಬೇಗನೇ ಬಿಟ್ಟುಬಿಡಪ್ಪಾ ಅಂತ. ಅಯ್ಯೋ ಯಾರಿಗೂ ಇಲ್ದೇ ಇರೋ ಆಫೀಸು ಇವಳದ್ದಾ ಅಂತಾನೇ. ನಿಮ್ಮ ಮಗಳೋ ಎಲ್ಲಾನೂ ತಲೆಮೇಲೆ ಹೊತ್ಕೊತಾ ಆಮೇಲೆ ದಡಬಡ ಅಂತ ನಮ್ಮ ಮೇಲೆ ಎಗರಿಬೀಳ್ತಾಳೆ ನೋಡಿ... ಇನ್ನೂ ನಂದು ತಿಂಡಿನೇ ಆಗಿಲ್ಲ. ರೊಟ್ಟಿ ತಟ್ಕೊಬೇಕು. ಒಬ್ಬಳೇ ಬೇರೆ ಇರ್ತೀನಾ. ಬೇಜಾರು ಹೋಗತ್ಲಾಗೆ ಅಂತ ಸುಮ್ಮನೆ ಟಿ.ವಿ. ಮುಂದೆ ಕೂತಿದ್ದೆ.

* ನೀವೆ ಪುಣ್ಯವಂತರು! ಬೆಳಬೆಳಿಗ್ಗೆ ಟಿ.ವಿ. ನೋಡೋಕೂ..

– ಹಾಂ... ಹಾಗಲ್ಲ... ಒಳ್ಳೆ ಹಳೇ ಕನ್ನಡ ಪಿಚ್ಚರ್ ಹಾಕ್ತಾನೆ... ನಮ್ಮ ಕಾಲದ್ದು... ಏನೋ ಜೀವ ಆಡಬೇಕಲ್ಲ!

* ಓ... ಧಾರಾಳವಾಗಿ ನೋಡಿ.

– ಏನು ಏನಾರ ಅರ್ಜಂಟ್ ಇತ್ತಾ?

* ಹಂಗೇನಿಲ್ಲ. ನಮ್ಮ ಮಲ್ಲಮ್ಮ ಇದಾಳಲ್ಲ...

– ಹೂಂ ಅದೇ ನಿಮ್ಮನೆ ಕೆಲ್ಸದವಳು?!

* ಹಂಗನ್ನಬೇಡಿ. ಅವಳನ್ನು ಕೆಲ್ಸದವಳ ಥರಾ ನಾವ್ಯಾರೂ ನಡೆಸಿಕೊಂಡಿಲ್ಲ. ನನ್ನ ತಂಗಿ ಥರಾ ಅಥವಾ ಅದಕ್ಕೂ ಗುಲಗಂಜಿ ತೂಕ ಹೆಚ್ಚು ಅಂತ ಇಟ್ಕೊಳ್ಳಿ. ನನ್ನ ಮೂರೂ ಹೆಣ್ಮಕ್ಕಳನ್ನು ಕಣ್ಣಗೊಂಬೆ ಮಾಡ್ಕೊಂಡು ಸಾಕಿದವಳು ಅವಳೇ. ಇಲ್ದೆ ಹೋಗಿದ್ದಿದ್ರೆ ಹೊರಗಡೆ, ಒಳಗಡೆ...

– ಅಯ್ಯೋ... ನಿಮ್ಮ ಮಗಳು ಎಲ್ಲ ಹೇಳಿದಾಳಪ್ಪಾ... 'ನನ್ನಮ್ಮನಿಗಿಂತ ಮಲ್ಲಮ್ಮನೇ ಹೆಚ್ಚು' ಅಂತ ಭಾಳಾ ಸರಿ ಹೇಳಿದಾಳೆ.

* ಏನು? ಹಂಗೆ ಅಂತಾಳಾ?

– ಹಿಂಗೇ... ಮಾತಿಗೆ ಅಂದೆ... ಎಷ್ಟಂದ್ರೂ ತಾಯಿ ತಾಯಿನೇ, ಬೇರೆ ಯಾರು ಆ ಜಾಗ ತುಂಬೋಕೆ ಆಗುತ್ತೆ? ಏನಾಯ್ತು ಮಲ್ಲಮ್ಮಂಗೆ?

* ತುಂಬಾನೆ ಹುಶಾರಿಲ್ಲ. ಹಾಸಿಗೆ ಹಿಡಿದುಬಿಟ್ಟಿದ್ದಾಳೆ. ಒಂದು ಸಲ ರುಕ್ಕು ಹೋಗಿ ಅವಳನ್ನು ನೋಡಿ ಬಂದಿದ್ರೆ ಚೆನ್ನಾಗಿತ್ತು. ಇವತ್ತೋ ನಾಳೆನೋ ಅನ್ನೋ ಹಂಗಿದಾಳೆ.

– ಅಯ್ಯೋ ಪಾಪ... ಎಲ್ಲಿದಾಳೋ... ಹೇಗಿದಾಳೋ...

* ಇಬ್ರು ಗಂಡು ಮಕ್ಕಳು ಆದ್ರೂ ಸುಖ ಇಲ್ಲ. ಮಕ್ಕಳು ಹತ್ರ ಬಿಟ್ಕೊಳಲ್ಲ. ಬೇರೇನೇ ಇದಾಳೆ. ಏನೂ ಕೂಡಲ್ಲ. ನಾನು ತಿಂಗಳಾ ತಿಂಗಳಾ ಐನೂರೋ ಆರುನೂರೋ ಕಳಿಸ್ತೀನಿ... ಅದೇನೋ ಓಲ್ಡ್ ಏಜ್ ಪೆನ್‌ಷನ್ ಬರುತ್ತಂತೆ... ಇನ್ನು ಹೆಚ್ಚು ದಿನ ಬದುಕೊದಿಲ್ಲ. ಒಂದು ಸಲ ನೋಡಿಕೊಂಡು ಬರಲಿ ಅಂತ... ಇರ್ಲಿ ಆಮೇಲೆ ಫೋನ್ ಮಾಡ್ತೀನಿ.

– ಚನ್ನಪಟ್ಟಣ ಏನು ಹತ್ರ ಇದೆಯಾ? ಜೀವ ಹೋಗುತ್ತೆ ಅಂದ್ರೂ ರಜ ಹಾಕಲ್ಲ ನಿಮ್ಮ ಮಗಳು. ಅಲ್ದೇ ಹೋಗಿ ಬರೋದು ಅಂದ್ರೆ ಎರಡು ದಿನವಾದ್ರೂ ಬೇಕು. ಇಲ್ಲಿ ಮನೆ ಕಡೆ ಯಾರಿದ್ದಾರೆ? ಇನ್ನು ಚನ್ನಪಟ್ಟಣದಿಂದ ನಿಮ್ಮೂರು ಒಂದೇ ತಾಸು. ಅಲ್ಲೆರಡು ದಿನ... ಕಷ್ಟಕಷ್ಟ...

* ನಾಳೆ ದಿನ ಹೇಳಲಿಲ್ಲ ಅಂತ ಆಗಬಾರ್ದಲ್ಲ. ಹೇಳಿದ್ದೀನಿ, ಅವಳಿಗೂ ಕಿವಿಮೇಲಿ ಹಾಕ್ತೀನಿ. ಆಮೇಲೆ ನಿಮ್ಮಿಷ್ಟ.

– ನನ್ನ ಇಷ್ಟಕಷ್ಟ ಯಾರಿಗೆ ಬಿಟ್ಟಿದೆ. ಸರಿ ಸಿಗ್ತೀನಿ...

* ನೀವೂ ಬಂದುಬಿಡಿ ಎರಡು ದಿವ್ಸ ಇದ್ದು ಹೋಗೀರಂತೆ.

– ನಾ ಎಲ್ಲೂ ಹೋಗಲ್ಲ. ನಂಗೆ ಅಲ್ಲಿ ಇಲ್ಲಿ ತಿರುಗೋ ಹುಚ್ಚಿಲ್ಲ. ಮನೆಯಾಯ್ತು...

* ಟಿ.ವಿ. ಆಯ್ತು?!

– ಅದು ಹಳೇ ಪಿಚ್ಚರ್ ಇದ್ರೆ ಇಲ್ಲ ಅಂದ್ರೆ ಇಲ್ಲ!

* ಸರಿ... ಸಿಗ್ತೀನಮ್ಮಾ... ಅವಳಿಗೆ ಹೇಳಿ... ಇಡ್ತೀನಿ...

– ಒಳ್ಳೇದು...

* * *

* ಅಮ್ಮಾ ನಾನು...

– ಹೇಳು... ಹೇಳಿದ್ರಾ ನಿಮ್ಮತ್ತೆ?

* ಅಮ್ಮಾ... ರಜಾ ಇಲ್ಲ ಕಣಮ್ಮಾ... ನೀನೇ ಒಂದು ಸಲ ಮಲ್ಲಮ್ಮನ್ನ ನೋಡಿಕೊಂಡು ಬಾ ಬೇಕಾದ್ರೆ... ಹತ್ರತ್ರ ಒಂದು ಸಾವಿರದ ತನಕ ದುಡ್ಡು ಬೇಕಾದ್ರೆ ಕೊಟ್ಟುಬಿಡು. ಆಮೇಲೆ ನಾನು ನಿಂಗೆ ಕೊಡ್ತೀನಿ.

– ರುಕ್ಕು.. ಈಗ ಅವಳು ದುಡ್ಡು ತಗೊಂಡು ಏನು ಮಾಡ್ತಾಳೆ. ಪೂರ್ತಿ ನೆಲಕಚ್ಚಿದ್ದಾಳೆ. ನೀನು, ನಿಮ್ಮಕ್ಕ, ನಿನ್ನ ತಂಗಿ... ಎಲ್ಲರ ಕಕ್ಕಸ್ಸು–ಉಚ್ಚೆ ತೆಗೆದು ತೆಗೆದು ಸವಕೊಂಡಳು ಮಾರಾಯ್ತಿ. ನಿಂಗೂ ಬಾಣಂತನ ಮಾಡಿದಾಳೆ. ಭಾಳ ನೆನಸ್ತಾಳೆ. ಒಮ್ಮೆ ಹೋಗಿ ಬಾ...

* ಅಮ್ಮಾ... ಯಾಕಮ್ಮ ಹಂಗಂತೀಯಾ? ನಾನೂ ಬೇಕಾದಷ್ಟು ಮಾಡಿದೀನಿ ಅವಳಿಗೆ... ನಿಜವಾಗ್ಲೂ ನಂಗೆ ರಜ ಇಲ್ಲ.. ಮದುವೆ–ಮುಂಜಿನೂ ತಪ್ಪಿಸಿಕೊಂಡಿದೀನೀ... ಮೊನ್ನೆ ನನ್ನ ಮೈದುನನ ಮದುವೆಗೆ ಒಂದೇ ದಿನ ರಜ ಹಾಕಿದ್ದು. ಈಗ ಮಲ್ಲಮ್ಮನ ನೋಡೋದು ಅಂದ್ರೆ, ಅದೂ ಬಸ್ಸಿದೆಯೋ ಇಲ್ಲವೋ... ಹಳ್ಳಿ ಬೇರೆ... ಅರ್ಧತಾಸು ನಡಿಬೇಕು. ನಮ್ಮನೆಯವರು ಬಿಲ್‌ಕುಲ್ ಒಪ್ಪಲ್ಲ. ನಂದೂಗೆ ಹೇಳು, ಚಂದ್ರುಂಗೆ ಹೇಳ್ದಾ?

– ಏ... ಅವರಿಗೂ ಹೇಳ್ದೆ... ಚಂದ್ರು ಗಂಡ ದೊಡ್ಡ ಡಾಕ್ಟ್ರು... ಏನಾರಾ ಸ್ವಲ್ಪ ಸುಧಾರಿಸಿಕೊಳ್ಳೊ ಹಂಗೆ ಔಷಧಿನಾದ್ರೂ ಕೊಡ್ಸೆ ಅಂತ ಹೇಳ್ದೆ... ಯಾರೂ ನನ್ನ ಮಾತ್ನ ಕೇಳಲ್ಲ... ಅದೆಲ್ಲ ಆಗಲ್ಲ ಕಣಮ್ಮಾ. ಬೇಕಾದ್ರೆ ಒಂದಿಷ್ಟು ದುಡ್ಡು ಕಳಿಸ್ತೀನಿ ಅಂದ್ಲು.

* ನಂದೂ? ಡ್ರೈವರ್ ಬೇರೆ ಇದಾನೆ. ಒಂದು ದಿನ ಕಾರಲ್ಲೇ ಬೇಕಾದ್ರೆ ಹೋಗಿ ಬರಬಹುದು... ಏನಂದ್ಲು?

– ತುಂಬಾ ಸೆಂಟಿಮೆಂಟಲ್ ಆಗಬೇಡ ಅಂದ್ಲು... 'ಮಲ್ಲಮ್ಮಂಗೆ ರುಕ್ಕು, ಚಂದ್ರು ಅಂದ್ರೆ ಪ್ರಾಣ. ಅವರಿಗೇ ಹೇಳು... ನಂಗೆ ತುಂಬಾ ಹೊಡಿತಾ ಇದ್ಲು, ನಂಗೇನೂ ಅವಳನ್ನ ನೋಡಬೇಕು ಅಂತ ಅನ್ನಿಸ್ತಾ ಇಲ್ಲ' ಅಂತ ಏನೇನೋ ಅಂದ್ಲು... ದರಿದ್ರ... ಹ್ಯಾಗೆ ಅಂತಾಳೆ ನೋಡು...

* ಪಾಪ... ಇವಳು ಹಾಲು ಕುಡಿತಾ ಇರಲಿಲ್ಲ... ಊಟ ಮಾಡ್ತಾ ಇರಲಿಲ್ಲ. ಯಾವಾಗಲೂ ತಲೆ ಮೇಲೆ ಮಣ್ಣು ಸುರಕೊಳ್ಳೋಳು... ಅದಕ್ಕೆ ಅವಳು ಏಟು ಕೊಡ್ತಾ ಇದ್ದದ್ದು... ಚಿಕ್ಕಮಗು ಇದ್ದಾಗ... ರಚ್ಚೆ ಹಿಡಿಯೋಳು, ಯಾವಾಗಲೂ ಎತ್ಕೊಬೇಕು... ಅಷ್ಟೇ ಅಲ್ಲ ಏನಾರ ಆಟದ ಸಾಮಾನು ಕೊಡಲಿಲ್ಲ ಅಂದ್ರೆ ಕಚ್ಚಿ ಬಿಡೋಳು... ನಾಯಿ! ಚಂದ್ರುಗೂ

ಮುಖಮೂತಿ ನೋಡ್ದೆ ಕಚ್ಚೋಳು. ನಾವೇ ಮಲ್ಲಮ್ಮನ ಹತ್ರ ಚಾಡಿ ಹೇಳ್ತಿದ್ವು... ವೆರಿ ಬ್ಯಾಡ್... ನಂದೂ ಹೀಗೆ ಹೇಳಬಾರದಿತ್ತು...

– ಏನೋ ಎರಡು ಏಟು ಹಾಕಿರಬಹುದು. ಅದನ್ನ ಈ ಸಮಯದಲ್ಲಿ ಎತ್ತಿ ಆಡೋದಾ? ಸುಮ್ನೆ ನಾಕು ಕತ್ತೆ ವಯಸ್ಸಾಗಿದೆ... ಒಳ್ಳೆ ಮಕ್ಕಳ ಥರಾ ಮಾತಾಡ್ತಾಳೆ.

* ನಂಗೆ ಉಪ್ಪಿಟ್ಟು ಅಂದ್ರೆ ಆಗ್ತಾ ಇರಲಿಲ್ಲ. ಪಾಪ ಮಲ್ಲಮ್ಮ ಗೋಧಿ ದೋಸೆ ಹುಯ್ದುಕೊಡೋಳು. ಎರಡೂ ಕಡೆ ತುಪ್ಪ, ಸಕ್ರೆ ಸವರಿ ಬಾಕ್ಸಿಗೂ ಹಾಕಿ ಕೊಡೋಳು.

– ಅವಳು ಇದ್ದಿದ್ದಕ್ಕೆ ನೀವು ಬದುಕಿಕೊಂಡ್ರಿ. ಮೈತುಂಬಾ ಸಾಲ, ಮನೆತುಂಬ ಜನ... ನಾನು ಕೆಲ್ಸ ಬಿಡೋ ಹಂಗೂ ಇರಲಿಲ್ಲ. ದೇವರ ಥರ ಬಂದ್ಲು... ಕಡೆಗಾಲಕ್ಕೆ ಅವಳಿಗೆ ನಾವಾಗ್ದೆ ಇನ್ಯಾರು ಆಗಬೇಕು ಹೇಳು? ಮೂರೂ ಹೆಣ್ಣು ಅಂತ ನನ್ನತ್ತೆ, ಮಾವ, ಗಂಡ ನಿಮ್ಮನ್ನು ಕಣ್ಣೆತ್ತಿ ಕೂಡಾ ನೋಡ್ತಾ ಇರಲಿಲ್ಲ. ಆ ಮಲ್ಲಮ್ಮ ಆವೊತ್ತು ಧೈರ್ಯ ಕೊಡದೆ ಇದ್ರೆ ನಾನು–ನೀವು ಈ ಜಗತ್ತಿನಲ್ಲೇ ಈ ಹೊತ್ತು ಇರ್ತಾ ಇರಲಿಲ್ಲ. ಅವಳಿಗೆ ಇಬ್ರು ಗಂಡು ಮಕ್ಕಳು! ಹೆಣ್ಣು ಅಂದರೆ ಆಸೆ ಪಡೋಳು. 'ಹೆಣ್ಣು ಮಕ್ಕಳು ಕೊನೆಗಾಲಕ್ಕೆ ಅಯ್ಯೋ ಅಂತಾವೇ... ಒಂಚೂರು ಚುರ್ ಅನಿಸಿ ಹತ್ರ ಬರ್ತಾವೆ. ಗಂಡುಮಕ್ಕಳು ಗಂಡು ಬೆಕ್ಕುಗಳ ಥರ ಒಂಟೋಗ್ತಾ ಇರ್ತಾವೇ...' ಅಂತ ಹೇಳ್ತಿದ್ಲು.

* ಅಮ್ಮಾ... ನಮಗೆಲ್ಲ ಎಣ್ಣೆ ಇಟ್ಟು ತಲೆಬಾಚಿ ಐದು ಕಾಲಿನ ಜಡೆ ಹಾಕಿ ಹೂವು ಮುಡಿಸ್ತಾ ಇದ್ಲು. ನಾವು ಮೂವರು ಸೇರಿ ಮೂರು ಮೂರು ಬಾಚಣಿಗೆ ಹಿಡಿದು ಅವಳಿಗೆ ಜಡೆ ಹಾಕ್ತೀವಿ ಅಂತ ಹೇಳಿ ಅವಳ ಕೂದಲೆಲ್ಲ ಕಿತ್ತು ಹಾಕ್ತ ಇದ್ವಿ... ಹಹ... ಹಹ... ನಂದೂಗೆ ನೀನು ಏಟು ಕೊಟ್ಟಾಗ ಪಾಪ ಅಡ್ಡ ಬಂದು ಬಿಡಿಸಿಕೊಳ್ತಾ ಇದ್ಲು. ದಯ್ಯ ಮೈಮ್ಯಾಗೆ ಬಂದೈತಾ... ಅಂತ ಗದರೊಳು...

– 'ನನ್ನ ಕೈಯಿನ ತುತ್ತು ತಿಂದವೆ, ದೊಡ್ಡ ಕೆಲ್ಸ ಹಿಡಿದು, ದೊಡ್ಡ ಮನೆ ಸೇರಿ... ಸುಖವಾಗಿದ್ರೆ ಸಾಕು' ಅಂತ ಹತ್ತು ಸಲ ಹೇಳೋಳು... ನೀವುಗಳು ರ್‍ಯಾಂಕು ಬಂದಾಗ, ನಿಮ್ಗೆ ಕೆಲ್ಸ ಸಿಕ್ಕಾಗ, ನಿಮಗೆ ಮದುವೆ ಆಗಿ ಮೂವರಿಗೂ ಗಂಡು ಮಕ್ಕಳು ಆದಾಗ ಸಂಭ್ರಮ ಪಟ್ಟೋಳೇ ಅವಳು... ನಿಜ ಹೇಳ್ಲಾ... ಯಾವ ಹೊತ್ತಿಗೂ ಅವಳ ಪಾದ ನನ್ನ ನೆತ್ತಿ ಮೇಲೆ!...

* ಅಮ್ಮಾ...

– ಅಮ್ಮ! ನಾನಲ್ಲ ಕಣೇ, ಅವಳು ಅಮ್ಮ. ನಿಮ್ಗೆ ಒಂಚೂರಾದ್ರೂ ಗ್ಯಾನ ಇದ್ರೆ ಅವಳನ್ನು ಹೋಗಿ ನೋಡ್ರೆ... ನಂಗೆ ಹುಶಾರಿಲ್ಲದಿದ್ರೆ ನೀವು ಬರದಿದ್ರೂ ತಡಕೊತೀನಿ... ನಾ ಸತ್ತಾಗ ನೀವು ಬರದಿದ್ರೂ ಪರವಾಗಿಲ್ಲ. ಅವಳ ವಿಷಯದಲ್ಲಿ ಮಾತ್ರ...

* ಯಾಕಮ್ಮಾ ಹೀಗೆ ಮಾತಾಡ್ತಿದೀಯಾ... ನಾನೇ ಇವತ್ತೇ ನಂದುಗೆ, ಚಂದ್ರುಗೆ ಫೋನ್ ಮಾಡ್ತೀನಿ. ಸಾಧ್ಯ ಆದ್ರೆ ನಾವೆಲ್ಲ ಸೇರಿ ಹೋಗಿ ಬರ್ತೀವಿ.

– ತಡಮಾಡಬೇಡ್ರೆ... ಜೀವ ಹಾರಿ ಹೋಗೋದ್ರೊಳ್ಗೆ ಬೇಗ ನೋಡ್ಕಂಡು ಬನ್ನಿ...
ಈಗ್ಲೇ ನಂದೂಗೆ, ಚಂದ್ರುಂಗೆ ಫೋನ್ ಮಾಡು... ಈಗ್ಲೇ... ಈಗ್ಲೇ...

* ಆಯ್ತು ಕಣಮ್ಮಾ, ಮಾಡ್ತೀನಿ... ಎಕ್ಸೈಟ್ ಆಗ್ಬೇಡ...

– ಖಂಡಿತಾ?!

* ಅಮ್ಮಾ. ನಾನು ನಿನ್ನ ಮಗಳು ಕಣಮ್ಮ...

●

# ಮಕ್ಕಳಿಹರವ್ವ ಮನೆ ತುಂಬ...

* ಹಲೋ... ಹಲೋ... ಅಂಕಲ್...

– ಗುಡ್ ಮಾರ್ನಿಂಗ್. ಎಸ್.ಬಿ. ಕನ್ಸ್‌ಟ್ರಕ್ಷನ್ಸ್... ಸಂಜಯ್ ಸ್ಪೀಕಿಂಗ್.

* ಅಂಕಲ್ ನಿಮ್ಮಮ್ಮ ಸತ್ತೋಗಿದಾರಂತೆ... ಬೇಗ ಬರಬೇಕಂತೆ...

– ವಾಟ್?!

* ರಾಮದಾಸ್ ಅಂಕಲ್ ನಿಮ್ಮಮ್ಮ ಸತ್ತೋಗಿದಾರಂತೆ...

– ರಾಂಗ್ ನಂಬರ್!

* * *

* ಹಲೋ... ಹಲೋ...

– ಗುಡ್‌ಮಾರ್ನಿಂಗ್... ಎಸ್.ಬಿ. ಕನ್ಸ್‌ಟ್ರಕ್ಷನ್ಸ್... ಸಂಜಯ್ ಸ್ಪೀಕಿಂಗ್...

* ರಾಮದಾಸ್ ಅಂಕಲ್... ಅಜ್ಜಿ ಹೇಳಿದ್ರು... ನಿಮ್ಮ ಪಕ್ಕದ ಮನೆ... ಅಜ್ಜಿ... ಹೇಳಿದ್ರು.

– ಇದು ಆಫೀಸು... ಯಾರು ಬೇಕು?.

* ರಾಮದಾಸ್ ಅಂಕಲ್...

– ಯಾವ ರಾಮದಾಸ್?

* ನಮ್ಮಜ್ಜಿ ಇಲ್ಲೇ ಇದಾರೆ ಮಾತಾಡ್ತಾರೆ... ತಗೊಳಿ...

– ಹ... ಲೂ... ಹ... ಲೂ...

* ಹಲೋ... ಹೇಳಿ...

– ಕೇಳಿಸ್ತಾ ಇದೆಯೇನಪ್ಪಾ?

* ಹೇಳಜ್ಜೀ ಬೇಗ... ಕೇಳಿಸುತ್ತೆ ಹೇಳಿ...

– ನಿಮ್ಮ ಆಫೀಸಿನಾಗ ರಾಮಣ್ಣ ಅವನಲ್ಲ... ಅವನವ್ವ ತೀರಿಕೊಂಡವರೆ... ಒಸಿ ಬಿರ್ರನೆ ಬಾ ಅಂತ ಹೇಳು ನನ್ನಪ್ಪ...

* ರಾಮಣ್ಣ? ಯಾವ ಡಿಪಾರ್ಟ್‌ಮೆಂಟು? ಸೆಕ್ಷನ್ ಏನಾದ್ರು ಗೊತ್ತಾ?

– ಅದೇ ಕಣಪ್ಪ... ಶೃಂಗೇರಿ ರಾಮಣ್ಣ... ಜೋಯಿಸರು... ಆರು ಜನ ಅಕ್ಕ ತಂಗೀ, ಒಬ್ಬನೇ ಮಗ... ಬಿರ್ರನೆ ಬಾ ಅಂತ ಹೇಳಪ್ಪ...

* ರಾಮಣ್ಣ ಅಂತ ಯಾರಿಲ್ಲ... ಶೃಂಗೇರಿ ರಾಮದಾಸ್... ಅವರೇ ರಾಮದಾಸೋ... ಗೊತ್ತಿಲ್ಲ... ಇಬ್ಬರಿದಾರೆ... ವೆರಿಫೈ ಮಾಡ್ತೀನಿ... ಅವರೇ... ಆಗಿದ್ರೆ ಕಳಿಸ್ತೀನಿ...

– ಅಷ್ಟು ಮಾಡಿ ನನ್ನಪ್ಪ...

* ಏನು ಅವರ ತಾಯಿ ಹೆಸರು? ನಿಮ್ಮ ಹೆಸರು?

– ಪಾಪಮ್ಮ... ಅಂತ ಕಣಪ್ಪ... ನನ್ನ ಹೆಸರು ಶಿವಮ್ಮ... ಮಲ್ಲಾಪುರದ ಶಿವಮ್ಮ ಅದೇ ದೊಡ್ಡ ಮಲ್ಲಾಪುರ...

– ಸರಿ ಟ್ರೈ ಮಾಡ್ತೀನೀ... ಓ.ಕೆ., ಥ್ಯಾಂಕ್ಸ್...

* * *

* ಹಲೋ... ಸಂಧ್ಯಾ...

– ಸ್ಪೀಕಿಂಗ್...

* ನಾನು ಸತ್ಯ...

– ಏನಕ್ಕ ವಾಯ್ಸ್ ಗೊರಗೊರ ಅಂತಿದೆ... ಗೊತ್ತೇ ಆಗಲಿಲ್ಲ... ಹುಶಾರಿಲ್ಲವಾ? ಏನು ಸಮಾಚಾರ?

* ಅಮ್ಮ ತೀರಿಕೊಂಡ್ಲು ಕಣೆ... ಬೇಗ... ಬಾ... ಎಲ್ಲರಿಗೂ ತಿಳಿಸು...

– ಯಾವಾಗ?

* ಬೆಳಿಗ್ಗೆ ಇರಬಹುದು...

– ಇರಬಹುದು?!

* ಸರಿಯಾಗಿ ಡಿಟೈಲ್ಸ್ ಗೊತ್ತಾಗಿಲ್ಲ... ಶಿವಮ್ಮ ಫೋನ್ ಮಾಡಿದ್ರು... ರಾಮು ಊರಲ್ಲಿ ಇಲ್ಲ... ಅತ್ತಿಗೆ ಮದುವೆಗೆ ಹೋಗಿದ್ರಂತೆ... ಮಕ್ಕಳು... ಕಾಲೇಜಿಗೆ ಹೋಗಿದ್ರಂತೆ...

– ಆ ಹುಡುಗಿ? ಸಿಂಗಿ?

* ಅದು ಇವತ್ತು ಚಕ್ಕರ್ ಅಂತೆ...

– ಶಿವಮ್ಮ ಅವ್ರ ಮೊಮ್ಮಗ ಫೋನ್ ಮಾಡಿದ್ದ... ಆಮೇಲೆ ನಾನೇ ಶಿವಮ್ಮಂಗೆ ಕಾಂಟ್ಯಾಕ್ಟ್ ಮಾಡ್ದೆ...

* ಶಿವಮ್ಮಂಗೆ ನಿನ್ನ ನಂಬರ್ ಹ್ಯಾಗೆ ಸಿಗ್ತು?

– ಅಯ್ಯೋ... ಅದೆಲ್ಲ ಕೇಳೋ–ಹೇಳೋ ಸಮಯಾನಾ? ಪಕ್ಕದ ಅಂಗಡಿಯವರು ಕೊಟ್ಟಿರಬೇಕು. ಅಮ್ಮಂಗೂ, ಶಿವಮ್ಮಂಗೂ ಗಳಸ್ಯ–ಕಂಠಸ್ಯ... ಪಾಪ ಮುದುಕಿ ಬುದ್ಧಿ ಉಪಯೋಗಿಸಿ ಮೊಮ್ಮಗನಿಂದ ಫೋನ್ ಮಾಡಿಸಿದೆ. ಇನ್ನೇನು ಅತ್ತಿಗೆಯ ಫೋನ್ ಬರಬಹುದು... ನಾನು ಈಗ್ಲೆ ಹೊರಡ್ತಾ ಇದೀನಿ. ನಿಮ್ಮ ಭಾವ ಸಂಜೆ ಬರ್ತಾರೆ... ನೀನು ಹೊರಡ್ತೀಯಾ?

* ಸಾಹೇಬರು ಮೀಟಿಂಗ್‌ನಲ್ಲಿದಾರೆ. ರೆಡ್‌ಲೈಟ್ ಆನ್ ಆಗಿದೆ... ಕೇಸ್ ಫೈಲ್ಸ್ ಎಲ್ಲ ನನ್ನ ಹತ್ರಾನೇ ಇವೆ. ಕೋರ್ಟ್ ಕೇಸು...

– ಇದು ಡೆತ್ ಕೇಸು. ಅದೂ ನಿಮ್ಮಮ್ಮಂದು... ಇಡ್ತೀನೀ...

* ರಾಂಗ್ ಆಗಬೇಡವೇ... ಸ್ವಲ್ಪ ಹೆಚ್ಚು ಕಮ್ಮಿ ಬರ್ತೀನೀ... ಸ್ವಲ್ಪ ಲೇಟಾಗಬಹುದು... ವಿಲೇವಾರಿ ನಾಳೆ ಅನ್ಸುತ್ತೆ ಅಲ್ವಾ? ಎಲ್ಲಾರೂ ಹೊರಟು ಬರಬೇಕಲ್ಲ?!

– ಎಷ್ಟು ಇನ್‌ಹ್ಯೂಮನ್ ಆಗಿ ಮಾತಾಡ್ತೀಯಾ? ಅದೂ ಅಮ್ಮನ ಬಗ್ಗೆ?

* ಅಕ್ಕಾ... ಅಮ್ಮ ಬೆಡ್‌ರಿಡನ್ ಆಗಿ ಆರೇಳು ವರ್ಷ ಆಯ್ತು. ಮಾತಿಲ್ಲ–ಕತೆಯಿಲ್ಲ. ಸದ್ಯ ಮುಕ್ತಿ ಸಿಗ್ತು. ನನ್ನ ಪಾಲಿಗೆ ಅಮ್ಮ ಸತ್ತು ಅದಾಗಲೇ ಆರೇಳು ವರ್ಷ ಆಯ್ತು. ಅತ್ತಿಗೇದು ಕೊಂಕು ಮಾತು, ಪಿರಿಪಿರಿ ಕೇಳಿ ಸಾಕಾಗಿತ್ತು. ಸದ್ಯ... ಸಮಾಧಾನ ಆಯ್ತು... ಏನೋ ರಿಲೀಫ್...

– ನ್ಯಾಚುರಲ್ ಅಲ್ಲವಾ? ಆರೇಳು ವರುಷ... ನೋಡಿಕೊಂಡಿದಾರಲ್ಲ... ಸೇವೆ ಮಾಡಿದಾರಲ್ಲ... ನಾವು ಅವರಿಗೆ ಗ್ರೇಟ್‌ಫುಲ್ ಆಗಿರಬೇಕು.

* ಸೇವೆ? ಸೇವೆ ಮಾಡಿದ್ದು ಆ ಹುಡುಗಿ... ನಿಂಗಿ. ನಾನು ಹೋದಾಗೆಲ್ಲಾ ಆ ಹುಡುಗಿಗೆ ಲಾಂಗ್ ಬ್ಲೌಸ್, ದುಡ್ಡು, ಗಾಜಿನ ಬಳೆ, ಸರ–ನಿಂಗೆ ಅರ್ಥ ಆಗಲ್ಲ... ಮನೇಲಿ ಒಬ್ಬರು ಕಾಯಿಲೆ ಬಿದ್ರು ಅಂದ್ರೆ ಆಸ್ಪತ್ರೇನೆ ಮನೇಲೀ ಇದ್ದಂಗೆ... ಅ ನರಳಾಟ... ಉರುಳಾಟ... ಹೋಗೋರು... ಬರೋರು... ಅವರು ಕೊಡೋ ಪುಕ್ಕಟೆ ಸಲಹೆಗಳು... ಉಪದೇಶ... ಆದೇಶ... ಅತ್ತಿಗೆಗೆ ದೊಡ್ಡ ಸವಾಲ್!

* ಕೈಲಾಗದಿದ್ರೆ... ಆಸ್ಪತ್ರೆಗೆ ಸೇರಿಸಬೇಕು. ನರ್ಸ್ ನೋಡಿಕೋತಾರೆ... ದುಡ್ಡು–ಕಾಸು ಕಮ್ಮಿ ಆಗಿದೆಯಾ? ನಮಗೆಲ್ಲ ಕಿರಿಕಿರಿ ಮಾಡ್ಡೋದು... ಯಾಕೆ? ನಾನು ನಮ್ಮತ್ತೆನ ಆರು ತಿಂಗಳು ಆಸ್ಪತ್ರೆನಲ್ಲೇ ಬಿಟ್ಟಿದ್ದೆ... ಏನು ಕಮ್ಮಿಯಾಗಿತ್ತು? ಸುಖವಾಗಿದ್ದರು!

– ಸರಿ... ಬರ್ಲಾ?

* ಎಷ್ಟು ಹೊತ್ತಿಗೆ ತೀರಿಕೊಂಡರಂತೆ?

– ಮತ್ತೆ ಮತ್ತೆ ಅದೇ ಕೇಳ್ತೀಯಲ್ಲ? ಡಿಟೈಲ್ಸ್ ಗೊತ್ತಿಲ್ಲ. ಮನೇಲಿ ಯಾರು ಇರಲಿಲ್ಲವಂತೆ... ಯಾವಾಗ ಜೀವ ಹೋಯ್ತೋ ಗೊತ್ತಿಲ್ಲ. ಗಂಗಾಜಲ ಬೇರೆ ಕಾಶಿಯಿಂದ

ತಂದು ಇಟ್ಟಿದ್ರು... ಹೋಗ್ಲಿ ಅಂದ್ರೆ... ನೀರು ಕೂಡ ಬಿಡಲಿಲ್ಲ. ತುಂಬಾ ಬೇಜಾರಾಗ್ತ ಇದೆ... ಯಾರುನೂ ಇರಲಿಲ್ಲವಂತೆ... ಪಾಪ... ಸಾಯೋ ಹೊತ್ತಿಗೆ ಅಮ್ಮ ಎಷ್ಟು ನೊಂದುಕೊಂಡಳೋ ಏನೋ... ಹೆಸರಿಗೆ ಏಳು ಜನ? ಊಂ... ಊಂ...

* ಅಳಬೇಡವೇ... ಅಕ್ಕ... ವೆರಿ ಬ್ಯಾಡ್...

– ನಿಮ್ಮ ಕಡೆಯವರಿಗೆ ವಿಷಯ ತಿಳಿಸಿಬಿಡು. ಆದ್ರೆ... ಮನೇಲಿ ಯಾರು ಇರಲಿಲ್ಲ ಅಂತ ಯಾರಿಗೂ ಹೇಳಬೇಡ... ಬೆಳಿಗ್ಗೆ ಬೆಳಿಗ್ಗೆ ಅಂತ ಹೇಳು...

* ಸಾಧ್ಯ ಆದ್ರೆ ನಿಮ್ಮುಗೆ, ಸುಮುಗೆ... ದೇವಿಗೆ... ದೀಪಂಗೆ... ತಿಳಿಸು. ನಾನು ಕಾಂಟ್ಯಾಕ್ಟ್ ಮಾಡ್ತೀನೀ... ಸೀ... ಯೂ...

* * *

* ಹಲೋ... ನಿಮ್ಮು... ನಾನು ಸಂಧ್ಯಾ...

– ಗೊತ್ತಾಯ್ತು... ರಾಮು ಫೋನ್ ಮಾಡಿದ್ದ. ಮನೇಲೀ ಯಾರು ಇರಲಿಲ್ಲವಂತೆ... ಎಷ್ಟು ಹೊತ್ತಿಗೆ ಹೋದ್ಲು ಅಂತಾನೇ ಗೊತ್ತಾಗಲಿಲ್ಲ ಅಂದ. ಹೆಸರಿಗೆ ಏಳು ಜನ! ಕೊನೆ ಉಸಿರು ಎಳಿವಾಗ ಒಂದು ಪಿಳ್ಳೆನೂ ಇರಲಿಲ್ಲವಲ್ಲೇ? ನೀರು ಬಿಡೊಕೆ ಅಂತ ಆ ಕಾಲದಲ್ಲಿ ನೂರು ಹರಕೆ ಹೊತ್ತು ಮಗನನ್ನ ಹೊತ್ತಿದ್ಲೂ ಆಯ್ತು... ಈವಾಗ?

* ನಾಲಗೆ ಉದ್ದ ಬಿಡಬೇಡ...

– ಮತ್ತಿನ್ನೇನು? ನನ್ನದೂ ಅಮ್ಮಂದೂ ಒಟ್ಟಿಗೇ ಬಾಣಂತನ ಆಗಿದ್ದು ನೆನಪಿದೆಯಾ?

* ಯಾಕಿಲ್ಲ? ನಾನೇ ಬಂದು ಒಂದು ತಿಂಗಳು ಇದ್ದು ಕುಲದೀಪಕನಿಗೆ ಎಣ್ಣೆ–ನೀರು ಹಾಕಿದ್ದೆ... ಈಗ ಯಾಕೆ ಆ ಮಾತು? ಯಾವಾಗ ಹೊರಡ್ತಿಯಾ...

– ನಂಗೆ ಸಂಜೆಗೇ ಬಸ್ಸು ಇರೋದು, ನಾಳೆನಾದ್ರೂ ಅಮ್ಮ ಸತ್ತಿದ್ರೆ ಚೆನ್ನಾಗಿರ್ತಿತ್ತು. ಎರಡು ದಿನ ಕಂಟಿನ್ಯೂಸ್ ರಜೆ ಇದೆ. ಸುಧೀಗೆ ಟೆಸ್ಟ್ ಬೇರೆ ಇದೆ, ಬಂದು ನೋಡಿಕೊಂಡು ಹೋಗಿಬಿಡ್ತಿನೀ...

* ಸರಿನಮ್ಮಾ...

– ಹಾಂ... ಮರ್ತಿದ್ದೆ. ಒಂದು ವಿಷಯ... ನೀನ್ನಲ್ಲೇ ಇರ್ರಿ... ಅತ್ತಿಗೆ ಮೇಲೆ ಒಂದು ಕಣ್ಣಿಡು. ಅಮ್ಮಂದು ಪೆಟ್ಟಿಗೆ–ಪೆಟ್ಟಿಗೆ ಜರಿದು... ರೇಶ್ಮೆ ಸೀರೆ ಇದಾವೆ. ಪ್ಯೂರ್ ಗೋಲ್ಡ್ ಜರಿಸೀರೆಗಳು, ಹಳೇ ಕಾಲದವು, ದುಡ್ಡು–ಕಾಸು ಒಡವೆ... ದೀಪ ಬೇರೆ ಅಮೆರಿಕಾದಿಂದ ಪ್ರತಿತಿಂಗಳು ಕಳಿಸ್ತಾ ಇದ್ದಳು... ಬದುಕಿರಬೇಕಾದ್ರೇನೆ ಕೈಯೆತ್ತಿ ಒಂದು ಅವಲಕ್ಕಿ ಸರನಾದ್ರೂ ನನ್ನ ಮಗಳಿಗೆ ಕೊಡಬಹುದಿತ್ತು. ನಾನು ಬಾಯಿಬಿಟ್ಟು ಕೇಳ್ದೆ ಕೂಡ... ನಿಂಗೇನು

ಕಮ್ಮಿಯಾಗಿದೆ? ನಿನ್ನ ಮಗಳು ದೊಡ್ಡೋಳಾದಾಗ ಕೊಡ್ತಿನೀ ಅಂದ್ರು... ಆಸೆ ಅಂದ್ರೆ ಆಸೆ... ರಾಮಣ್ಣ... ರಾಮಣ್ಣ... ಅವನು ಬಿಟ್ರೆ... ಇಲ್ಲ... ಜಗತ್ತೇ... ಇಲ್ಲ!?

* ಅಮ್ಮಂಗೆ ಆಸೆ ಅಂತೀಯಾ... ನಿಂಗೂ ಅಮ್ಮಂದೇ ಬುದ್ಧಿ?! ರಾಮನೇ ಅಮ್ಮನ್ನ ನೋಡಿಕೊಂಡಿದ್ದಲ್ವಾ? ಅಷ್ಟಕ್ಕೂ ನಿಂಗೇನು ಕಮ್ಮಿಯಾಗಿದೆ?

– ಕಮ್ಮಿಯಾಗಿರೊ ಪ್ರಶ್ನೆ ಅಲ್ಲ. ನಾವು ಮಕ್ಕಳಲ್ಲವಾ? ನಮಗೆ ಹಕ್ಕಿಲ್ಲವಾ? ನೀವೆಲ್ಲ ಮುಂಚೆನೇ ಮದುವೆಯಾಗಿ ಹೋದ್ರಿ... ದೀಪ ಅಮೆರಿಕಾಗೆ ಹಾರಿದ್ಲು... ನಾನು... ನಾನೊಬ್ಬಳೇ ಆ ಮನೆಗಾಗಿ ಎಷ್ಟು ದುಡಿದಿದೀನಿ ಗೊತ್ತಾ? ಅಷ್ಟಕ್ಕೂ ಮದುವೇಲಿ ನಂಗೆ ಕೊಟ್ಟಿದ್ದು ಅಷ್ಟಕಷ್ಟೇ. ನನ್ನ ಸರದಿ ಬರೋ ಹೊತ್ತಿಗೆ ಎಲ್ಲ ಬರಿಗೈ. ಹ್ಯಾಗೋ ದಾಟಿಸಿದರು ಅಷ್ಟೇ. ನಾನು ಮಾತ್ರ ಬಿಡೋಳಲ್ಲ...

* ಸರಿನಮ್ಮಾ... ಏನು ಬೇಕಾದ್ರೂ ಮಾಡ್ಕೋ. ನಾನು ನಿನ್ನ ಸುದ್ದಿಗಿಲ್ಲ. ನೀನಾಯ್ತು ನಿನ್ನ ತಮ್ಮ ಆಯ್ತು.

– ಅದ್ಯಾಕೆ ಸುದ್ದಿಗಿಲ್ಲ? ನಂಗೆ ಅನ್ಯಾಯ ಆಗಿದೆ ಹೌದೋ ಅಲ್ಲೋ... ಅದನ್ನಾರ ನೀ ಬಾಯಿಬಿಟ್ಟು ಮಾತುಕತೆ ಆದಾಗ ಹೇಳ್ಬೇಕು.

* ಸರಿನಮ್ಮಾ... ಇಡ್ತೀನಿ... ಎಲ್ಲರಿಗೂ ವಿಷ್ಯ ತಿಳಿಸಿಬಿಡು. ಬೆಳಿಗ್ಗೆ ಬೆಳಿಗ್ಗೆ ತೀರಿಕೊಂಡ್ರು ಅನ್ನು, ಮನೇಲಿ ಯಾರ್‍ಯಾರೂ ಇರಲಿಲ್ಲ ಅಂತ ಹೇಳಬೇಡ.

– ಅಯ್ಯೋ ಈಗಾಗ್ಲೆ ಎಲ್ಲಾ ಕಡೆ ಟಾಂಟಾಂ ಆಗಿದೆ. ಅದನ್ನೇನು ಮುಚ್ಚಿಡೋದು.

* ಹೇಳಿದ್ದಷ್ಟು ಕೇಳು... ನಮ್ಮನೇನ ನಾವೇ ಹರಾಜು ಹಾಕಬಾರದು.

– ಸರಿ... ಓ.ಕೆ. ಬೈ...

* * *

* ಹಲೋ... ದೇವಿ... ನಾನು ಕಣೇ ನಿಮ್ಮು... ಅಕ್ಕ ಫೋನ್ ಮಾಡಿದ್ಲಾ?

– ಹೂಂ... ಹೊರಟಿದೀಯಾ?

* ಇನ್ನೇನು ಹೊರಟೆ...

– ಅಮ್ಮ ಎಷ್ಟು ಹೊತ್ತಿಗೆ ಹೋದ್ರು ಅಂತ ಗೊತ್ತಾಗಲಿಲ್ಲ! ಇವತ್ತು ದಿನ ಬೇರೆ ಒಳ್ಳೆದಿಲ್ಲವಂತೆ. ನಿಮ್ಮಾವ ಬೇರೆ ಎಷ್ಟು ಹೊತ್ತಿಗೆ... ಎಷ್ಟು ಹೊತ್ತಿಗೆ ಅಂತ ಕೇಳ್ತಾನೇ ಇದಾರೆ, ಬೆಳಿಗ್ಗೆ ಹತ್ತು ಘಂಟೆ ತನಕ ಭಾಳ ಭಾಳ ಕೆಟ್ಟ ಕಾಲ ಅಂತೆ... ಪುರೋಹಿತರು ಕೇಳಿದ್ರೆ ಯಾವ ಟೈಮು ಅಂತ ಹೇಳೋದು?

* ಇನ್ನೇನು ಹೇಳೋದು? ಕೆಟ್ಟ ಕಾಲ, ಎಲ್ಲಿಂದ ಎಲ್ಲಿತನಕ ಅಂತ ಕೇಳಿಕೊಂಡು ಆ ಕಾಲ ಬಿಟ್ಟು ಒಳ್ಳೆ ಕಾಲಕ್ಕೆ ಅಮ್ಮನ ಸಾವಿನ ಟೈಮ್‌ಗೆ ಫಿಕ್ಸ್ ಮಾಡೋದು! ಇಲ್ಲ ಅಂದ್ರೆ ಆ ಶಾಂತಿ, ಈ ಹೋಮ–ಹವನ ಅಂತ ಪ್ರಾಣ ತೆಗಿತಾರೆ! ೬ ತಿಂಗಳು ಮನೆ

ಬಿಡಬೇಕು, ಮೂರು ತಿಂಗಳು ರೂಮಿಗೆ ಬೀಗ ಹಾಕಬೇಕು... ನಿಂಗೆ ಗೊತ್ತಿರಬಹುದಲ್ಲ... ನಿಮ್ಮನೇಲಿ ಇದಾರಲ್ಲ... ಶಾಸ್ತ್ರಿಗಳು?! ಅಲ್ಲವೇ, ಅಮ್ಮ ಎಂದಾದ್ರೂ ನಮಗೆ ಕೇಡು ಬಗೀತಾಳಾ? ಯಾಕೆ ಚಿಂತೆ ಮಾಡಬೇಕು?

– ಒಳ್ಳೆ ಫಜೀತಿಯಾಯ್ತು... ನೆಂಟರಿಷ್ಟರು ಇದಾರಲ್ವೇ... ಆಡಕೊತಾರೆ... ಅಷ್ಟೇ...

* ಅತ್ತಿಗೆ ಜಸ್ಟ್ ಫೋನ್ ಮಾಡಿದ್ರು, ಬೆಳಿಗ್ಗೆ ಆರು ಗಂಟೆಗೆ ಅತ್ತಿಗೆ ಬೆಡ್ ಪ್ಯಾನ್ ಕೊಟ್ರಂತೆ... ನಿಂಗಿ ಬರದೇ ಇರೋ ಹೊತ್ತಿಗೆ ಆರುವರೆಗೆ ಮುಖ ತೊಳಿಸಿ ಕಾಫಿ ಕೊಟ್ಟು ಏಳು ಗಂಟೆಗೆ ಪಕ್ಕದ ಮನೆ ಶಿವಮ್ಮಂಗೆ ಬೀಗದ ಕೈ ಕೊಟ್ಟು ಮದುವೆಗೆ ಹೊರಟಿದಿನೀ ಒಂಚೂರು ನಮ್ಮತ್ತೇನ ನೋಡಿಕೊಳ್ಳಿ... ತಿಂಡಿ ಮಾಡಿಟ್ಟಿದೀನಿ... ನಿಂಗಿ ಬಂದು ಸ್ನಾನ ಮಾಡಿಸಿ ತಿಂಡಿ ತಿನ್ನಿಸ್ತಾಳೆ ಅಂದರಂತೆ. ನಿಂಗೆ ಎಷ್ಟು ಹೊತ್ತಿಗೂ ಬರದೇ ಇರೋ ಹೊತ್ತಿಗ ಎಂಟು ಗಂಟೆಗೆ ಶಿವಮ್ಮ ಕೀ ತಕ್ಕೊಂಡು ಅಮ್ಮನ್ನ ರೂಮಿಗೆ ಹೋದರಂತೆ... ಕೂಗಿದ್ರೂ ಉತ್ತರ ಕೊಡದೇ ಇರೋ ಹೊತ್ತಿಗೆ ಮಲಗಿದಾರೆ ಪಾಪ... ಅಂತ ವಾಪಾಸು ಬಂದು ಮತ್ತೆ ಒಂಬತ್ತುವರೆಗೆ ಹೋಗಿದಾರೆ. ಆಗಲೂ ಉತ್ತರ ಕೊಡದೇ ಇರೋ ಹೊತ್ತಿಗೆ ಅನುಮಾನ ಬಂದು ಹತ್ರ ಹೋಗಿ ನೋಡ್ದಾಗ ಗೊತ್ತಾಗಿದೆ. ಅತ್ತಿಗೆ ಎಲ್ಲಿಗೆ... ಯಾವ ಕಲ್ಯಾಣ ಮಂಟಪಕ್ಕೆ ಹೋಗಿದಾರೆ ಅಂತ ಗೊತ್ತಾಗದೆ... ಅಂಗಡಿಲೀ ಅಕ್ಕನ ನಂಬರು ತಕ್ಕೊಂಡು... ರಾಮಣ್ಣಂದು ನಂಬರ ತಕ್ಕೊಂಡು ಮೊಮ್ಮಗು ಕೈಲಿ ಫೋನ್ ಮಾಡ್ಸಿದೆ ಅಜ್ಜಿ. ರಾಮಣ್ಣ ಬೆಳಿಗ್ಗೆ ಆರು ಗಂಟೆಗೆ ಟೂರು ಅಂತ ಹೋಗಿದ್ದಾನಂತೆ... ಸಂದೀಪ, ಪ್ರದೀಪ... ಏಳು ಗಂಟೆಗೇ ಟ್ಯೂಷನ್‌ಗೆ ಹೋಗಿದ್ರಂತೆ... ಅಲ್ಲಿಂದ ಹಂಗೇ ಕಾಲೇಜಿಗೆ ಹೋಗಿದಾರೆ.

– ಒಳ್ಳೆ ಕತೆ! ಯಾರೂ ಪಕ್ಕದಲ್ಲಿ ಇಲ್ದೇ ಇರೋ ಹೊತ್ತಿಗೇನೇ ಅಮ್ಮಾ ಸಾಯೋದಾ? ಟೈಮ್ ಆರಿಸಿಕೊಂಡಿರೋದು ನೋಡು!

* ಆರೇಳು ವರ್ಷಾನೇ ಆಯ್ತಲ್ಲ? ಅಮ್ಮ ಆ ರೂಮಿನಲ್ಲಿ ಒಬ್ಬಳೇ... ನಾವು ಯಾರಾದ್ರೂ ಹೋದಾಗ ಅಷ್ಟೇ... ಅಪ್ಪ ಇದ್ದಾಗ ಬಿಟ್ರೆ ಬೇರೆ ಯಾರು ಆ ರೂಮಿಗೆ ಹೋಗ್ತಾ ಇದ್ರು? ಉಚ್ಚೆ ವಾಸನೆ ಬೇರೆ... ಸಿಲ್ಲೋಕೆ ತ್ರಾಸು ಆಗ್ತಿತ್ತು. ಆ ನಿಂಗಿ ಶುದ್ಧ ದಂಡ! ನಾವು ಹೋದಾಗ ಮಾತ್ರ ಡೆಟಾಲ್ ಹಾಕೋದು... ಬಟ್ಟೆ ಬದಲಾಯಿಸೋದು, ಊದುಬತ್ತಿ ಹಚ್ಚೋದು... ಫಿನಾಯಿಲ್ ಸುರಿದು ಒರೆಸೋದು... ಒಂದು ಕೆಲ್ಸ ಮಾಡ್ತೀಯಾ?

– ಏನು?

* ಸ್ವಲ್ಪ ಬೇಗ ಹೊರಡು. ಹ್ಯಾಗೆ ಅಂದ್ರೆ ಹಾಗೆ ಹರಕು ಚಾಪೆ ಮೇಲೆ ಮಲಗಿಸಿ ಬಿಟ್ರೆ ಕಷ್ಟ. ಸ್ವಲ್ಪ ನೀಟ್ ಆಗಿ... ಡಿಗ್ನಿಫೈಡ್ ಆಗಿ... ಇರೋಥರ ಅಮ್ಮನ್ನ ಇಡೋ ಹಾಗೆ ನೋಡ್ಕೋ...

– ಅತ್ತಿಗೆ ಇಲ್ವಾ? ಅಕ್ಕ ಅದಾಗಲೇ ಹೋಗಿದಾಳೆ... ನೋಡ್ಕೋತಾರೆ...

* ನೋಡು ಅವರಿಬ್ಬರೂ ಒಂದೇ... ಒಂಚೂರೂ ಸೂಕ್ಷ್ಮ ಇಲ್ಲ. ಡ್ರೆಸ್ ಸೆನ್ಸ್ ಮೊದಲೇ ಇಲ್ಲ. ಅಮ್ಮಂಗೆ ಒಳ್ಳೇ ರೇಶ್ಮೆ ಸೀರೆ ಉಡಿಸಿ... ತಲೆ ಬಾಚಿ ಎಲ್ಲ ಮಾಡು. ತಲೆ ಹತ್ರ ದೊಡ್ಡ ದೀಪದ ಕಂಬ ಇದೆಯಲ್ಲ ಅದನ್ನ ಇಡಿಸು. ಧೂಪದೀಪ ಎಲ್ಲ ನಿಂದು ಜವಾಬ್ದಾರಿ. ಹೂವು ಸಾಕಷ್ಟು ತರಿಸು. ವೆರೈಟಿ ಇರಲಿ. ಚಿಕ್ಕಮ್ಮ ಸತ್ತಾಗ ಹೆಣಕ್ಕೆ ಹ್ಯಾಗೆ ಶೃಂಗಾರ ಮಾಡಿದ್ರು ಗೊತ್ತಾ?

– ಸತ್ತಾಗ ನಾ ಬಂದಿರಲಿಲ್ಲ... ವೈಕುಂಠಕ್ಕೆ ಬಂದಿದ್ದೆ. ಜನ ಅಂದ್ರೆ ಜನ... ಛತ್ರದಲ್ಲಿ ಮಾಡಿದ್ರು... ಧಾಂಧೂಂ ಅಂತ ಭರ್ಜರಿ ಮಾಡಿದ್ರಪ್ಪ...

* ಅವರನ್ನ ಮೀರಿಸೋ ಹಾಗೆ ಮಾಡಬೇಕು, ನಾವೂ ಇಷ್ಟಿಷ್ಟು ಅಂತ ಹಣ ಕೊಟ್ಟರಾಯ್ತು. ಅಷ್ಟಕ್ಕೂ ಅಮ್ಮಂದೇ ಅಕೌಂಟ್‌ನಲ್ಲಿ ಬೇಕಾದಷ್ಟಿದೆ ಅನಿಸುತ್ತೆ.

– ಹೌದೌದು. ಕಮ್ಮಿ ಬಿದ್ರೆ ಕೊಡೋಣ... ನೀ ಹೇಳಿದ್ದು ಒಳ್ಳೆದಾಯ್ತು. ನಾನು ಮುಂಚೆನೇ ಹೋಗಿ ಸೇರಿಕೋತೀನಿ...

* * *

* ಹಲೋ... ಸುಮು... ಗೊತ್ತಾಯ್ತು ತಾನೇ?

– ಗೊತ್ತಾಯ್ತು... ಬಸ್‌ನಲ್ಲಿ ಇದೀನಿ... ಇನ್ನರ್ಧ ಗಂಟೆ... ನೀನು? ಹೊರಟಿದೀಯಾ?

* ಹೂಂ... ಹೊರಟಿದೀನೀ... ಬಸ್‌ಸ್ಟಾಂಡ್‌ನಲ್ಲಿ ಇದೀನೀ... ಮತ್ತೆ ದೀಪ?

– ಏ... ಅವಳೆಲ್ಲಿ ಹೊರಟು ಬರೋಕೆ ಆಗುತ್ತೆ...? ಅಷ್ಟು ದೂರದಿಂದ ಫ್ಲೈಟು... ಟಿಕೇಟು... ಸಿಗಬೇಕಲ್ಲ? ಫೋನ್ ಮಾಡಿದ್ದೆ... ತಿಳಿಸ್ದೆ... ತಿಥೀದು... ವೈಕುಂಠದ್ದು ಅಷ್ಟೂ ಖರ್ಚು ಪೂರಾ ತಾನೇ ವಹಿಸಿಕೊಳ್ತಿನೀ ಅಂದ್ಲು. ಫೋನ್‌ನಲ್ಲಿ ಅತ್ತೂ ಅತ್ತೂ ಇಟ್ಟಳಪ್ಪ... ಗೊಳೋ ಅಂತ ಅತ್ತುಬಿಟ್ಲು... 'ಅಮ್ಮಂಗೆ ಅಮೆರಿಕ ತೋರಿಸಬೇಕು... ಯುರೋಪು ಸುತ್ತಾಡಿಸಬೇಕು ಅಂತೆಲ್ಲ ಇದ್ದೆ; ಏನು ಮಾಡೋದು...? ನನಗೆ ಅನುಕೂಲ ಆಗೋ ಅಷ್ಟರಲ್ಲಿ ಅಮ್ಮನ ಸೊಂಟ ಬಿದ್ದೋಯ್ತು' ಅಂತ ಹೇಳ್ತಾ... ಗೋಳಾಡಿದಳಪ್ಪ...

* ಬರ್ತಾಳಂತ ವೈಕುಂಠಕ್ಕಾದ್ರೂ?

– ಗೊತ್ತಿಲ್ಲ... ಏನು ಮಾಡ್ತಾಳೋ, ಹಾಂ ಮಾತಿನ ಮಧ್ಯೆಯೇ ಒಂದು ಮಾತು ಬಿಟ್ಟು ನೋಡು... 'ನನ್ನ ಪಾಲಿಗೆ ಅಮ್ಮಂದು ಎಷ್ಟೇ ಸೀರೆ ಬರಲಿ, ಅದನ್ನ ನಿಂಗಿಗೆ, ಶಿವಮ್ಮನಿಗೆ, ಮತ್ತೆ ಅತ್ತಿಗೆಗೆ ಹಂಚಿಕೊಟ್ಟು ಬಿಡು ಅಂದ್ಲು...'

* ನೋಡಿದ್ದೀಯಾ ಎಷ್ಟು ಜಾಣೆ? ಮೆರೆಯೋ ಒಂದು ಅವಕಾಶಾನೂ ಬಿಡಲ್ಲ...

– ಹಾಹಾಹಾ...

# ನಾನು ಬಡವಿ... ಆತ ಬಡವ...

* ಹಲೋ... ಆಂಟೀ... ನಾನು ರಂಜು...

– ಏನೇ... ಚೆನ್ನಾಗಿದ್ದೀಯಾ? ಏನು ಅಪರೂಪಕ್ಕೆ ಫೋನ್ ಮಾಡಿದೀಯಾ... ಭಾಷಣ ಇದೆಯಾ? ಡಿಬೇಟ್ ಇದೆಯಾ? ಏನಾದ್ರು ಪಾಯಿಂಟ್ಸ್ ಬೇಕಿತ್ತಾ?

* ಹಹ್ಹ... ಹಹ್ಹ... ಹೋಗೀ ಆಂಟೀ...

– ಹೌದಲ್ಲೋ... ಅದಿದ್ರೆ ಮಾತ್ರ ಅಲ್ಲವಾ ನಿಂಗೆ ಆಂಟೀ ನೆನಪಾಗೋದು...

* ಹಾಗಲ್ಲ ಆಂಟೀ...

– ಮತ್ತೆ ಹೇಗೆ? ಮೊನ್ನೆ ನಿಮ್ಮಮ್ಮ ನಮ್ಮನೆಗೆ ಬಂದಾಗ ಬರೊಕಾಗ್ತಾ ಇರಲಿಲ್ಲವಾ?

* ಖಂಡಿತಾ ಬರ್ತಾ ಇದ್ದೆ ಆಂಟೀ... ಕ್ಲಾಸ್‌ದು ರೆಪ್ರೆಂಸೆಟೀವ್ ಎಲೆಕ್ಷನ್ ಇತ್ತು. ನನ್ನ ಫ್ರೆಂಡೇ ನಿಂತಿದ್ಲು...

– ಏನು ಗೆದ್ಲಾ ನಿನ್ನ ಫ್ರೆಂಡು?

* ಇಲ್ಲ ಆಂಟೀ... ಎಲ್ಲ ನಿಲ್ಲು, ನಿಲ್ಲು... ಅಂತ ಅವಳನ್ನ ನಿಲ್ಲಿಸಿಬಿಟ್ಟು ಕೊನೆಗೆ ಸೋಲಿಸಿಬಿಟ್ರು...

– ಛೆ! ಛೆ!

* ನಮ್ಮ ಬೆಂಚಲ್ಲೇ ಅವಳು ಕೂರೊದು. ನಾವು ನಾಕು ಜನ ಅವಳಿಗೇ ಓಟು ಹಾಕಿದ್ವು. ಹುಡುಗೀರೆಲ್ಲ ಇವಳಿಗೇ ಹಾಕೋದು ಅಂತ ಮಾತಾಡಿಕೊಂಡಿದ್ವು... ಆದ್ರೆ ಎಲ್ಲ ಕಾನ್‌ಸ್ಪಿರೆಸಿ ಮಾಡಿದ್ರು ಆಂಟೀ... ಅದೇ ರೋಹಿತ್... ಹುಡುಗ ನಿಂತಿದ್ನಲ್ಲ... ಅವನಿಗೆ ಹಾಕಿಬಿಟ್ರು... ನಮ್ಮ ಕ್ಲಾಸಲ್ಲಿ ಹುಡುಗೀರದ್ದೇ ಸಂಖ್ಯೆ ಜಾಸ್ತಿ. ಮನಸ್ಸು ಮಾಡಿದ್ದಿದ್ರೆ ನಾವು ಹುಡುಗೀರು ಮಾರಿನ ಗೆಲ್ಲಿಸಬಹುದಿತ್ತು... ಕೆಲವರು ಕಾನ್‌ಸ್ಪಿರೆಸಿ ಮಾಡಿದ್ರು ಆಂಟೀ... ಮಾರಿಗೆ ೧೨ ಓಟು ಬಂತು. ರೋಹಿತ್‌ಗೆ ೨೮.

– ಮಾರಿನಾ

* ಹಹ... ಹಹ... ಮೇರಿ ಮಾರ್ಗರೇಟ್ ಮುತ್ತು... ಪಾಪ...

– ಛೆ! ಛೆ! ಯಾಕೆ ಹಾಗಾಯ್ತು...

* ಅದೇ ಆಂಟೀ ಕಾನ್‌ಸ್ಪಿರೆಸಿ... ಟೀಚರ್‌ನ ಯಾರು ಕರೆಕ್ಟ್ ಆಗಿ ಕ್ಲಾಸಿಗೆ ಕರಕೊಂಡು ಬರ್ತಾರೋ ಅವರಿಗೆ ಓಟು ಮಾಡೋದು ಅಂತ ಲಾಸ್ಟ್ ಮಿನಿಟಿಗೆ ಡಿಸೈಡ್ ಆಯ್ತಂತೆ. 'ಆ ಜವಾಬ್ದಾರಿ ತಗೊಳಕ್ಕೆ ನನ್ನ ಕೈಯಲ್ಲಿ ಆಗಲ್ಲ... ಮೇಸ್ಟ್ರು ನನ್ನ ಮಾತು ಕೇಳ್ತಾರಾ? ಕಪಾಳಕ್ಕೆ ಹೊಡಿತಾರೆ' ಅಂತ ಮುತ್ತು ಹೇಳಿದಳಂತೆ. ಆದ್ರೆ ರೋಹಿತ್ 'ನಾ ಕರಕೊಂಡು ಬರ್ತಿನೀ... ರೆಗ್ಯುಲರ್ ಆಗಿ ಪಾಠ ಆಗೊ ಹಾಗೆ ನೋಡಿಕೊಳ್ತಿನೀ' ಅಂದನಂತೆ. ಹಾಗಾಗಿ ಎಲ್ಲ ಅವನಿಗೆ ಓಟು ಮಾಡಿದಾರೆ... ಆದ್ರೆ ಈ ವಿಷ್ಯ ನನ್ನ ತನಕ ಬಂದಿಲ್ಲ. ಅವರವರೇ ಮಾತಾಡಿಕೊಂಡಿದಾರೆ... ಅದಕ್ಕೇ ಹೇಳಿದ್ದು ಆಂಟೀ ಕಾನ್‌ಸ್ಪಿರೆಸಿ ಅಂತ...

– ಅಲ್ಲವೇ ಸಂಜು ಮಾಡೊಕೆ ಅದ್ಯಾವ ದೊಡ್ಡ ಪೋಸ್ಟು ಅಂತ... ಅದ್ಯಾಕೆ ನಿಂಗೆ ಹಾಗನ್ನಿಸ್ತು?

* ಇತ್ತೀಚೆಗೆ ನಮ್ಮಲ್ಲಿ ಎಲ್ಲ ಡಿವೈಡ್ ಆಗಿಬಿಟ್ಟಿದಾರೆ ಆಂಟೀ... ಅವಳು ಕ್ರಿಶ್ಚಿಯನ್ ಅಲ್ಲವಾ? ಅದಕ್ಕೆ... ಕ್ರಿಶ್ಚಿಯನ್ನರು ೪೨೦ಗಳು... ಬಲವಂತದಿಂದ ಮತಾಂತರ ಮಾಡ್ತಾರೆ... ಅಂತ ಹುಡುಗರು ಗುಂಪುಕಟ್ಟಿಕೊಂಡು ಮಾತಾಡ್ತಾ ಇದ್ರು...

– ವೆರಿ ಬ್ಯಾಡ್...

* ಮುತ್ತುಗೆ ತುಂಬಾ ಅವಮಾನ ಆಗಿತ್ತಲ್ಲ... ಅದಕ್ಕೇ ಅವಳನ್ನು ಸಮಾಧಾನ ಮಾಡೋಣ ಅಂತ ನಾನು ಮತ್ತು ಸುಮಿ ಅವಳ ಮನೆಗೆ ಹೋಗಿದ್ವೀ... ಪಾಪ ಅವಳ ಫಾದರ್ ಕೂಡ ತುಂಬಾ ಬೇಜಾರು ಮಾಡಿಕೊಂಡ್ರು... ಅವಳ ಮಮ್ಮಿಯಂತು... ಚಿಕ್ಕ ಚಿಕ್ಕ ಮಕ್ಕಳ ತನಕ ಪಾಲಿಟಿಕ್ಸ್ ಬಂದುಬಿಡ್ತಾ... ಅಂತ ಕೂಗಾಡಿಬಿಟ್ರು. ಆಮೇಲೆ ಹೋಗ್ಲಿ... ನೀವಾದ್ರು ನಮ್ಮ ಮುತ್ತುಗೆ ಓಟು ಹಾಕಿದಿರಲ್ಲ... ತುಂಬಾ ಥ್ಯಾಂಕ್ಸ್ ಅಂತ ಹೇಳಿ ನಮಗೆ ವೆಜಿಟಬಲ್ ಟೋಸ್ಟ್ ಮಾಡಿಕೊಟ್ರು. ಅವಳಮ್ಮ ತುಂಬಾ ಚೆನ್ನಾಗಿ ತಿಂಡಿ ಮಾಡ್ತಾರೆ. ವೆರಿ ನೀಟ್... ಎಲ್ಲ ಗಾಜಿಂದೇ ತಟ್ಟೆ–ಲೋಟ. ಖುಷಿಯಾಗುತ್ತೆ. ಕ್ಯಾರೆಟ್‌ದು ಮಿಲ್ಕ್‌ಶೇಕ್ ಮಾಡ್ತಾರೆ. ಸಖತ್ ಆಗಿರುತ್ತೆ.

– ಹಹ್ಹ. ಹಹ್ಹ. ಈಗ ಗೊತ್ತಾಯ್ತು ನೀನು ಯಾಕೆ ಅವಳಿಗೆ ಓಟು ಹಾಕಿದ್ದು ಅಂತ...

* ಹೋಗಿ... ಆಂಟೀ... ಮತ್ತೆ... ಏನೋ ಕೇಳಬೇಕು ಅಂತ ಅಂದುಕೊಂಡಿದ್ದೆ... ಹಾಂ... ಪೇಪರ್‌ನಲ್ಲಿ ಎಲ್ಲ ಬರ್ತಾ ಇದೆಯಲ್ಲ... ಟೀವಿನಲ್ಲಿ ಬರ್ತಾ ಇದೆಯಲ್ಲ ಕ್ರಿಶ್ಚಿಯನ್ನರು ಹಿಂದೂಗಳಿಗೆ ಆಸೆ ತೋರಿಸಿ, ಮರುಳು ಮಾಡಿ ಬಲವಂತದಿಂದ ಬುಟ್ಟಿಗೆ ಹಾಕ್ಕೊತೀದಾರೆ... ಅಂತ... ಕ್ಲಾಸಲ್ಲಿ ಹುಡುಗೀರು ಮಾತಾಡಿಕೋತಾ ಇದ್ರು... ಸಾಬರು, ಕ್ರಿಶ್ಚಿಯನ್ನರು ಎಲ್ಲರೂ ಹಿಂದೂಗಳನ್ನು ಯಾಮಾರಿಸ್ತಾರೆ ಅಂತ...

– ನೋಡು ರಂಜು... ಈ ಅಂತರ ಅನ್ನೋದು ಯಾವತ್ತಿಂದಾನೂ ಇದ್ದದ್ದೇ... ವೇಷಾಂತರ, ಭಾಷಾಂತರ, ದೇಶಾಂತರ, ಪಕ್ಷಾಂತರ... ಮತಾಂತರ... ಕುಲಾಂತರ ಅಂತ ಅದೇನೋ ಬಿ.ಟಿ. ಟೆಕ್ನಾಲಜಿ ಬಂದಿದೆಯಂತಲ್ಲ... ಯಾರು ಬಲವಂತ ಮಾಡ್ತಾರೆ?

ಪಕ್ಷದಿಂದ ಪಕ್ಷಕ್ಕೆ ಕಾನೂನು–ಕಾಯ್ದೆ ಇದ್ರೂ ಹಾರ್ತಾರೆ. ಏನೋ ಆಮಿಷ–ಆಸೆ ತೋರಿಸಿರ್ತಾರೆ. ಇನ್ನು ನಮ್ಮ ಈಗಿನ ಮಕ್ಕಳು, ದಿವಸಕ್ಕೊಂದು ಕಂಪನಿ ಚೇಂಜ್ ಮಾಡ್ತಾರೆ. ಲಕ್ಷಗಟ್ಟಲೆ ಹುಡುಗರು ದೇಶಾಂತರ ಹೋಗಿದಾರೆ. ಯಾಕೆ ಹೋಗಿದಾರೆ? ಇಲ್ಲೇನು ಕಮ್ಮಿಯಾಗಿತ್ತು? ಕನ್ನಡ ಬಿಟ್ಟು ಇಂಗ್ಲಿಷ್‌ಗೆ ಹೋಗಿದಾರೆ... ಪಾನಕ ಹೋಗಿ ಪೆಪ್ಸಿ ಬಂದಿದೆ... ಎಷ್ಟು ಜನ ತಮ್ಮ ತಮ್ಮ ದೇವರನ್ನೂ ಬದಲು ಮಾಡಿಕೊಂಡಿದಾರೆ... ಇವೆಲ್ಲ ಅವರವರ ಅಗತ್ಯ– ಅನುಕೂಲ ಅಷ್ಟೇ. ಪ್ರತಿಯೊಂದು ಚಲನೆಯ ಹಿಂದೆ ಒತ್ತಡ ಇದ್ದೇ ಇರುತ್ತೆ. ಇದನ್ನೆಲ್ಲ ಕಾನೂನು–ಕಾಯ್ದೆಯಿಂದ ತಡೆಯೊಕೆ ಆಗಲ್ಲ. ಹೋಗ್ತೀನೀ ಅಂದ್ರೆ ಹೋಗು ಅನ್ನಬೇಕು... ವಾಪಾಸು ಬರ್ತಿನೀ ಅಂದ್ರೂ ಬಾ ಅನ್ನಬೇಕು. ಕೋಟಿ ದೇವರುಗಳ ಜೊತೆ ಇನ್ನೂ ಒಂದೆರಡು ದೇವರುಗಳನ್ನು ಸೇರಿಸಿಕೊಂಡು ನಮ್ಮ ಶಕ್ತಿ ಹೆಚ್ಚಾಯಿತು ಅಂತ ಅಂದುಕೊಬೇಕು... ಗಲಾಟೆ ಯಾಕೆ ಮಾಡಬೇಕು? ಮನೆಲೀ ನಾಕು ಜನ ನಾಕು ಥರಾ ಇರ್ತಿವೀ... ಹಂಗಂತ... ಹೊಡೆದಾಟ ಮಾಡ್ತಿವಾ? ಇವೆಲ್ಲಾ ತುಂಬಾ ಸೂಕ್ಷ್ಮವಾದ ವಿಚಾರ... ಇದನ್ನು ಇತ್ಯರ್ಥ ಮಾಡೊಕೆ ನಮ್ಮಪ್ಪನಾಣೆ ಸಾಧ್ಯ ಇಲ್ಲ...

* ಪಾಯಿಂಟ್ಸ್ ಸಿಗ್ತು ಆಂಟೀ... ನಾಳೆ ಹೋಗಿ... ಕಾಲೇಜಿಗೆ ಹೋಗಿ ಅವರಿಗೆ ಬೆಂಡೆತ್ತುತ್ತೀನಿ ನೋಡಿ... ಹಷ್ಟ... ಹಷ್ಟ... ಆಂಟೀ... ಮತ್ತೊಂದು...

– ಕೇಳು...

* ಗಾಂಧೀಜಿದು ಒಂದು ಇಂಟರೆಸ್ಟಿಂಗ್ ಕಥೆ ಹೇಳಿ ಆಂಟೀ... ಒಂದು assignment ಇದೆ. ಅಕ್ಟೋಬರ್ ಎರಡಕ್ಕೆ ಫಂಕ್ಷನ್ ಇದೆ. ಯಾರಾದ್ರೂ ಹಿರಿಯ ಗಾಂಧಿವಾದೀನ ಭೇಟಿ ಮಾಡಿ ಕಥೇನ ಕಲೆಕ್ಟ್ ಮಾಡಿ ಅಂದಿದಾರೆ... ಯಾರಾದ್ರೂ ಇದಾರಾ ಆಂಟೀ.

– ಇಲ್ಲಿ ಯಾರಿದಾರೆ? ಉಹುಂ... ಯಾರ್‍ಯಾರೂ ಇಲ್ಲ... ನಮ್ಮಜ್ಜಿ ಒಂದು ಕತೆ ಹೇಳ್ತಾ ಇದ್ರು... interesting ಆಗಿದೆಯಾ ನೋಡು?!

* ಆಂಟೀ... ಹೇಳಿ... ಹೇಳಿ...

– ನಮ್ಮಜ್ಜಿ, ಅವರೂರಿಗೆ ಗಾಂಧಿ ಬಂದಿದ್ದಾಗ ಸರ, ಬಳೆ ಎಲ್ಲಾ ತಕ್ಕೊಟ್ಟರಂತೆ. ನಮ್ಮಜ್ಜಿ ಮನೆಲೀ ಅಡಿಗೆ ಮಾಡಿಕೊಂಡಿದ್ದ ಅಡಿಗೆ ಹೆಂಗಸು ಚೆಳ್ಳಿ ಅಂತ... ಅವಳೂ, ಅವಳ ಕಿವಿಯಲ್ಲಿದ್ದ ಚಿಕ್ಕ ಬೆಂಡೋಲೆನ ಗಾಂಧಿಗೆ ಕೊಟ್ಟಳಂತೆ. ನಮ್ಮಜ್ಜಿ ತುಂಬಾ ಬೇಜಾರು ಮಾಡಿಕೊಂಡು 'ನಿನ್ನ ಹತ್ರ ಇದ್ದದ್ದೇ ಚೂರು ಬಂಗಾರ... ಮೊದಲೇ ನೀನು ಬಡವಿ, ನೀನ್ಯಾಕೆ ಕೊಡೋಕೆ ಹೋದೆ?' ಅಂತ ಹೇಳಿದರಂತೆ. ಅದಕ್ಕವಳು 'ನಾನು ಬಡವಿ, ನಿಜ. ಆದ್ರೆ ಅವನು ನನಗಿಂತ ಬಡವನ ಹಾಗೆ ಕಾಣ್ತಾನೆ... ಈ ಬಡವಿಯ ಹತ್ತಿರಾನೂ ಬಂದು ಬೇಡಿದನಲ್ಲ... ನಂಗೆ ಸಂತೋಷ ಆಯ್ತು. ಕೊಟ್ಟೆ' ಅಂತ ಅಂದಳಂತೆ. ಆಮೇಲೆ ಒಂದು ವರುಷದ ಮೇಲೆ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದಾಗ, ಪಾಯಸ ಮಾಡಿ ಸಡಗರದಿಂದ

ನಮ್ಮಜ್ಜಿಗೆ ಪಾಯಸ ಕುಡಿಯಲು ಕೊಟ್ಟು ಸದ್ಯ ಆ ಮುದುಕಪ್ಪನಿಗೆ ಬೆಂಡೋಲೆ ಕೊಟ್ಟಿದ್ದು ಸಾರ್ಥಕವಾಯಿತು... ಮೋಸಮಾಡಲಿಲ್ಲ... ಪುಣ್ಯಾತ್ಮ ಸ್ವಾತಂತ್ರ್ಯ ತಂದುಕೊಟ್ಟ ಅಂತ ಸಂಭ್ರಮ ಪಟ್ಟಳಂತೆ... ಹೇಗಿದೆ?

* ...............

– ಹೇಗಿದೆ ರಂಜೂ...

* ಥ್ಯಾಂಕ್ಸ್ ಆಂಟೀ... ಆ ಗಾಂಧಿ ಏನಾದ್ರೂ ಬಂದು ಕೇಳಿದ್ರೆ ನಾನು ಈಗ್ಲೆ ನನ್ನ ಬೆಂಡೋಲೆ ತೆಗೆದುಕೊಟ್ಟು ಬಿಡ್ತೀನೀ... ಬಟ್... ಬರ್ತ್ತಾರಾ ಆಂಟೀ...

●

# ಉಣ್ಣಕ್ಕೊಂದು ತಂಬ್ಗಿ, ಹೊದೆಯಕ್ಕೊಂದು ಕಂಬ್ಳಿ...

* ಹಲೋ... ಅಕ್ಕ ನಾನು ಸೀಮಾ. ಪೆನ್ನು-ಪೇಪರು ಇಟ್ಕೊಂಡು ರೆಡಿ ಇದ್ದೀನಿ... ಹೇಳ್ತಿಯೇನೇ... ಬರಕೊತೀನೀ.

– ನಾನೂ ಹೇಳೋಕೆ ರೆಡಿ ಇದೀನಿ... ಸಿಮ್ಮು... ನಂಗೆ ಭಯ ಆಗುತ್ತೆ ಕಣೇ... ಏನಾದ್ರೂ ಎಡವಟ್ಟಾದರೆ ಏನು ಮಾಡ್ತೀಯೆ? ಇಂಥ ಅಡಿಗೆಗಳನ್ನು ಯಾರೂ ಫಂಕ್ಷನ್‌ಗಳಿಗೆ ಮಾಡಿಸಲ್ಲ... ದೊಡ್ಡ ದೊಡ್ಡ ಕಂಪನಿಯವರು, ದೊಡ್ಡದೊಡ್ಡ ಜನ ಬರ್ತಾರೆ ಅಂತ ಬೇರೆ ಹೇಳ್ತೀಯಾ? ಅವರಿಗೆ ಇದೆಲ್ಲ ಹಿಡಿಸುತ್ತಾ?

* ಅಕ್ಕಾ... ಫುಡ್ಡು ಡಿಫರೆಂಟಾಗಿರಬೇಕು ಅಂತ ನಮ್ಮ ಡೈರೆಕ್ಟರ್ ಹೇಳಿದಾರೆ. ಎಲ್ಲ ನಂಗೇ ಬಿಟ್ಟಿದ್ದಾರೆ.

– ಡಿಫರೆಂಟು ಅಂದ್ರೆ ಹ್ಯಾಗೆ? ರಿಸ್ಕ್ ತಗೊಬ್ಯಾಡವೇ... ಹೊಸ ಸಾಹಸಕ್ಕೆ ಕೈ ಹಾಕಬೇಡ... ಮೊದಲಿನಿಂದಲೂ ನೀನು ಹಾಗೇ...

* ಹಹ್ಹ... ಸೇಫ್ ಆಗಿ ಆಲೋಚನೆ ಮಾಡೂಕೆ ನಂಗೆ ಬರಲ್ಲವೆ... ನಾನು ನಿನ್ನ ಥರ ಅಲ್ಲವಲ್ಲ.. ಸಿಂಪಲ್ ಆಗಿರಬೇಕು, ಆದ್ರೆ ಅದೇ ಹೊತ್ತಿಗೆ ಕ್ಲಾಸಿಕ್ ಆಗಿರಬೇಕು... ಅಂಥಾ ಐಟಂ ಹೇಳು...

– ಕ್ಲಾಸಿಕ್ ಅಂದ್ರೆ?!

* ಒಳ್ಳೆ ಪೆದ್ದಿ ಥರ ಆಡಬೇಡ. ಎಷ್ಟು ಚೆನ್ನಾಗಿ ಅಡಿಗೆ ಮಾಡ್ತೀಯಾ... ನಮ್ಮ ಫ್ಯಾಮಿಲಿಲೀ ನೀನೇ ತಾನೆ ಮಾಸ್ಟರ್ ಕುಕ್... ಕ್ಲಾಸಿಕ್ ಅಂದ್ರೆ... ಮಾಡೋಕೆ ಸರಳವಾಗಿರಬೇಕು ರುಚಿಯಲ್ಲಿ ಶ್ರೀಮಂತವಾಗಿರಬೇಕು... ನೋಡೋಕೆ ಸುಂದರವಾಗಿರಬೇಕು... ಹೆಲ್ತಿ ಅಂಡ್ ನ್ಯಾಚುರಲ್ ಜತೆಜತೆಗೆ ಸ್ಪೆಷಲ್ ಆಗಿರಬೇಕು...

– ಸಾಕೆ ನಿನ್ನ ಫುಡ್ ಮೀಮಾಂಸೆ... ಏನೋ... ಒಂದು ದೊಡ್ಡ ಕಂಪನಿಯಲ್ಲಿ ಕೆಲ್ಸ ಅಂದ್ರೆ... ಇದೇನೆ? ಅಡಿಗೆ ಮಾಡಿಸೂ ಕೆಲ್ಸ?

* ಅಕ್ಕಾ... ನಾನು ಈವೆಂಟ್ ಮ್ಯಾನೇಜರ್... ಎಲ್ಲ ನಂದೇ ಜವಾಬ್ದಾರಿ...

– ಉಸ್ತುವಾರಿ... ಅಡಿಗೆ ಉಸ್ತುವಾರಿ ಅನ್ನು...

* ಪುಲಾವ್, ಬಿಸಿಬೇಳೆ ಹುಳಿಯನ್ನ, ಪುಳಿಯೋಗರೆ, ಚಿಪ್ಸು, ಬರ್ಫಿ, ದಾಲು,

ಗೋಬಿಮಂಚೂರಿ ಇವೆಲ್ಲ... ಬೇಜಾರು ಬಂದುಬಿಟ್ಟಿದೆ. ಅಗದಿ ದೇಸಿ ಅಡಿಗೆಗಳನ್ನು ಮಾಡಿಸೋಣ ಅಂತ... ಹಳೆ ಕಾಲದವು... ಅಂತಾದ್ದು...

– ಹಳೇದು ಅಂತ ಹೇಳಲೇಬೇಡ... ಈ ಹೊತ್ತಿಗೂ ನಾನು ಪ್ರತಿದಿನ ಅಂತಾದ್ದೇ ಮಾಡೋದು... ಗೊಡ್ಡುಗೊಡ್ಡು ಅಂತ ನಂಗೂ ಒಮ್ಮೊಮ್ಮೆ ಅನಿಸುತ್ತೆ. ಆದ್ರೆ ಉಂಡವರು ಚೆನ್ನಾಗಿದೆ ಅಂತ ಹೇಳ್ತಾರೆ...

* ಅದೇ... ಅದೇ... ಗೊಡ್ಡು ಅಂದ್ಯಲ್ಲ... ಗೊಡ್ಡು ಸಾರು... It sounds different... ಅದನ್ನೇ ಹೇಳು ಬರಕೋತೀನೀ...

– ಹಪ್ಪ... ಗೊಡ್ಡು ಸಾರು ಬರಕೋ... ಹುಣಿಸೆಹಣ್ಣು ತಿರುಳು ನಿಂಬೆಗಾತ್ರ... ಒಂದು ದೊಡ್ಡ ನಿಂಬೆಗಾತ್ರ ಹುಣಿಸೆ ಹಣ್ಣಿನ ತಿರುಳಿಗೆ ಹತ್ತು ಬಟ್ಟಲು ಸಾರು ಒದಗುತ್ತೆ... ನಿಂಗೆ ಎಷ್ಟು ಬೇಕೋ... ಅಂದಾಜು ಮಾಡಿಕೋ... ನಿಂಬೆಗಾತ್ರ ಹುಣಿಸೆ, ಸಾರಿನ ಪುಡಿ ನಾಕು ಚಮಚ, ನೆಲ್ಲಿ ಗಾತ್ರ ಬೆಲ್ಲ... ಕಡಲೆ ಗಾತ್ರ ಇಂಗು, ಕೊತ್ತಂಬರಿ–ಕರಿಬೇವು, ಚಿಟಿಕೆ ಅರಿಶಿನ, ಒಗ್ಗರಣೆಗೆ ಎರಡು ಚಮಚ ಎಣ್ಣೆ–ಸಾಸಿವೆ, ಒಂದು ಸ್ಟೀಲ್ ಪಾತ್ರೆಯಲ್ಲಿ ಹತ್ತು ಲೋಟ ನೀರಿಟ್ಟು ಹುಣಿಸೆಹಣ್ಣು ಹಾಕಿ ಕುದಿಸಬೇಕು. ಚೆನ್ನಾಗಿ ಕುದ್ದ ಮೇಲೆ ಸಾರಿನಪುಡಿ, ಬೆಲ್ಲ, ಅರಿಶಿನ ಹಾಕಿ ಮತ್ತಷ್ಟು ಕುದಿಸಬೇಕು. ಸಾಸಿವೆ–ಕರಿಬೇವು–ಇಂಗಿನ ಒಗ್ಗರಣೆ ಕೊಟ್ಟು ಕೆಳಗಿಳಸಬೇಕು. ಕೊನೆಗೇ ಕೊತ್ತಂಬರಿ ಸೊಪ್ಪು ಹಾಕಿ ಮುಚ್ಚಿಡಬೇಕು. ರುಚಿಗೆ ತಕ್ಕಷ್ಟು ಉಪ್ಪು. ಒಂದು ಪಾವಕ್ಕೆ ಅನ್ನ ಊಟ ಮಾಡಬಹುದು ನೋಡು... ಅನ್ನ ಬಿಸಿಬಿಸಿ ಆಗ ತಾನೆ... ಒಲೆಯಿಂದ ಇಳಿಸಿದ್ದಾಗಿರಬೇಕು.

* ಹಪ್ಪ... ಪಾವಕ್ಕಿನಾ? ಒಂದು ಸ್ಪೂನು ಅನ್ನ ತಿನ್ನೋಕೂ ಹಿಂದೆ ಮುಂದೆ ನೋಡ್ತಾರೆ... ಇರಲಿ... ಇನ್ನೊಂದು ಹೇಳು...

– ಪಡವಲಕಾಯಿ ಕೂಟು... ಬರಕೊ...

* ಪಡವಲಕಾಯಿ? ಅದನ್ನೆಲ್ಲಿ ಹುಡುಕಿಕೊಂಡು ಹೋಗೋದೆ?

– ಹುರುಳಿಕಾಯಿ, ನವಿಲುಕೋಸು, ಮೈಸೂರು ಬದನೆಕಾಯಿ, ಬೆಂಡೆಕಾಯಿ, ಸೀಮೆ ಬದನೆಕಾಯಿ, ಕುಂಬಳಕಾಯಿ ಯಾವುದನ್ನು ಬೇಕಾದರೂ ಬಳಸಬಹುದು.

* ಹುರುಳಿಕಾಯಿದೇ ಮಾಡಿಸ್ತೀನಿ ಹೇಳು...

– ಒಂದರವತ್ತು ಹುರುಳಿಕಾಯಿ, ತೊಗರಿಬೇಳೆ ಅರ್ಧಪಾವು, ಉದ್ದಿನಬೇಳೆ ಅರ್ಧ ಚಟಾಕು.

* ಚಟಾಕು?

– ಚಟಾಕು ಅಂದ್ರೆ ಸರಿಸುಮಾರು ಮೂರು ಚಮಚ.

* ಹೇಳು... ಉದ್ದಿನಬೇಳೆ ಅರ್ಧ ಚಟಾಕು.

– ಮೂರು ತೊಲ ಕಡಲೆಬೇಳೆ... ತೊಲ ಅಂದ್ರೆ ಹತ್ತು ಗ್ರಾಂ... ಅಷ್ಟೇ... ಒಣಮೆಣಸಿನಕಾಯಿ ಎಂಟು. ತೆಂಗಿನಕಾಯಿ ಅರ್ಧ ಹೋಳು... ಒಂದು ನಿಂಬೆಹಣ್ಣು. ಒಗ್ಗರಣೆಗೆ ೨ ಚಮಚ ಎಣ್ಣೆ, ಸಾಸಿವೆ–ಕರಿಬೇವು. ರುಚಿಗೆ ತಕ್ಕಷ್ಟು ಉಪ್ಪು, ಚಿಟಿಕೆ ಇಂಗು. ಹತ್ತರಿಂದ–ಹದಿನೈದು ಸೌಟು ಕೂಟು ಒದಗುತ್ತೆ. ತೊಗರಿಬೇಳೆ–ಹುರುಳಿಕಾಯಿ ಬೇಯಿಸಿ, ಉದ್ದಿನಬೇಳೆ, ಕಡ್ಲೆಬೇಳೆ, ಒಣಮೆಣಸು ಕೆಂಪಗೆ ಹುರಿದುಕೊಂಡು, ತೆಂಗಿನತುರಿ ಜೊತೆ ರುಬ್ಬಿಕೊಂಡು ಅದನ್ನು ಬೆಂದ ಬೇಳೆ ತರಕಾರಿ ಮಿಶ್ರಣಕ್ಕೆ ಸೇರಿಸಬೇಕು. ಎಲ್ಲವೂ ಚೆನ್ನಾಗಿ ಕುದ್ದ ಮೇಲೆ ನಿಂಬೆಹಣ್ಣಿನ ರಸ ಹಿಂಡಿ, ಕರಿಬೇವು–ಎಣ್ಣೆ–ಸಾಸಿವೆ ಒಗ್ಗರಣೆ ಹಾಕಬೇಕು.

* ಅದೆಲ್ಲ ಸರಿ... ಇದೇನೇ... ಪಾವು, ಚಟಾಕು, ತೊಲ...

– ಅಯ್ಯೋ... ನಮ್ಮತ್ತೆ ಹೇಳಿಕೊಟ್ಟಿರೋದೇ ಹಾಗೆ...

* ಸರಿಸರಿ... ಅದೇನೋ ನಿತ್ಯ ಮಜ್ಜಿಗೆಯಲ್ಲಿ ಮಾಡ್ತಿಯಲ್ಲ ಅದನ್ನು ಹೇಳು...

– ತಂಬುಳಿ? 'ಉಣ್ಣಕ್ಕೊಂದು ತಂಬ್ಳಿ, ಹೊದೆಯಕ್ಕೊಂದು ಕಂಬ್ಳಿ' ಅಂತ ನಮ್ಮತ್ತೆ ಯಾವಾಗಲೂ ಹೇಳ್ತಾ ಇರ್ತಾರೆ... ಬರಕೋ...

* ಹೇಳು...

– ಈ ತಂಬುಳಿನ ಯಾವುದರಿಂದ ಬೇಕಾದ್ರು ಮಾಡಬಹುದು. ಸೊಪ್ಪು, ಸಿಪ್ಪೆ, ಕುಡಿ, ಬೀಜ, ಕಾಯಿ, ಬೇರು, ತೊಗಟೆ, ಹೂವು, ಕಾಯಿ, ಹಣ್ಣು... ಹೀಗೆ... ಒಂದು ಚಮಚ ಕಾಳು ಮೆಣಸು, ಚೂರು ಜೀರಿಗೆ, ಚೂರು ಕಾಯಿ ತುರಿ ರುಬ್ಬಿಕೊಂಡು ಇಂಗು–ಸಾಸಿವೆ, ಕರಿಬೇವು ಒಗ್ಗರಣೆ, ಮಜ್ಜಿಗೆ ಬೆರೆಸಿದರೆ ಆಯ್ತು. ತಂಬುಳಿ ರೆಡಿ. ಅಗಸೆ ಸೊಪ್ಪು, ಅತ್ತಿಕುಡಿ, ಅಮೃತಬಳ್ಳಿ, ಒಂದೆಲಗ, ಕಂಚಿ, ಕಾಕಿ, ಕಾಡಿಗರ್ಗ, ಗಣಿಕೆ, ತಗಚೆ, ಗೋಣಿಸೊಪ್ಪು, ದಾಳಿಂಬೆ, ಸೀಬೆ, ಚಿಗುರು ಒಂದು ಮುಷ್ಟಿ ಸೊಪ್ಪಾದ್ರೆ ಸಾಕು. ಬೇಕಾದ್ರೆ ಕೊಂಚ ಬಾಡಿಸಬಹುದು... ತುಪ್ಪ ಅಥವಾ ತೆಂಗಿನೆಣ್ಣೇದು ಒಗ್ಗರಣೆ ಕೊಟ್ಟರೆ ರುಚಿ ಜಾಸ್ತಿ. ಕಾಳುಮೆಣಸು ಎಂಟತ್ತು ಕಾಳು ಹಾಕಿದ್ರೂ ಸಾಕು... ಖಾರಬೇಕು ಅಂದ್ರೆ ಒಂದು ಚಮಚ ಹಾಕಬೇಕು... ಹುಳಿ, ಉಪ್ಪು, ಖಾರ ಎಲ್ಲ ಅವರವರ ನಾಲಗೆ ರುಚಿಗೆ ತಕ್ಕಂತೆ...

* ಅಕ್ಕಾ ನೀ ಹೇಳಿದ ಯಾವ ಸೊಪ್ಪು ಇಲ್ಲಿ ಸಿಗಲ್ಲವೇ...

– ಹಾಗಾದ್ರೆ... ನುಗ್ಗೆ ಹೂವು, ಚೀನಿಹೂವು, ಬಿಳಿ ದಾಸವಾಳ, ಯಲವರಿಗೆ, ಹಾಲುವಾಣ, ಬಾಳೆಕುಂಡಿಗೆ ಹೂವು... ಹೂವಿಂದಾನೂ ಮಾಡಬಹುದು...

* ಹೂವಾ? ಇದೇನು ಮಲೆನಾಡು ಅಂದುಕೊಂಡಿದೀಯಾ?

– ಶುಂಠಿ, ಮೆಂತಕಾಳು, ನೆಲ್ಲಿಕಾಯಿ, ತೊಂಡೆಕಾಯಿ, ದೊಡ್ಡಿಕಾಯಿ, ಅಮಟೆ, ಹೀರೆ ಸಿಪ್ಪೆ, ಮಗಬೀಜ, ಗಸಗಸೆ, ದಾಳಿಂಬೆಸಿಪ್ಪೆ, ಕಿತ್ತಳೆ ಸಿಪ್ಪೆ...

* ಹಹಹ... ಹಹಹ... ಜಗತ್ತಿನಲ್ಲಿ ಸಿಗೋ ಯಾವ ವಸ್ತುವಿಸಿಂದ ಬೇಕಾದ್ರೂ ಅಣುವಿನಿಂದ... ಬ್ರಹ್ಮಾಂಡದವರೆಗೆ ತಂಬುಳಿ ಮಾಡಬಹುದೇನೋ... ಹಹಹ... ಅಲ್ಲವೇನೆ?

– ಹೌದು... ಹಾಸ್ಯ ನಿನಗೆ... ಮಾಡಿ, ತಿಂದು ನೋಡು... ಎಷ್ಟು ರುಚಿ ಇರುತ್ತೆ ಅಂತ. ನಮಗಂತು ತಂಬುಳಿ ಇಲ್ಲದಿದ್ರೆ... ಊಟವೇ ಇಲ್ಲ... ನಾವು ಚಿಕ್ಕವರಿದ್ದಾಗ ಅಮ್ಮ ಪೂಂಬೆ ಚಟ್ನಿ, ಪೊಂಗಾರೆ ಹೂವಿನ ಗಶಿ, ಕೆಸವಿನ ದಂಟಿನ ಗೊಜ್ಜು ಮಾಡ್ತಾ ಇದ್ಲು ನೆನಪಿದೆಯಾ? ನಿಂಗೆ ನುಗ್ಗೆ ಹೂವಿನ ಬುತ್ತಿ ಭಾಳಾ ಸೇರ್ತಾ ಇತ್ತು...

* ಅಬ್ಬಾ... ನುಗ್ಗೆ ಗಿಡಕ್ಕೆ ಅದೆಷ್ಟು ಕಂಬಳಿಹುಳು... ಮನೆತುಂಬ ಹರಿತಾ ಇದ್ವು... ರಾಮಣ್ಣ ಅಂತು ಕಂಬಳಿ ಹುಳುವಿನ ಗಶಿ ಮಾಡು ಅಂತ ಅಮ್ಮನ್ನ ರೇಗಿಸ್ತಿದ್ದ... ನೆನಪಿದೆಯಾ?

– ಹಷ್ಟು... ನುಗ್ಗೆ ಸಿಮ್ಮೂರಲ್ಲಿ ದಂಡಿಯಾಗಿದೆ... ಅದನ್ನೇ ಯಾಕೆ ಮಾಡಬಾರದು ನುಗ್ಗೆ ಹೂವಿನ ಬುತ್ತಿ... ಹೆಸರು ಚೆನ್ನಾಗಿದೆ...

* ಯಾ... ಯಾ... ಟ್ರೈ ಮಾಡ್ತೀನಿ...

– ಯಾವಾಗ ಫಂಕ್ಷನ್ನು?

* ಇನ್ನೂ ಎರಡು ತಿಂಗಳಿದೆ. ಮೊದಲು ಒಂದೊಂದನ್ನೇ ನಾನು ಮನೇಲೀ ಟ್ರೈ ಮಾಡ್ತೀನಿ... ಆಮೇಲೆ ಅಲ್ಲಿ... ರಿಪೀಟ್ ಮಾಡ್ತಿನೀ...

– ನುಚ್ಚಿನುಂಡೆ, ಪೆಸರೆಟ್ಟು, ಗೊಜ್ಜವಲಕ್ಕಿ, ಹುಗ್ಗಿ, ಕಜ್ಜಾಯ...

* ಸಾಕೇ... ನಾನ್‌ವೆಜ್ ಬೇರೆ ಇರುತ್ತೆ... ಬಿರಿಯಾನಿ, ಕಬಾಬು, ಕೂರ್ಮಾ...

– ಕಷ್ಟಕಷ್ಟ... ಅದರ ಮುಂದೆ ನನ್ನ ತಂಬುಳಿ ಯಾರು ತಿಂತಾರೆ?

* ನಿಂಗೊತ್ತಾಗಲ್ಲ... ಅದರ ಕಿಮ್ಮತ್ತು ಪ್ರೆಸೆಂಟೇಶನ್ ಮೇಲೆ ಹೋಗುತ್ತೆ... ಆರ್ಟ್‌ವರ್ಕ್ ಮಾಡಿರೋ ಗಡಿಗೇಲೆ ತಂಬುಳಿನ ತುಂಬಿಸಿ ಅದರ ಕುತ್ತಿಗೆಗೆ ಒಂದು ಗೊಂಡೆ ಹೂವಿನ ಹಾರ ಕಟ್ಟಿ... ಆ ಮಡಕೇಲಿ ಒಂದು ಮರದ ಸೌಟು ಹಾಕಿದ್ರಾಯ್ತು... ಬೇಕಾದ್ರೆ ಆ ಮಡಕೆ ಸುತ್ತ ಎರಡೆಳೆ ರಂಗೋಲಿ ಎಳೆದ್ರೂ ಆಯ್ತು... ಹಹಹ...

– ಅದ್ಯಾಕಮ್ಮಿ ನಗ್ತೀಯಾ? ನಮ್ಮ ತಂಬುಳಿಗೆ ಅಷ್ಟು ಸಿಂಗಾರ ಮಾಡಿಸಿಕೊಳ್ಳೊ ಯೋಗ್ಯತೆ ಇದೆ... ಉಂಡವರು ಅದನ್ನು ಕೊಂಡಾಡದಿದ್ದರೆ... ಕೇಳು...

* ಹಹಹ... ಹಹಹ... ಓ.ಕೆ... ಥ್ಯಾಂಕ್ಸ್... ಭಾವಂಗೆ ಒಂಚೂರು ಕೊಡು... ಮಾತಾಡ್ತೀನಿ...

– ಅವರಾ? ನಾಕು ತಾಳಿಪಿಟ್ಟು ಎರಡು ಬಟ್ಟಲು ಕಾಯಿಚಟ್ನಿ, ಬೆಣ್ಣೆ ಹಾಕಿಕೊಂಡು, ಒಂದು ಪಾವು ಕಾಫಿ ಇಟ್ಕೊಂಡು ಭಾಷಣಕ್ಕೆ ರೆಡಿಯಾಗ್ತಾ ಇದಾರೆ...

* ಹಹ್ಹ... ಹೌದಾ... ಬೆಳಿಗ್ಗೆ ಬೆಳಿಗ್ಗೆ...

– ಹೂಂ... ಅದೇನೋ... ಜಾಗತೀಕರಣದ ಸೆಮಿನಾರಂತೆ... ನಾನು–ನೀನು ಮಾತಾಡೋದು ಕೇಳಿಸಿಕೊಂಡು... ಅದೇನೋ ಕೈ–ಬಾಯಿ ಮಾಡ್ತಾ ಇದಾರೆ... ತಡೀ... ಅದೇನು ಹೇಳ್ತಾ ಇದಾರೋ... ಕೇಳಿ ಹೇಳ್ತೀನಿ.

* ಹಹ್ಹ... ಏನಂತೆ? ಏನಂತೆ?

– ಇನ್ನೇನು? ಅದೇ. ತಂಬುಳಿಯಿಂದ ಜಾಗತೀಕರಣ ಎದುರಿಸಬಹುದಂತೆ... ತಂಬುಳಿ v/s ಜಾಗತೀಕರಣ... ಇದು ಅವರ ಇವತ್ತಿನ ಭಾಷಣದ ಶೀರ್ಷಿಕೆ ಅಂತೆ.. ಅಣಗಿಸೋದಕ್ಕೆ... ಇತಿ... ಮಿತಿ... ಇಲ್ಲ... ನೀನೇ ಮಾತಾಡು... ಕೊಡ್ಲಾ?

●

# ಕೂಡಿ ಬಾಳಬೇಕು... ಹಂಚಿ ತಿನ್ನಬೇಕು...

* ಹಲೋ... ಪಿಂಕಿ... ಮೇ... ಅಮೀನಾ ಆಂಟೀ...

– ಹೇಳಿ ಆಂಟೀ...

* ಸ್ವಲ್ಪ ಪಪ್ಪಾಗೆ ಕೊಡ್ತಿಯಾ? ನಂಗೆ ತುಂಬ ಟೆನ್‌ಷನ್ ಆಗ್ತಾ ಇದೆ... ನಮ್ಮ ನಸೀಮಾ ಟ್ರೈನ್‌ಗೆ ಬರಬೇಕಿತ್ತು. ಇನ್ನೂ ಬಂದಿಲ್ಲ.

– ಫೋನ್ ಮಾಡಿ ನೋಡಿದ್ರಾ?

* ಬೇಟೀ... ನಮ್ದುಕೆ ಮೊಬೈಲ್ ರೀಚ್ ಆಗ್ತಾ ಇಲ್ಲ. ನಿಮ್ದುಕೆ ಟ್ರೈ ಮಾಡಿ ನೋಡ್ತೀರಾ?

– ನೋಡ್ತೀನೀ ಆಂಟೀ... ಒಂದೊಂದು ಸಲ ಟ್ರೈನ್ ಲೇಟ್ ಆಗುತ್ತೆ... ಗಾಬರಿ ಆಗಬೇಡಿ...

* ಬೇಟೀ... ಬಾಂಬೆನಲ್ಲಿ ಗಲಾಟಾ ಆಗಿದೆ ಟೀವೀ ನೋಡಿದ್ರಾ... ಹೊಡ್ದು ಹೊಡ್ದು ಹಾಕಿದಾರೆ... ನಮ್ದುಕೆ ಬೇಟೀ ಅಲ್ಲೇ ಹೋಗಿತ್ತು. ಏನಾಗೈತೋ...

– ಓಹ್... ನಸೀಮಾ ಇಂಟರ್‌ವ್ಯೂಗೆ ಹೋಗಿದ್ಲು ಅಲ್ವಾ? ಶರ್ಮಿಳಾನೂ ಅದೇ ಟ್ರೈನ್‌ನಲ್ಲಿ ಬರ್ತಾಳೆ... ಅವಳಿಗೂ ಇಂಟರ್‌ವ್ಯೂ ಬಂದಿತ್ತು... ಇಬ್ಬರೂ ಮಾತಾಡಿಕೊತಾ ಇದ್ರು... ಏನೊ ಮಾಡಿಕೊಂಡು ಬರ್ತಾರೆ... ನೀವು ಗಾಬರಿ ಆಗಬೇಡಿ... ಪಪ್ಪಂಗೆ ಕರಿತೀನೀ... ನೀವು ಮಾತಾಡಿ...

* * *

* ಹಲೋ... ರಾಜಕ್ಕ ಹ್ಯಾಗಿದಿರಾ? ಮೊನ್ನೆಯಿಂದ ನಿಮ್ಮ ಫೋನು ಟ್ರೈ ಮಾಡ್ತಾ ಇದೀನೀ... ಸಿಗಲೇ ಇಲ್ಲ... ಎಲ್ಲ ಆರಾಮು ತಾನೆ...

– ಎರಡು ದಿವ್ಸ ಆಯ್ತು ಕಣೇ, ಫೋನು ಟೀವಿ ಎಲ್ಲಾ ಬಂದು. ಇವತ್ತು ಯಥಾಸ್ಥಿತಿಗೆ ಬಂತು ನೋಡು. ನಮ್ಮ ಏರಿಯಾದಲ್ಲಿ ಏನೂ ಗಲಾಟೆ ಇಲ್ಲ... ಯಾಕೆಬೇಕು... ನಾವ್ಯಾರೂ ಎರಡು ದಿನ ಹೊಸಲು ದಾಟಲಿಲ್ಲ, ಹಾಲು ಕೂಡ ತರೋಕೆ ಹೋಗಲಿಲ್ಲ... ಕಾಫಿ ಇಲ್ದೆ

ಹಂಗೇ ದಿವ್ಸ ಕಳಿದ್ವು... ಗುಂಡು ಹಾಕಿ ಸಾಯ್ಸಿದ್ದು ನಿಂಗೊತ್ತಲ್ಲ... ಪಾಪ... ಒಳ್ಳೊಳ್ಳೆ ಪೊಲೀಸರು ಎಲ್ಲ ಗಲಾಟೇಲಿ ಸತ್ತಿದಾರಂತೆ... ಆ ಹುಡುಗ್ರನ್ನು ಕಂಡ್ಯಾ? ನಂ ಮಾಣದೇ ಸೈಜು! ಹ್ಯಾಂಗೆ ಹೊಡೆದಾಕಿದಾರೆ ನೋಡಿದ್ಯಾ? ಮನುಷ್ಯನ ಜೀವ ಅಂದ್ರೆ ಸೊಳ್ಳೆ ಜೀವಕ್ಕೆ ಸಮ ಆತು. ಯಾರ ಮ್ಯಾಲೆ ಕ್ವಾಪಕ್ಕೋ ಯಾರನ್ನೊ ಬಡಿಯೋದ? ನಂಗೆ ಎರಡು ದಿವಸ ಊಟ ಸೇರಲಿಲ್ಲ ಕಂಡ್ಯಾ? ಜೀವ ಕೈಯಲ್ಲಿ ಹಿಡ್ಕೊಂಡು ಬದುಕೋದು... ನಂಗೆ ಈ ಊರೇ ಬೇಡ... ನಾವು ಅಲ್ಲಿಗೆ ಬರೋದೇ ಸೈ... ಇಲ್ಲಿ ಎಲ್ಲ ಕ್ಷೇಮ ಅಂತ ಅಣ್ಣಂಗೆ, ಅತ್ತಿಗೆಗೆ ತಿಳಿಸು... ಬರ್ಲಾ? ಮತ್ತೆ ನಾನೇ ನಾಳೆ ಫೋನ್ ಮಾಡ್ತಿನೀ... ಹೊಸ ಸಮಾಚಾರ ಏನಾದ್ರೂ ಇದ್ರೆ ತಿಳಿಸ್ತೆ... ಆಯ್ತಾ? ಬರ್ಲಾ?

* * *

* ಹಲೋ... ಜಾನೂ... ಹೇಗಿದ್ದೀಯಾ?

– ಯಾವಾಗ ಬಂದೆ?

* ಇವತ್ತು...

– ಟೀವಿ ನೋಡಿದ್ಯಾ?

* ಇಲ್ಲ ಕಣೇ... ಈಗ ಬಂದೆ... ಟೂರ್‌ನ ಮಧ್ಯದಲ್ಲೇ ಕ್ಯಾನ್ಸಲ್ ಮಾಡಿದ್ರು... ಪೂನಾದಿಂದಾನೇ ವಾಪಸು ಬಂದುಬಿಟ್ವು... ತುಂಬಾ ಗಲಾಟೆ ಅಂತಲ್ಲ? ಟೆರರಿಸ್ಟ್ ಅಟ್ಯಾಕ್ ಅಂತೆ... ಹೌದಾ?

– ಹೂಂ... ಟೀವಿ ನೋಡು... ಎಲ್ಲ ಕವರ್ ಮಾಡಿದಾರೆ... ಹಾರಿಬಲ್... ಸೋ ಹಾರಿಬಲ್... ಟೆರಿಬಲ್...

* ಹೌದಾ? ಅಷ್ಟೊಂದು ಗಲಾಟೆ ಆಗಿದೆಯಾ?

– ಒಬ್ಬ ಟೆರರಿಸ್ಟ್‌ನ ಹಿಡಿದಿದಾರೆ... ಅವನಂತು ಥೇಟ್ ನಮ್ಮ ಸುಲೋಚನಕ್ಕನ ಅಳಿಯ ಇದ್ದಂಗೆ ಇದಾನೆ...

* ಹೋಗೇ...

– ಅಲ್ವೇ... ನೋಡೋಕೆ ಹೇಳಿದ್ದು... ಅದೇ ರೂಪು ಅದೇ ಭಾಪು... ಡಿಟ್ಟೋ... ಅದೇ... ಚೂರೂ ವ್ಯತ್ಯಾಸ ಇಲ್ಲ... ಅಕ್ಕ ಫೋನು ಮಾಡಿದ್ಲು... ಅವಳೂ ಹಂಗೇ ಅಂದ್ಲು... ಆದ್ರೆ ಇವನು ಯಾರೋ ಬೇರೆ... ನೀ ಬೇಕಾದ್ರೆ ನೋಡು...

* ಹೌದಾ? ಈಗ್ಲೆ ಟೀವಿ ಹಾಕಿ ನೋಡ್ತಿನೀ... ಆಮೇಲೆ ಫೋನ್ ಮಾಡ್ತಿನೀ... ಓ.ಕೆ... ಬೈ...

* * *

* ಹಲೋ... ಹಲೋ...

– ಹಲೋ... ಹಲೋ... ಗೊತ್ತಾಯ್ತು ನೀನೇ...

* ಡಿಶುಂ ಡಿಶುಂ ಡಿಶುಂ...

– ಏನು ಹೊಸಾ ಅವತಾರಾನಾ? ಟೆರರಿಸ್ಟಾ?

* ಎಸ್‌ಎಂಎಸ್ ಸಿಕ್ತಾ?

– ನಾನೂ ಕಳಿಸಿದ್ದೆ... ಸಿಕ್ತಾ?

* ಐ ಹ್ಯಾವ್ ರಿಸೀವ್ಡ್ ಫಿಫ್ಟಿ ಎಸ್‌ಎಂಎಸ್... ಬಟ್ ನೀನು ಕಳಿಸಿದ್ದು ಚೆನ್ನಾಗಿತ್ತು...

– ಹ್ಯಾಗೆ ಅಟ್ಯಾಕ್ ಮಾಡಿದಾರೆ... ವೆರಿ ಇನ್‌ಹ್ಯೂಮನ್... ದೆರೀಸ್ ನೋ ಸೆಕ್ಯುರಿಟಿ... ಎನೀ ವೇರ್ ದೇ ಕ್ಯಾನ್ ಕಮ್ ಅಂಡ್ ಅಟ್ಯಾಕ್...

* ಹೋಟೆಲ್ ನೋಡಿದ್ದಾ? ಹೌ ಬ್ಯೂಟಿಫುಲ್ ಒಳ್ಳೆ ಪ್ಯಾಲೆಸ್ ಇದ್ದಂಗೆ ಇದೆ... ಅಲ್ಲಿ ರೂಮಿಗೆ ಎಷ್ಟು ತಗೊತಾರೋ?

– ಹೂಂ... ಇರುತ್ತೆ ಐವತ್ತು–ಅರವತ್ತು ಸಾವಿರ...

* ಪರ್ ಡೇ? ಮೈಗಾಡ್...

– ಅವೆಲ್ಲ ಸ್ಟಾರ್ ಹೋಟೆಲ್ಲುಗಳು... ದೇ ಚಾರ್ಜ್ ಹಂಡ್ರಡ್ ರೂಪೀಸ್ ಪರ್ ಒನ್ ಕಾಫಿ... ದೆನ್ ಮೀಲ್ಸ್, ಮೇಬೀ... ಫೈವ್ ಹಂಡ್ರಡ್ ಟು ಒನ್ ತೌಸಂಡ್ ಇರಬಹುದು!

* ಮೈಗಾಡ್... ಇಂಥ ಹೋಟೆಲ್ಲುಗಳೂ ಇರ್ತಾವಾ? ಟೀವೀಲೀ ನೋಡಿದ್ದೇ ಬಂತು... ನಮ್ಮೆ ಅಂಥ ಹೋಟೆಲ್‌ನ ಗೇಟ್ ಹತ್ರಾನೂ ಬಿಟ್ಕೊಳಲ್ಲ... ಬಿಡು... ನಮ್ಮೂರಲ್ಲಿ 'ನಿಸರ್ಗ' ಇದೆಯಲ್ಲ ಅದೇ ನಮಗೆ ಪ್ಯಾರಡೈಸು!? ಅಲ್ಲವೇ ಅಷ್ಟು ದುಡ್ಡು ಕೊಟ್ಟು ಅಂಥಾ ಹೋಟಲಲ್ಲಿ ಯಾರು ಇರ್ತಾರೆ?

– ಅದೇ ಕಣೇ... ಫಾರಿನರ್ಸು... ಅವರೇ ಜಾಸ್ತಿ. ಮತ್ತೆ ನಮ್ಮವರು ಅಂದ್ರೆ... ಬ್ಯುಸಿನೆಸ್‌ಮನ್‌ಗಳು, ಕ್ರಿಕೆಟ್‌ನವರು, ಬ್ಯೂರೊಕ್ರಾಟ್ಸ್, ಸೂಪರ್‌ಸ್ಪೆಷಲ್ ಡಾಕ್ಟರ್ಸ್... ದೊಡ್ಡದೊಡ್ಡ ಕಂಪನಿ ಸಿಇಓಗಳು, ಪಾಲಿಟೀಶೀಯನ್ಸ್, ಡ್ರಗ್ ಮಾಫಿಯಾ, ಲ್ಯಾಂಡ್ ಮಾಫಿಯಾದವರು... ಸಿನಿಮಾ ಸ್ಟಾರ್ಸ್... ಇಂಟರ್‌ನ್ಯಾಷನಲ್ ಲೆವೆಲ್ ಆರ್ಟಿಸ್ಟ್‌ಗಳು, ಜರ್ನಲಿಸ್ಟ್‌ಗಳು... ಅಂದ್ರೆ... ದೊಡ್ಡ ದೊಡ್ಡ ಕುಳಗಳು... ಸಾಫ್ಟ್‌ವೇರ್‌ನವರು, ಎಂಬಿಎ ಆದವರು... ದೊಡ್ಡ ದೊಡ್ಡ ಜನ... ಪ್ರಭಾವಿ ವ್ಯಕ್ತಿಗಳು ದುಡ್ಡಿದ್ದವರು... ಹಾಗಂತ... ಜಗಣ್ಣ ಹೇಳ್ದಾ... ಇಲ್ದೆ ಇದ್ರೆ ನಂಗೆಲ್ಲಿ ಗೊತ್ತು? ಯಾಕೆ? ಅಲ್ಲಿ ಹೋಗಿ ಇರೋಕೆ ಆಸೆನಾ?

* ಇಲ್ಲಪ್ಪ... ನಮ್ಮೂರ ನಿಸರ್ಗ ಪ್ಯಾರಡೈಸೇ ಸಾಕು. ನಾಕು ರುಪಾಯಿಗೆ ಕಾಫಿ, ಹನ್ನೆರಡು ರೂಪಾಯಿಗೆ ದೋಸೆ... ತಿಂದುಕೊಂಡು ನೂರು ವರುಷ ಬದುಕ್ತೀನೀ...

– ಸರಿಸರಿ... ಸಂಜೆ ಎಲ್ಲಿ ಸಿಗ್ತೀಯಾ?

* ನೀನೇ ಬಾ...

– ಉಹುಂ... ನೀನೇ ಬಾ...

* ಸರಿ... ಸೀಯೂ... ಓ.ಕೆ. ಬೈ...

* * *

– ಹಲೋ ಆಶಾ ಮೇಡಂ ಹೇಗಿದೀರಾ? ನಾನು ಸಂಜಯ್...

* ಗೊತ್ತಾಗಲಿಲ್ಲ...

– ನಾನು '–' ಪತ್ರಿಕೆ ರಿಪೋರ್ಟರ್... ಸಂಜಯ್ ಅಂತ. ಅವತ್ತು ಮೈಸೂರಿನಲ್ಲಿ ಸೆಮಿನಾರ್‌ನಲ್ಲಿ ನಿಮ್ಮನ್ನು ಭೇಟಿ ಮಾಡಿದ್ದೆ. ನೀವು ಸೆಮಿನಾರ್ ಆದ ಮೇಲೆ ಪದ್ಯ ಓದಿದ್ರೀ... ಆಮೇಲೆ ನಾನು ನಿಮ್ಮ ಹತ್ರ ಬಂದು...

* ಸಾರಿ ನೆನಪಾಗ್ತಾ ಇಲ್ಲ... ಪರವಾಗಿಲ್ಲ ಏನು ವಿಷಯ ಹೇಳಿ...

– ಏನಿಲ್ಲ ಮೇಡಂ, ನಮ್ಮ ಪೇಪರ್‌ಗೆ ನಾನೊಂದು ರೈಟ್‌ಅಪ್ ಮಾಡ್ತಾ ಇದೀನೀ... ಹತ್ತಾರು ಜನನ್ನ ಇಂಟರ್‌ವ್ಯೂ ಮಾಡಿ, ಬರೆಯೋಣ ಅಂತ ಇದೀನೀ...

* ಹೇಳಿ...

– ಈ ಭಯೋತ್ಪಾದನೆಯನ್ನು ಹೇಗೆ 'ಮಟ್ಟ' ಹಾಕೋದು ಅಂತ...

* ದಯವಿಟ್ಟು 'ಮಟ್ಟ' ಅನ್ನೋ ಶಬ್ದ ಬಳಸಬೇಡಿ! ಒಂದು ಪಾಸಿಟಿವ್ ಆದ ಶಬ್ದ ಬಳಸಿ. ನಾವು ಉಪಯೋಗಿಸುವ ಪದಗಳು ಯಾರನ್ನೋ ಕೆರಳಿಸೊ ಹಾಗೆ ಇರಬಾರ್ದು... ಅಲ್ಲವಾ?

ನೋಡಪ್ಪಾ... ತುಂಬಾ ಸರಳವಾಗಿ ಹೇಳಬೇಕು ಅಂದ್ರೆ... ಎಲ್ಲರೂ ಅವರವರ ಕೆಲಸಾನ ಸರಿಯಾಗಿ ಮಾಡಬೇಕು.

– ಅಂದ್ರೆ?

* ಮನೆಯಿಂದನೇ ಹೊರಡೋಣ. ನಮ್ಮ ಮಕ್ಕಳು ಟೆರರಿಸ್ಟ್ ಆಗದ ಹಾಗೆ ಕುಟುಂಬ ನೋಡಿಕೊಳ್ಳಬೇಕು. ಅಜ್ಜ–ಅಜ್ಜಿ ಮೊಮ್ಮಕ್ಕಳಿಗೆ ಏನು ಮಾಡಬೇಕು, ಏನು ಮಾಡಬಾರದು ಅಂತ ಎಳೆವಯಸ್ಸಿನಲ್ಲೇ ಮಕ್ಕಳನ್ನು ತಿದ್ದಿ ತೀಡಬೇಕು. ತಂದೆತಾಯಿಗಳು ದಾರಿತಪ್ಪಿದರು ಅಂದ್ರೆ ಮಕ್ಕಳು ದಾರಿತಪ್ಪಿದ ಹಾಗೆನೇ... ತಾವೇ ಮಕ್ಕಳಿಗೆ ಮಾದರಿಯಾಗಬೇಕು.

– ಆಮೇಲೆ?

* ಶಾಲೆಗೆ ಹೋದ ಮೇಲೆ ಗುರುಗಳು, ಮಕ್ಕಳು ಹೇಗೆ ಸಮುದಾಯದಲ್ಲಿ ಕೂಡಿ ಬಾಳಬೇಕು, ಹಂಚಿ ತಿನ್ನಬೇಕು ಅನ್ನೋದನ್ನು ಕಲಿಸಬೇಕು. ಭೂಗೋಳ, ವಿಜ್ಞಾನ, ಗಣಿತ,

ಕನ್ನಡ ಅಕ್ಷರ ಅ, ಆ, ಇ, ಈ ತಿದ್ದಿಸೋ ಮೊದಲು ಸುಳ್ಳು, ಮೋಸ, ದಗಾ, ವಂಚನೆ ಮಾಡದೆ ಆದಷ್ಟು ಸತ್ಯವಂತನಾಗಿ ಇನ್ನೊಬ್ಬರಿಗೆ ಆದಷ್ಟು ತೊಂದರೆ ಕೊಡದೆ ನ್ಯಾಯವಾಗಿ ಬಾಳೋದನ್ನ ಹೇಳಿ ಕೊಡಬೇಕು. ಹುಟ್ಟುತಾನೆ ಯಾರೂ ಟೆರರಿಸ್ಟ್ ಆಗಿ ಹುಟ್ಟಿಲ್ಲ ಅಲ್ಲವಾ?

– ಹೌದು ಮೇಡಂ... ಹೌದು. ನಾನು ಹದಿನೈದು ವರುಷ ಶಾಲೆ, ಕಾಲೇಜು ಅಂತ ಮಣ್ಣು ಹೊತ್ತಿದೀನೀ... ಮಾರ್ಕ್ಸ್ ಹ್ಯಾಗೆ ತೆಗಿಬೇಕು, ರ್‍ಯಾಂಕ್ ಹ್ಯಾಗೆ ಬರಬೇಕು, ಹ್ಯಾಗೆ ಕೆಲಸ ತಗೊಬೇಕು, ಹ್ಯಾಗೆ ದುಡ್ಡು ಸಂಪಾದಿಸೋದು ಅದೆಲ್ಲ ಹೇಳಿ ಕೊಡ್ತಾರೆ. ಸಂಪಾದಿಸಿರೋ ದುಡ್ಡನ್ನು ಹ್ಯಾಗೆ ವಿನಿಯೋಗಿಸಬೇಕು ಅದನ್ನು ಹೇಳಲ್ಲ... ದುಡ್ಡು ಕೈಗೆ ಬಂತೋ... ನಮಗೆ ಬೇರೆ ಯಾವ, ಯಾರ ಖಬರೇ ಬೇಡ! ಇರ್ಲಿ... ಹೇಳಿ ಮೇಡಂ...

* ಒಬ್ಬ ಟೆರರಿಸ್ಟ್ ಕೂಡ ಅವನು ಭಯೋತ್ಪಾದಕ ಆಗೋ ಮೊದಲು ಒಬ್ಬ ಒಳ್ಳೆಯ ಅಪ್ಪ, ಮಗ, ಗಂಡ, ಸೋದರ, ಪ್ರೇಮಿ, ಸ್ನೇಹಿತ ಆಗಿದ್ದ ಅನ್ನೋದನ್ನು ಮರಿಬಾರ್ದು. ಅವನು ಯಾಕೆ ಟೆರರಿಸ್ಟ್ ಆದ ಅನ್ನೋದನ್ನು ಸ್ಟಡಿ ಮಾಡಬೇಕು. ಆಮೇಲೆ ಅದರ ಆಧಾರದ ಮೇಲೆ ಪರಿಹಾರ ಕೈಗೊಳ್ಳಬೇಕು. ಟೀಚರು ಟೀಚ್ ಮಾಡ್ತಾ ಇಲ್ಲ... ಪೊಲೀಸರು ಇರೋದು ಯಾಕೆ? ರಾಜಕಾರಣಿಗಳ ತಲೆ ಕಾಯೋದಕ್ಕೇನು? ಪಾಲಿಟೀಶಿಯನ್ಸ್ ಇರೋದು ಯಾಕೆ? ದುಡ್ಡು ಹೊಡೆಯೋದಕ್ಕೇನು? ಧರ್ಮಗುರುಗಳು ಅವರ ಕೆಲ್ಸ ಬಿಟ್ಟು ಇನ್ನೆಲ್ಲಾ ಕೆಲ್ಸ ಮಾಡ್ತಾರೆ. ನ್ಯಾಯಾಧೀಶರು... ಅವರಾದ್ರೂ ಸತ್ಯವಂತರಾಗಿದಾರಾ? ಎದೆ ಮುಟ್ಟಿಕೊಂಡು ಹೇಳಲಿ... ನಾನು ಹೆಚ್ಚು, ನನ್ನ ಕುಟುಂಬ ಹೆಚ್ಚು, ನನ್ನ ಸಮುದಾಯ ಹೆಚ್ಚು, ನನ್ನ ರಾಜ್ಯ ಹೆಚ್ಚು, ನನ್ನ ದೇಶ ಹೆಚ್ಚು, ನನ್ನ ಭಾಷೆ ಹೆಚ್ಚು... ಎಲ್ಲಕ್ಕಿಂತ ನಾನು ನಂಬಿರೋದೆ ಹೆಚ್ಚು ಅಂತ ತಿಳಕೊಂಡು ವ್ಯವಹಾರ ಮಾಡೊಕೆ ಎಲ್ಲರೂ ಶುರುಮಾಡಿದರೆ ಏನು ಬಂದೋಬಸ್ತು ಮಾಡಿದ್ರೂ... ಯಾವ ಕಾನೂನು ತಂದ್ರುನೂ, ಏನು ಶಿಕ್ಷೆ ಕೊಟ್ರೂ... ಏನೂ... ಏನೂ... ಮಾಡೊಕಾಗಲ್ಲ... ನೀತಿಪಾಠ ಹೇಳ್ತಾ ಇದೀನೀ ಅಂತ ನಿನಗನ್ನಿಸಬಹುದು. ಈ ಅನೀತಿಯ ಪ್ರಪಂಚದಲ್ಲಿ ಏಗಿ ಸಾಕಾಗಿಹೋಗಿದೆ... ಬೇರೆ ದಾರಿನೇ ಇಲ್ಲ. ಕೂಡಿ ಬಾಳಬೇಕು, ಹಂಚಿ ತಿನ್ನಬೇಕು... ಬೇರೆ ದಾರಿನೇ ಇಲ್ಲ.

– ಒಬ್ಬ ಕವಿಯಾಗಿ ನೀವು ಏನು ಹೇಳೊಕೆ ಇಷ್ಟಪಡ್ತಿರಾ ಮೇಡಂ?

* ಕವಿ ಅಂದ್ರೆ ಯಾರು? ಸೂಕ್ಷ್ಮ ಸಂವೇದನೆ ಇರುವ ಮನುಷ್ಯ. ಪ್ರತಿಯೊಬ್ಬ ಮನುಷ್ಯನೊಳಗೂ ಒಬ್ಬ ಕವಿ ಇರ್ತಾನೆ. ಆ ಕವಿನ ಸಾಯೋಕೆ ಬಿಡಬಾರ್ದು... ಕವಿ ಎಂದೂ ಕೋವಿ ಹಿಡಿಯಲಾರ. ಕೇಡನ್ನು ಸೇಡು ಹಿಮ್ಮೆಟ್ಟಿಸೋದಕ್ಕೆ ಆಗುತ್ತಾ? ನೆವರ್... ಬೇಕಾದ್ರೆ ಒಂದು ಹಾಡು ಹಿಮ್ಮೆಟ್ಟಿಸಬಹುದೇನೋ... I am not sure but I wish... enough ... ಓ.ಕೆ. ಬೈ...

●

# ಕಟ್ಟುವುದು... ಕೆಡಹುವುದು...

* ಹಲೋ... ನಾನು ಕಣೇ ಶಮ್ಮು... ಚೆನ್ನಾಗಿದೀಯಾ?

– ಹೂಂ... ಹೇಳು... ಹೋದ ವರ್ಷ ಉಗಾದಿ ಹಬ್ಬದ ಹಿಂದಲ ದಿನ ನೀನು ಫೋನು ಮಾಡಿದ್ದು... ಬರೋಬರಿ ವರ್ಷಕ್ಕೆ ಬರ್ತಾ ಇದೆ... ಏನೇ, ಏನು ಸಮಾಚಾರ? ನಾನು ಯಾಕೆ ಜ್ಞಾಪಕಕ್ಕೆ ಬಂದುಬಿಟ್ಟೆ? ಶಿವಶಿವ ಏನು ಪುಣ್ಯವಂತೆನಪ್ಪಾ...

* ಅಯ್ಯೋ... ಹಂಗಲ್ಲ ಕಣೇ. ನಿನ್ನನ್ನು ತಿಂಗಳಿಗೆ ಒಂದು ಸಲಾನಾದ್ರೂ ಜ್ಞಾಪಿಸಿಕೊಳ್ತಾ ಇರ್ತೀನೀ... ನೀನೇ ಅಲ್ಲವಾ ನಂಗೆ ಕಜ್ಜಾಯ ಹೇಳಿಕೊಟ್ಟಿದ್ದು! ನಾನೀಗ ಕಜ್ಜಾಯ ಎಕ್ಸ್‌ಪರ್ಟ್.

– ಮಿಸ್ ಇಂಡಿಯಾ ಇದ್ದ ಹಾಗೆ ಮಿಸ್ ಕಜ್ಜಾಯಾನಾ?

* ಹಪ್ಪ ಹಪ್ಪ... ಅಯ್ಯೋ... ಎಂಥಾ ಸ್ಥಿತೀಲಿ ಇದ್ದೆ! ನನ್ನ ದಡಾ ಮುಟ್ಟಿಸಿದವಳೇ ನೀನು... ನಾನೀಗ ಮನೇಲೆ ಆರ್ಡರ್ಸ್ ತಗೊಂಡು ಕಜ್ಜಾಯ ಮಾಡ್ತೀನಿ... ಡಿಮಾಂಡ್ ಅಂದ್ರೆ ಡಿಮಾಂಡ್... ಸಪ್ಲೈ ಮಾಡೋಕೆ ಆಗಲ್ಲ... ಬಾಯಲ್ಲಿ ಇಟ್ಟರೆ ಕರಗಬೇಕು ಅಂಥಾ ಕೊಬ್ಬರಿ ಮಿಠಾಯಿನೂ ಮಾಡ್ತೀನಿ... ಈ ಉಗಾದಿಗೆ ಒಂದು ಮಳಿಗೇನೂ ಓಪನ್ ಮಾಡೋಣ ಅಂತ ಇದೀನೀ.

– ನಿನ್ನ ಗಂಡ?

* ಅಯ್ಯಾ... ಅವನಾ? ಅವನ ವಿಷ್ಯ ಕೇಳ್ತಿಯಾ... ರಾಜಕೀಯಕ್ಕೆ ಸೇರಿದಾನೆ...

– ಹೌದಾ? ಯಾವ ಪಾರ್ಟಿ?

* ಇನ್ಯಾವ ಪಾರ್ಟಿ? ಎಲ್ಲಿ ದುಡ್ಡು ಕೊಡ್ತಾರೋ... ಯಾರು ಹೆಂಡ ಕುಡಸ್ತಾರೋ ಆ ಪಾರ್ಟಿ... ನಾನು ಅವರನ್ನು ಮನೆಯಿಂದ ಹೊರಕ್ಕೆ ಹಾಕಿದೀನಿ... ಆದ್ರೂ... ಆವಾಗಾವಾಗ ಬಂದು ರಂಪ ರಗಳೆ ಮಾಡ್ತಾರೆ. ಸಂಪಾದನೆ ಚೆನ್ನಾಗಿದೆಯಲ್ಲ, ಕೊಡು ಅಂಥ ದುಡ್ಡು ಕಸ್ಕೊಂಡು ಹೋಗ್ತಾರೆ. ನಂಗಂತು ಕೊಂದೇ ಬಿಡಬೇಕು ಅನ್ನುವಷ್ಟು ಸಿಟ್ಟು ಬರುತ್ತೆ.

– ಏ... ಹಂಗೆಲ್ಲಾದ್ರೂ ಮಾಡಿಬಿಟ್ಟೀಯಾ?

* ನಾ ಜೈಲಿಗೋದ್ರು ಪರವಾಗಿಲ್ಲ... ಅವನನ್ನು...

– ಏ... ಏನಂಥ ಮಾತಾಡ್ತೀಯಾ?

* ಮತ್ತಿನ್ನೇನು? ಬೆಳಿಗ್ಗೆ ನಾಕು ಘಂಟೆಗೆ ಏಳ್ತೀನಿ... ತಿಕ್ಕೋದು, ತೀಡೋದು, ಗುಡಿಸೋದು, ಒರೆಸೋದು, ಒಗೆಯೋದು, ನೀರು ಸೇದೋದು, ಅಡಿಗೆ ಮಾಡೋದು, ಬಡಿಸೋದು... ಆಮೇಲೆ ಹುರಿಯೋದು, ಕರಿಯೋದು, ಕುಟ್ಟೋದು, ಬೀಸೋದು, ಲಟ್ಟಿಸೋದು, ಪ್ಯಾಕ್ ಮಾಡೋದು, ಸಪ್ಲೈ ಮಾಡೋದು... ರಾತ್ರಿ ಮಲಗೊ ಟೈಂ ಹನ್ನೆರಡಾಗುತ್ತೆ... ಅದೇ ಇವನು?! ಬೈಯೋದು, ಹೊಡೆಯೋದು, ಬಡಿಯೋದು, ಒದೆಯೋದು, ಕೆಡವೋದು, ಮುರಿಯೋದು, ಕದಿಯೋದು... ಸರ್ವನಾಶ ಮಾಡೋದು...

– ಹೋಗ್ಲಿ ಬಿಡು... ಏನು ಫೋನು ಮಾಡಿದ್ದು?

* ಅಡ್ವಾನ್ಸ್ ಆಗಿ ಹೇಳ್ತಾ ಇದೀನಿ ನನ್ನ ಮಳಿಗೇನ ನೀನೇ ಉದ್ಘಾಟನೆ ಮಾಡಬೇಕು...

– ಖಂಡಿತ... ಇನ್ನೂ ಟೈಂ ಇದೆಯಲ್ಲ... ಬರ್ತೀನಿ...

* ಬರೀ ನಂದೇ ಆಯ್ತು... ಏನು ತಿಂಡಿ?

– ನೋ... ತಿಂಡಿ...

* ಯಾಕೆ?

– ಒಂದು ಪ್ರೊಟೆಸ್ಟ್ ಇದೆ... ಅದಕ್ಕೆ ಹೊರಟಿದೀನಿ...

* ಏನು? ಏನು?

– ಪ್ರೊಟೆಸ್ಟ್... ಅಂದ್ರೆ ಪ್ರತಿಭಟನೆ ಮಾಡೋಕೆ ಹೋಗ್ತಾ ಇದೀನಿ...

* ಹೂಂ... ಗೊತ್ತಾಯ್ತು... ನಾನು ಪ್ರತಿದಿನ ಮನೇಲಿ ಅದನ್ನೇ ಮಾಡೋದು... ಯಾಕೆ ಪ್ರೊಟೆಸ್ಟು?

– ಟಿ.ವಿ. ನೋಡಲ್ವಾ?

* ಪುರುಸೊತ್ತಿಲ್ಲ... ಕೆಲ್ಸಾನೇ ಆಗುತ್ತೆ... ಕಣೇ...

– ಪೇಪರು ಓದೋಲ್ವಾ?

* ಪುರುಸೊತ್ತಿಲ್ಲ... ಬರೀ ಕೆಲ್ಸಾನೇ ಆಗುತ್ತೆ ಕಣೇ... ಹೊಟ್ಟೆಪಾಡು... ನಿಂಗೊತ್ತಿದೆ ಅಲ್ವಾ? ನನ್ನ ಗಂಡ ಒಂದು ಪೈಸಾ ಕೊಡೋಲ್ಲ... ನನ್ನ ಹತ್ರ ಇದ್ದದ್ದೂ... ನಾನು ಕಷ್ಟಪಟ್ಟು ದುಡಿದಿದ್ದನ್ನೂ ಕಸ್ಕೊಂಡು ಹೋಗ್ತಾನೆ... ನಿಂದೇನೋ ಕಮಿಟಿ ಇದೆಯಲ್ಲ... ನಂಗೆ ಹೇಗಾದ್ರೂ ಒಂದು ಡೈವೋರ್ಸ್ ಕೊಡಿಸಿಬಿಡು...

– ...ಹ್ಞಾಂ... ಹ್ಞಾಂ... ಏನಂದೆ?!

* ಹೊಂದಾಣಿಕೆ ವಿಷಯ ಮಾತ್ರ ಎತ್ತಬೇಡ... ನಂಗೆ ಏಗಿ ಸಾಕಾಗಿಹೋಗಿದೆ... ಅವನು ಮನುಷ್ಯ ಜಾತಿಗೆ ಸೇರಿದವನೇ ಅಲ್ಲ... ಪಿಶಾಚಿ!

– ನಿಮ್ಮಕ್ಕ ದೊಡ್ಡ ಲಾಯರ್... ಅವಳ ಹತ್ರ...

* ಅವಳಾ? ಮದುವೆ ಮುರಕೊಳ್ಳೋದು ನಮ್ಮ ಸಂಸ್ಕೃತಿ ಅಲ್ಲ ಅಂತ ನಂಗೇ ಉಪದೇಶ ಮಾಡೋಕೆ ಬಂದ್ಲು... ನಾ ಬಿಡ್ತಿನಾ? ಅದೇನು ಫೀಸು ತಕ್ಕೋತಿಯೋ ತಕ್ಕೋ ಕೊಡ್ತೀನಿ... ಉಪದೇಶ ಮಾಡಬೇಡ ಅಂತ ಅಂದೆ. ಸಂಸ್ಕೃತಿ ಅಂತೆ ಸಂಸ್ಕೃತಿ...

– ಹೂಂ.... ಸಂಸ್ಕೃತಿನ ಕಾಪಾಡೋ full contract ನಮ್ಮ ಹೆಣ್ಣುಮಕ್ಕಳಿಗೇ ಅಲ್ವಾ?

* ಅಲ್ಲವೇ... ನನ್ನ ಗಂಡ ತಿಂತಾನೆ, ಕುಡಿತಾನೆ, ಇಸ್ಪೀಟು ಆಡ್ತಾನೆ. ಸೂಳೇರ ಹತ್ರಾನೂ ಹೋಗ್ತಾನೆ, ಅವರಮ್ಮನ ಆಸ್ತಿ ನುಂಗಿಹಾಕಿದಾನೆ... ಮೈತುಂಬ ಸಾಲ ಮಾಡ್ಕೊಂಡಿದಾನೆ... ದೊಡ್ಡ ಗೂಂಡಾ... ಎಲ್ಲರನ್ನು ಹೆದರಿಸ್ತಾನೆ, ಬೆದರಿಸ್ತಾನೆ... ಈ ಸಲ ಅದ್ಯಾವುದೋ ಪಾರ್ಟಿಯಿಂದ ಎಲೆಕ್ಷನ್‌ಗೆ ಬೇರೆ ನಿಲ್ತಾನಂತೆ... ಇನ್ನೂ ಒಂದು ವಿಷ್ಯ ಹೇಳ್ತೀನಿ ಕೇಳು... ರಾತ್ರಿ ಹೊತ್ತು ಯಾವಾಗಂದ್ರೆ ಆವಾಗ ಫೋನು ಬರ್ತಾ ಇರುತ್ತೆ... ಇದ್ದಕ್ಕಿದ್ದ ಹಾಗೆ ಮಧ್ಯರಾತ್ರಿ ಎದ್ದು ಹೋಗ್ತಾನೆ... ಅವನದ್ದು ದೊಡ್ಡ ಪಟಾಲಂ ಇದೆ... ಎಂಥೆಂಥಾ ಕಾರುಗಳು ಬರುತ್ತೆ ಗೊತ್ತಾ? ಇದ್ದಕ್ಕಿದ್ದ ಹಾಗೆ ಯಾರೋ ಬಂದು ಕರ್ಕೊಂಡು ಹೋಗ್ತಾರೆ... ನಾಕೋ ಐದು ಮೊಬೈಲ್ ಇಟ್ಕೊಂಡಿದಾನೆ... ಒಂದು ನಾಕು ದಿನ ರಾಜ ಇದ್ದಂಗೆ ಇರ್ತಾನೆ, ಜೇಬು ತುಂಬ ದುಡ್ಡು... ತಗೋ ನಿಂಗೂ ಅಂತ ಐನೂರು ಐನೂರು ರೂಪಾಯಿ ನೋಟು ನನ್ನ ಮುಖದ ಮೇಲೆ ಬಿಸಾಕಿ ಹೋಗ್ತಾನೆ... ತಗೋ ನಾಕೇ ದಿನ... ಆಮೇಲೆ ಬರಿಗೈ... ಕುಡಿದು ಬಂದು ರಂಪಾಟ ಮಾಡ್ತಾನೆ... ನಾಳೆ ದಿನ ಮಂತ್ರಿಯಾಗ್ತೀನಿ ಕಣೇ... ಎಲೆಕ್ಷನ್‌ಗೆ ನಿಲ್ತೀನಿ ಕಣೇ... ಅಂತ ಬಡಬಡಿಸ್ತಾನೆ...

– ಶಮ್ಮು... ನೀನೇ ಇದನ್ನು ಸಾವಿರ ಸಲ ಹೇಳಿದೀಯಾ... ಎಲ್ಲ ನಂಗೊತ್ತಿದೆ ಕಣೇ...

* ಮತ್ತೆ ಹೇಗಾದ್ರು ಮಾಡಿ ಒಂದು ಡೈವೋರ್ಸ್ ಕೊಡಿಸಿಬಿಡು...

– ನಾನು ಅದಾಗಲೇ ಟ್ರೈ ಮಾಡಿದ್ನಲ್ಲ... ನಿನ್ನ ಗಂಡ ಒಪ್ತಾ ಇಲ್ಲವಲ್ಲ... ಇನ್ನೊಂದು ಸಲ ನನ್ನ ಹೆಂಡ್ತಿ ಸುದ್ದಿಗೆ ಬಂದ್ರೆ ನೋಡಿ... ಅಂಥಾ ನಂಗೇ ಧಮಕಿ ಕೊಟ್ನಲ್ಲ... ಅಯ್ಯೋ ಕೋರ್ಟು, ಕಚೇರಿ ಕಟ್ಲೆ... ಅಷ್ಟು ಸುಲಭ ಅಲ್ಲ... ನಿನ್ನ ಗಂಡ ಪಿಶಾಚಿನೇ ಇರಬಹುದು ಆದ್ರೆ... ಅದನ್ನು ನೀನು ಪ್ರೂವ್ ಮಾಡಬೇಕು... ಪಿಶಾಚಿ ಅಂತ...

* ಸುಮ್ಮನೆ ಮೆರವಣಿಗೆ ತೆಗೆಯೋದು... ಧಿಕ್ಕಾರ ಕೂಗೋದು... ಅದ್ಯಾರೋ ಡಿ.ಸಿ.ಗೋ ಪಾಸಿಗೋ ಅರ್ಜಿ ಕೊಡೋದು... ನಿನ್ನ ಪ್ರತಿಭಟನೆನೆಲ್ಲ... ಕಸದ ಬುಟ್ಟಿಗೆ

ಹಾಕು... ದೊಡ್ಡ ದೊಡ್ಡ ಭಾಷಣ ಬಿಗೀತೀರಾ... ಹಾರ ಹಾಕಿಸಿಕೊಳ್ತೀರಾ... ಪೇಪರ್‌ನಲ್ಲಿ ಫೋಟೋ ಬರುತ್ತೆ... ಅಷ್ಟೇ... ನಿನ್ನ ಸಾಧನೆ...

– ಶಮ್ಮು... ಯಾಕೆ ಹೀಗೆ ಮಾತಾಡ್ತಿಯಾ? ಇಷ್ಟು ದೊಡ್ಡ ಜಗತ್ತಿನಲ್ಲಿ... ನಾನಾದ್ರೂ ಎಷ್ಟರವಳು... ಬರೀ ಅನ್ಯಾಯಾನೇ, ಅನಿಷ್ಟಾನೇ ತುಂಬಿ ತುಳುಕ್ತಾ ಇರಬೇಕಾದ್ರೆ ಯಾವುದರ ವಿರುದ್ಧ ಅಂತ ದನಿ ಎತ್ತಲಿ? ನಾಕು ಜನ ಸೇರಿ ಘೋಷಣೆ ಕೂಗ್ತೀವಿ... ಬಿಸಿಲಿನಲ್ಲಿ ಬಾಡಿ ಮನೆಗೆ ಬರ್ತೀವಿ... ಮನೇಲೂ ಬಯ್ಸಿಕೊಳ್ತೀವಿ... ಆದ್ರೆ ತೆಪ್ಪಗೆ ಇರೋದಕ್ಕಿಂತ ಕೂಗೋದು ವಾಸಿ ಅಂತ ಅನ್ಸುತ್ತೆ... ನಿಂಗೆ ಕಜ್ಜಾಯ ಚೆನ್ನಾಗಿ ಮಾಡೋಕೆ ಹೇಳಿಕೊಟ್ಟೋಳೇ ನಾನು... ಅಲ್ವಾ? ನಿನ್ನ ಕಾಲ ಮೇಲೆ ನೀನು ನಿಂತಿದೀಯಾ... ತುಂಬ ಸಂತೋಷ... ನಿನ್ನ ಮಳಿಗೆ ಉದ್ಘಾಟನೆಗೂ ಬರ್ತೀನಿ... ಅಷ್ಟೇ... ಕಣೇ ನನ್ನಿಂದ ಆಗೋದು... ಅಷ್ಟಾದ್ರೂ... ಮಾಡ್ತಿದೀನಲ್ಲ... ನಂಗೆ ಥ್ಯಾಂಕ್ಸ್ ಹೇಳು...

* ಅದೇನೋ... ಪ್ರತಿಭಟನೆ ಅಂದೆಯಲ್ಲ...

– ಅದೇ ಕಣೇ ಹೆಣ್ಣುಮಕ್ಕಳು ಪಬ್‌ಗೆ ಹೋಗ್ತಾರೆ ಅಂತ ದೊಡ್ಡ ಗಲಾಟೆ... ಮೊನ್ನೆ ಶನಿವಾರ ಹಾಗೆ ಪಬ್‌ಗೆ ಹೋದೋರನ್ನು ಅಟ್ಟಾಡಿಸಿಕೊಂಡು ಹೊಡೆದ್ರು... ಅದೂ... ಹೆಣ್ಣುಮಕ್ಕಳನ್ನು...

* ಪಬ್ ಅಂದ್ರೆ ಬಾರಾ? ಹೆಂಡದಂಗಡಿನಾ?

– ಅದೇನೋ... ಸರಿಯಾಗಿ ನಂಗೂ ಗೊತ್ತಿಲ್ಲ... ಹೆಣ್ಣುಮಕ್ಕಳು ಗಂಡು ಮಕ್ಕಳು ಸೇರಿ ಕುಡಿಯೊ ಜಾಗ ಅನ್ಸುತ್ತೆ!

* ಏನೇ... ಹೆಣ್ಣು ಮಕ್ಕಳು ಕುಡಿತಾರಾ?

– ಹೆಜ್ಜೆ ಹೆಜ್ಜೆಗೂ ಹೆಂಡದಂಗಡಿಗಳಿವೆ, ಬಾರ್‌ಗಳಿವೆ... ಕೈತುಂಬ ದುಡ್ಡಿದೆ... ಫಾರಿನ್ನು ಲೋಕಲ್ಲು... ಹೆಂಡದ ಹೊಳೇನೆ ಹರಿತಾ ಇದೆ... ಆದ್ರೆ ಒಂದು ಬೊಗಸೆ ಎತ್ತಿಕೊಂಡು ಕುಡಿಬಾರ್ದು ಅಂತ ಫತ್ವಾ ಹೊರಡಿಸಿದ್ರೆ ಹ್ಯಾಗೆ? ಗಂಡಸರು, ಹೆಂಗಸರು, ಮಕ್ಕಳು... ಹಿರೇರು... ಕಿರೇರು... ಯಾವುದೂ ಲೆಕ್ಕ ಇಲ್ಲ... ಕುಡಿಯೋದಷ್ಟೇ ಪಕ್ಕಾ... ಹಪ್ಪ... ಹಪ್ಪ...

* ಹಪ್ಪ ಹಪ್ಪ... ಸರೀನಮ್ಮಾ... ಬರ್ತೀನೀ...ಬರ್ಲಾ?

●

# ಇದೇ ಲೇಖಕಿಯ ಇತರ ಕೃತಿಗಳು:

ನಾ ಬರುತ್ತೇನೆ ಕೇಳು (ಕವನ ಸಂಕಲನ-೧೯೮೭)
ಚಂದ್ರನನ್ನು ಕರೆಯಿರಿ ಭೂಮಿಗೆ (ಕವನ ಸಂಕಲನ-೧೯೯೧)
ಹೊಳೆ ಮಗಳು (ಕವನ ಸಂಕಲನ-೧೯೯೬)
ಸ್ತ್ರೀಲೋಕ (ಕಾದಂಬರಿ-೧೯೯೬)
ಆಕಾಶ ಮಲ್ಲಿಗೆ (ಆಯ್ದ ನೂರು ಕವನಗಳು-೨೦೦೦)
ಜಾತ್ರೆಯಲ್ಲಿ ಶಿವ (ಕವನ ಸಂಕಲನ-೨೦೦೨)
ಕಾಡುಲಿಲ್ಲಿ ಹೂವುಗಳು (ಈವರೆಗಿನ ಕವನಗಳು-೨೦೦೬)
ಹಳ್ಳಿಯ ದಾರಿ (ಆಯ್ದ ೫೦ ಕವನಗಳು-೨೦೧೧)

ಸಂಪಾದನೆ:

ಕವಿತೆ-೧೯೯೭(ಕರ್ನಾಟಕ ಸಾಹಿತ್ಯ ಅಕಾಡೆಮಿಗಾಗಿ)
ಮುಡಿ ಮಲ್ಲಿಗೆ (ಮಹಿಳಾ ಸಾಹಿತ್ಯ ಸ್ಪಂದನ-೧೯೯೨)

ಸಹ ಸಂಪಾದನೆ:

ಹಣತೆ (ಜಿ.ಎಸ್.ಎಸ್. ಅಭಿನಂದನ ಗ್ರಂಥ-೨೦೦೦)
ಸುವರ್ಣ ಕಾವ್ಯ (ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಾಗಿ-೨೦೦೬)

# ನಮ್ಮ ಪ್ರಕಟಣೆಗಳು

## ಕಥಾ ಸಂಕಲನ

| | | | |
|---|---|---|---|
| *1. | ಕರ್ಪೂರದ ಕಾಯದಲ್ಲಿ | ಡಾ. ರಾಜಶೇಖರ ನೀರಮಾನ್ವಿ | 15/- |
| *2. | ನೀರಮಾನ್ವಿ ಕಥೆಗಳು | ಡಾ. ರಾಜಶೇಖರ ನೀರಮಾನ್ವಿ | 15/- |
| *3. | ನಾರೀ ಹಳ್ಳದ ದಂಡೆಯಲ್ಲಿ | ಚಂದ್ರಕಾಂತ ವಡ್ಡು | 15/- |
| *4. | ಮಣ್ಣಿನ ಬಳೆ ಮತ್ತು ಇತರ ಕತೆಗಳು | ಶಾಂತಾರಾಮ ಸೋಮಯಾಜಿ | 30/- |
| *5. | ಹಂಗಿನರಮನೆಯ ಹೊರಗೆ | ಡಾ. ರಾಜಶೇಖರ ನೀರಮಾನ್ವಿ | 60/- |
| *6. | ಅನಾಥ ಪಕ್ಷಿಯ ಕಲರವ | ವೀರಭದ್ರ | 125/- |
| *7. | ಕಾಳಬೆಳುದಿಂಗಳ ಸಿರಿ | ರಾಜಶೇಖರ ಹತಗುಂದಿ | 45/- |
| *8. | ಹಣದಿ | ಶಿವಕುಮಾರ ನಾಗವಾರ | 60/- |
| *9. | ಪಟ್ಟಾ | ಚಿತ್ರಶೇಖರ ಕಂಠಿ | 45/- |
| *10. | ಉಡಿಯಲ್ಲಿಯ ಉರಿ | ಕಲಿಗಣನಾಥ ಗುಡದೂರು | 45/- |
| *11. | ಮಣ್ಣಿನ ಕುಡಿಕೆ | ಡಾ. ಮಲ್ಲಿಕಾರ್ಜುನ ವಣೇನೂರು | 50/- |
| *12. | ಹಂಸೆ ಹಾರಿತ್ತು | ಬಿದರಹಳ್ಳಿ ನರಸಿಂಹಮೂರ್ತಿ | 75/- |
| *13. | ಬಾಳೆಗಿಡ ಗೊನೆಹಾಕಿತು | ಬಿ. ಎಂ. ಬಶೀರ್ | 30/- |
| *14. | ವಾಸ್ತವದ ಕನವರಿಕೆ | ಡಿ. ಬಿ. ರಜಿಯಾ | 30/- |
| *15. | ತಪ್ಪಂಡ | ಡಾ. ಬಸವರಾಜ ಸಾದರ | 45/- |
| *16. | ಹುಡುಕಾಟ | ಅಬ್ಬಾಸ್ ಮೇಲಿನಮನಿ | 60/- |
| *17. | ಪ್ರಕ್ಷುಬ್ಧ ಅಲೆಗಳು | ಡಾ. ಪ್ರಹ್ಲಾದ ಅಗಸನಕಟ್ಟೆ | 40/- |
| *18. | ಲದೇಣಿಯಾ | ಕೃಷ್ಣ ನಾಯಕ್ | 50/- |
| *19. | ಮೀಯುವ ಆಟ | ಡಾ. ಎಚ್. ನಾಗವೇಣಿ | 60/- |
| *20. | ಕಾಡಿನ ಬೇರು | ಡಾ. ಶಾಂತರಸ ಹೆಂಬೇರಾಳು | 35/- |
| 21. | ವಸುಂಧರೆಯ ಗ್ಯಾನ | ಡಾ. ಎಚ್. ನಾಗವೇಣಿ | 40/- |
| 22. | ಸದ್ದಕಿದು ಹುಚ್ಚರ ಸಂತಿ | ಹಸನ್ ನಯೀಂ ಸುರಕೋಡ | 50/- |
| *23. | ಮೋಹನ ದಾಸ | ಆರ್. ಪಿ. ಹೆಗಡೆ | 50/– |
| 24. | ಬೇರುಗಳು | ವೆಂಕಟೇಶ ಮಾಚಕನೂರ | 50/– |
| 25. | ತೂತು ಬೊಟ್ಟು | ಕಲಿಗಣನಾಥ ಗುಡದೂರು | 60/- |

## ಕಾವ್ಯ

| | | | |
|---|---|---|---|
| *26. | ಹಟವಾದಿ ಮತ್ತು ಹುಡುಗಿ | ಡಾ. ಬೂದಗುಪ್ಪ ಪ್ರಹ್ಲಾದರೆಡ್ಡಿ | 60/- |
| *27. | ಗಾಂಧಿಯೊಂದಿಗೆ | ಪ್ರಮೋದ್ ತುರ್ವಿಹಾಳ್ | 30/- |
| 28. | ಆ ಅಜ್ಜ - ಈ ಮೊಮ್ಮಗ | ಮುದೇನೂರ ಸಂಗಣ್ಣ | 75/- |
| *29. | ತಮಾಷಾ | ವಿಕ್ರಮ ವಿಸಾಜಿ | 45/- |
| *30. | ಜಾಲಿ ಹೂಗಳ ನಡುವೆ | ಬಿ. ಪೀರ್ ಬಾಷ | 45/- |
| *31. | ಮರಾಠಿ ದಲಿತ ಕಾವ್ಯ | ಡಾ. ಸರಜೂ ಕಾಟ್ಕರ್ | 75/- |
| *32. | ಕೆಡಹಬಲ್ಲರು ಅವರು ಕಟ್ಟಬಲ್ಲೆವು ನಾವು | ಪ್ರೊ. ಅಲ್ಲಮಪ್ರಭು ಬೆಟ್ಟದೂರು | 35/- |
| *33. | ಗಾಂಧೀಗಿಡ | ಸತೀಶ್ ಕುಲಕರ್ಣಿ | 35/- |
| *34. | ಕಣ್ಣಮುಂದಿನ ಬೆಳಕು | ದಸ್ತಗೀರ್‌ಸಾಬ್ ದಿನ್ನಿ | 35/- |
| *35. | ಸಿಸಿಫಸ್‌ರ ಸುತ್ತು | ಡಾ. ಬಸರಾಜ ಸಾದರ | 50/- |
| *36. | ಕದವಿಲ್ಲದ ಊರಲ್ಲಿ | ಜಿ. ಕೆ. ರವೀಂದ್ರಕುಮಾರ್ | 75/- |
| *37. | ಅವ್ವ | ಡಾ. ಸರಜೂ ಕಾಟ್ಕರ್ | 60/- |
| 38. | ಕಣ್ಣುಚ್ಚಿ ಕಂಡವರು | ಶಂಕರ ಪಾಟೀಲ | 35/- |

| | | |
|---|---|---|
| *39. ಸುನೀತ ಸಂಪದ | ಚೆನ್ನವೀರ ಕಣವಿ | 100/- |
| *40. ಮಳೆಯೇ ಮಂಟಪ | ಎಚ್. ಎಸ್. ಶಿವಪ್ರಕಾಶ್ | 50/- |
| *41. ಬಾಂಬ್ ವಿರೋಧಿ ಪಾಕಿಸ್ತಾನಿ ಕವಿತೆಗಳು | ಡಾ. ಸರಜೂ ಕಾಟ್ಕರ್ | 30/- |
| 42. ಈ ಮಣ್ಣು ಅಪ್ಪಿಕೊಳ್ಳುವ ಮುನ್ನ... | ಗವಿಸಿದ್ಧ ಎನ್. ಬಳ್ಳಾರಿ | 75/- |
| *43. ಮಗುಮಲಗಿದ ಎದೆಯಮೇಲೆ | ಎಂ. ಡಿ. ಒಕ್ಕುಂದ | 35/- |
| *44. ಚಿತ್ತಾರ | ಡಾ. ಸಬಿಹಾ ಭೂಮಿಗೌಡ | 40/- |
| *45. ಬಾಗಿಲಾಚೆಯ ಮೌನ | ರೂಪ ಹಾಸನ | 50/- |
| 46. ಕಂಪನಿ ಸವಾಲ್ | ಸತೀಶ ಕುಲಕರ್ಣಿ | 50/- |
| *47. ನೂರು ಗೋರಿಯ ದೀಪ | ಡಾ. ವಿನಯಾ | 35/- |
| *48. ಉರಿವ ಒಲೆಗಳ ಮುಂದೆ | ಆರ್. ನಿರ್ಮಲ | 25/- |
| *49. ಗಾಂಧೀ ಟು ಗೋದ್ರಾ | ಡಾ. ಸರಜೂ ಕಾಟ್ಕರ್ | 35/– |
| 50. ದರುಶನ | ಸವಿತಾ ನಾಗಭೂಷಣ | 40/– |
| 51. ಲೋಹದ ಕಣ್ಣು | ಡಾ. ಎಚ್. ಎಲ್. ಪುಷ್ಪ | 50/– |
| 52. ಪುಟಾಣಿ ಕೆಂಪು ಶೂ | ಛಾಯಾ ಭಗವತಿ | 30/– |
| 53. ಕಡಲಿಗೆಷ್ಟೊಂದು ಬಾಗಿಲು | ರೂಪ ಹಾಸನ | 50/- |
| 54. ರಜಿಯಾ ಅವರ ಕವಿತೆಗಳು | ಡಿ. ಬಿ. ರಜಿಯಾ | 50/- |
| 55. ವರನಂದಿ ಪ್ರತಿಮೆ | ಜ್ಯೋತಿ ಗುರುಪ್ರಸಾದ್ | 50/- |
| 56. ಬಯಲ ಬಾನಿನಲ್ಲಿ | ಆಚಾರ್ಯ ರೂಪಚಂದ್ರ<br>ಅನು : ಡಾ. ಪಂಚಾಕ್ಷರಿ ಹಿರೇಮಠ | 40/- |

## ಕಾದಂಬರಿ

| | | |
|---|---|---|
| *57. ಮಾಂಡೋವಿ | ರವಿ ಬೆಳಗೆರೆ | 60/- |
| *58. ಶಾಮಣ್ಣ | ಕುಂ. ವೀರಭದ್ರಪ್ಪ | 175/- |
| 59. ಗಾಂಧಿ ಬಂದ | ಎಚ್. ನಾಗವೇಣಿ | 175/- |
| 60. ಬದುಕು | ಗೀತಾ ನಾಗಭೂಷಣ | 216/- |
| 61. ಪುತ್ತ | ಬಾಳಾಸಾಹೇಬ ಲೋಕಾಪುರ | 100/- |
| *62. ಲೋಟಸ್ ಪಾಂಡ್ | ತಾರಾಭಟ್ | 50/- |
| *63. ಚಾಕ್ರಿ ನಿಂಬಜ್ಜ | ಬ್ರಹ್ಮದೇವ್ ಪಡಳಗಿ | 30/- |
| *64. ರಂಗನೋ ಮಲೆ ಮಂಗನೋ! | ಮುಹಮ್ಮದ್ ಕುಳಾಯಿ | 30//- |
| *65. ಕೆರೂರುನಾಮಾ | ಚಂದ್ರಕಾಂತ ಕುಸನೂರ | 60/- |
| *66. ಅತಂತ್ರ | ಗುರುರಾಜ ಮಾರ್ಪಳ್ಳಿ | 50/- |
| 67. ಜನ್ನತ್ ಮೊಹಲ್ಲಾ | ಅಬ್ಬಾಸ್ ಮೇಲಿನಮನಿ | 100/– |
| 68. ಬಿಡುಗಡೆ | ಜಿ. ಬಾಲಚಂದ್ರನ್<br>ಅನು : ಕೆ.ಕೆ. ನಾಯರ್ | 350/– |

## ಪ್ರವಾಸ ಕಥನ

| | | |
|---|---|---|
| 69. ನನ್ನೊಳಗಿನ ಹಾಡು ಕ್ಯೂಬಾ | ಜಿ. ಎನ್. ಮೋಹನ್ | 50/- |
| *70. ಪಂಚಮುಖಿ ಪಂಜಾಬ್ | ಜಿ. ಪಿ. ಬಸವರಾಜು | 60/- |
| *71. ನಾ ಕಂಡ ಬ್ರಝಿಲ್ | ಡಾ. ಸಿ. ನಾಗಭೂಷಣ | 60/- |
| 72. ಥೇಮ್ಸ್‌ದಿಂದ ಟೈಬರ್‌ವರೆಗೆ | ವೆಂಕಟೇಶ ಮಾಚಕನೂರ | 50/- |
| 73. ಆಗ್ನೇಯದಂಗಳದಲ್ಲಿ | ವೆಂಕಟೇಶ ಮಾಚಕನೂರ | 60/- |
| *74. ಕುಲು ಕಣಿವೆಯಲ್ಲಿ | ಜಿ.ಪಿ. ಬಸವರಾಜು | 60/– |

## ವೈಚಾರಿಕ ಮತ್ತು ಇತರೆ

| | | | |
|---|---|---|---|
| 75. | ಲೋಹಿಯಾ | ಹಸನ್‌ನಯೀಂ ಸುರಕೋಡ | 120/- |
| *76. | ಸರಳಸಿದ್ಧರಾಮ ಚರಿತೆ | ಡಾ. ಎಲ್. ಬಸವರಾಜು | 60/- |
| *77. | ಶ್ರೀ ಮಧುರಚೆನ್ನರ ಸ್ಮೃತಿಗಳು | ಡಾ. ಸಿಂಪಿ ಲಿಂಗಣ್ಣ | 60/- |
| *78. | ಕಾಡು ಮತ್ತು ತೋಪು | ವಿ. ಚಂದ್ರಶೇಖರ ನಂಗಲಿ | 90/- |
| *79. | ಅಮೃತ ಮತ್ತು ವಿಷ | ರಂಜಾನ್ ದರ್ಗಾ | 75/- |
| *80. | ಶತಮಾನ | ಮೊಗಳ್ಳಿ ಗಣೇಶ | 50/- |
| *81. | ಅಣುವೆಂಬ ಸದ್ದಿಲ್ಲದ ಸಾವ ಕುರಿತು | ಎನ್. ಜಗದೀಶ ಕೊಪ್ಪ | 25/- |
| 82. | ನಿರ್‌ಬೀಜೀಕರಣದ ವಿರಾಟ್ ಸ್ವರೂಪ | ವಿ. ಚಂದ್ರಶೇಖರ ನಂಗಲಿ | 12/- |
| *83. | ಬುದ್ಧ ಚರಿತೆ | ಡಾ. ಎಲ್. ಬಸವರಾಜು | 180/- |
| 84. | ಸೌಂದರನಂದ | ಡಾ. ಎಲ್. ಬಸವರಾಜು | 150/- |
| *85. | ನೀರದೀವಿಗೆ | ಡಾ. ಕೆ. ವೈ. ನಾರಾಯಣಸ್ವಾಮಿ | 100/- |
| *86. | ನಮ್ಮ ಬಡತನ ಸಂವಿಧಾನಕ್ಕೊಂದು ಕಳಂಕ | ಜಸ್ವೀರ್ ಸಿಂಗ್ | 25/- |
| *87. | ಅಲ್ಲಮ್ಮನ ವಚನ ಚಂದ್ರಿಕೆ | ಡಾ. ಎಲ್. ಬಸವರಾಜು | 250/- |
| *88. | ಸೂಳೆ ಸಂಕವ್ವೆ (ನಾಟಕ) | ಮುದೇನೂರ ಸಂಗಣ್ಣ | 50/- |
| 89. | ಚಾತುರ್ವರ್ಣ ಧರ್ಮದರ್ಶನ | ಕುಮಾರ ಕಕ್ಕಯ್ಯ ಪೋಳ | 75/- |
| *90. | ನಾ ನಿಮ್ಮೊಳಗು | ಪ್ರೊ. ವಿ. ಚಂದ್ರಶೇಖರ ನಂಗಲಿ | 100/- |
| *91. | ಬಗೆ | ಡಾ. ಸಬಿಹಾ ಭೂಮಿಗೌಡ | 60/- |
| *92. | ಹಣತೆ: ಜಿ.ಎಸ್.ಎಸ್. ಅಭಿನಂದನ ಗ್ರಂಥ | | 300/- |
| *93. | ಎಸ್. ನಿಜಲಿಂಗಪ್ಪ : ಒಂದು ಅಧ್ಯಯನ | ಕೋ. ಚೆನ್ನಬಸಪ್ಪ | 125/- |
| 94. | ಬಸವಪ್ರಜ್ಞೆ | ರಂಜಾನ್ ದರ್ಗಾ | 15/- |
| 95. | ಹುತಾತ್ಮ ಭಗತ್‌ಸಿಂಗ್ | ಜಿ. ಪಿ. ಬಸವರಾಜು | 60/- |
| *96. | ಗುಣಗೌರವ | ಜಿ. ಎಚ್. ನಾಯಕ | 75/- |
| *97. | ಜೀವನಸಂಧ್ಯಾ | ಡಾ. ಕೃಷ್ಣಮೂರ್ತಿ ಕಿತ್ತೂರ | 75/- |
| *98. | ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ | ಡಾ. ಜೆ. ಎಂ. ನಾಗಯ್ಯ | 100/- |
| *99. | ನೊಂದವರ ನೋವು | ಮೂಡ್ನಾಕೂಡು ಚಿನ್ನಸ್ವಾಮಿ | 60/- |
| *100. | ಸಾಕ್ಷಿ | ಡಾ. ಸರಜೂ ಕಾಟ್ಕರ್ | 50/- |
| 101. | ಸಲ್ಲಲಿತ ಸನ್ಮಾರ್ಗ | ಚೆನ್ನಬಸವಪ್ಪ ಬೆಟ್ಟದೂರು | 30/- |
| *102. | ಪ್ರೇಮಲೋಕದ ಮಾಯಾವಿ | ಹಸನ್ ನಯೀಂ ಸುರಕೋಡ | 45/- |
| *103. | ಶರಣ ಬಂಡಾಯ | ಡಾ. ಸರಜೂ ಕಾಟ್ಕರ್ | 50/- |
| *104. | ಜಯಪ್ರಕಾಶ್ ನಾರಾಯಣ | ಡಿ. ಎಸ್. ನಾಗಭೂಷಣ | 100/- |
| *105. | ಬೆಳಗಿನ ಬೆರಗು | ಜಿ. ಎನ್. ಮಲ್ಲಿಕಾರ್ಜುನ | 75/- |
| *106. | ರಸೀದಿ ತಿಕೀಟು | ಹಸನ್‌ನಯೀಂ ಸುರಕೋಡ | 100/- |
| *107. | ನಡುಹಗಲಿನಲ್ಲಿ ಕಂದೀಲುಗಳು | ಡಾ. ರಾಜೇಂದ್ರ ಚೆನ್ನಿ | 125/- |
| *108. | ಕುವೆಂಪು-ಒಂದು ಪುನರನ್ವೇಷಣೆ | ಡಿ.ಎಸ್. ನಾಗಭೂಷಣ | 150/- |
| 109. | ಬಸವಣ್ಣನವರ ದೇವರು | ರಂಜಾನ್ ದರ್ಗಾ | 15/- |
| *110. | ಹಿಂದೂ ಮಂದಿರಗಳು ಹಾಗೂ ಔರಂಗಜೇಬನ ಆದೇಶಗಳು | ಹಸನ್ ನಯೀಂ ಸುರಕೋಡ | 20/- |
| *111. | ನಮ್ಮೊಡನೆ ನಮ್ಮ ನುಡಿ | ಡಾ. ಕೆ. ವಿ. ನಾರಾಯಣ | 50/- |
| *112. | ಅನೇಕ | ಡಿ. ಎಸ್. ನಾಗಭೂಷಣ | 125/- |

| | | | |
|---|---|---|---|
| *113. | ಖರೇ ಖರೇ ಸಂಗ್ಯಾ-ಬಾಳ್ಯಾ | ಡಾ. ಎಂ.ಎಂ. ಕಲಬುರ್ಗಿ | 30/- |
| 114. | ಶಿವಾಜಿ ಮೂಲ ಕನ್ನಡ ನೆಲ | ಡಾ. ಸರಜೂ ಕಾಟ್ಕರ್ | 100/- |
| *115. | ಅಯೋಧ್ಯೆ-ವಿನಾಶಕಾರಿ ವೋಟ್ ಬ್ಯಾಂಕ್ ರಾಜಕೀಯ | ಹಸನ್ ನಯೀಂ ಸುರಕೋಡ | 25/- |
| 116. | ಮನೆಯೊಡೆಯನಿದ್ದಾನೋ | ಎಸ್.ಜಿ. ಮೈಸೂರು ಮಠ | 150/- |
| 117. | ಲಿಂಗವ ಪೂಜಿಸಿ ಫಲವೇನಯ್ಯಾ? | ರಂಜಾನ್ ದರ್ಗಾ | 25/– |
| 118. | ಅರಿವಿನ ನಡೆ | ಡಾ. ಕವಿತಾ ರೈ | 50/– |
| 119. | ಬದುಕಿಗಾಗಿ ಶಿಕ್ಷಣ | ಅರವಿಂದ ಚೊಕ್ಕಾಡಿ | 40/– |
| 120. | ಕರ್ನಾಟಕ ಏಕೀಕರಣ | ಕೋ. ಚೆನ್ನಬಸಪ್ಪ | 60/– |
| *121. | ಮರಳಿ ಬರಲಿದೆ ಸಮಾಜವಾದ | ಡಿ. ಎಸ್. ನಾಗಭೂಷಣ | 60/– |
| 122. | ಬಸವ ಧರ್ಮದ ವಿಶ್ವ ಸಂದೇಶ | ರಂಜಾನ್ ದರ್ಗಾ | 15/– |
| 123. | ರೈತ ಭಾರತ : ಅವಸಾನದ ಅಂಚಿನಲ್ಲಿ | ಡಿ.ಎಸ್. ನಾಗಭೂಷಣ | 20/– |
| 124. | ಆ ಗಣರಾಜ್ಯ – ಈ ಕರ್ನಾಟಕ | ಡಿ.ಎಸ್. ನಾಗಭೂಷಣ | 60/– |
| 125. | ಪಡುವಣದ ಕಡಲು | ಸುನಂದಾ ಪ್ರಕಾಶ ಕಡಮೆ | 45/– |
| 126. | ಇಸ್ಲಾಂ : ಹುಟ್ಟು ಮತ್ತು ವಿಕಾಸ | ಹನಸ್ ನಯೀಂ ಸುರಕೋಡ | 125/– |
| 127. | ವಸಿಷ್ಠರು ಮತ್ತು ವಾಲ್ಮೀಕಿಯರು | ಡಿ.ಎಸ್. ನಾಗಭೂಷಣ | 150/– |
| 128. | ಕೋಮು ಗಲಭೆಗಳು ಹಾಗೂ ಭಾರತದ ಪೋಲೀಸರು | ಹಸನ್ ನಯೀಂ ಸುರಕೋಡ | 60/– |
| *129. | ರಂಗಕೋಗಿಲೆ ಜುಬೇದಾಬಾಯಿ | ವೀಣಾ ಕುಲಕರ್ಣಿ | 45/– |
| 130. | ಪ್ರತಿಚಿಂತನೆ | ಹನಸ್ ನಯೀಂ ಸುರಕೋಡ | 150/– |
| *131. | ಇಲ್ಲದ ತೀರದಲ್ಲಿ | ಅರವಿಂದ ಚೊಕ್ಕಾಡಿ | 60/– |
| 132. | ಕರ್ಪೂರಿ ಠಾಕೂರ್ ಹಾಗೂ ಸಮಾಜವಾದ | ಹನಸ್ ನಯೀಂ ಸುರಕೋಡ | 150/– |
| 133. | ಮೂರನೆಯ ಇರವು | ಅರವಿಂದ ಚೊಕ್ಕಾಡಿ | 40/– |
| 134. | ರಾಜಕೀಯದ ಮಧ್ಯೆ ಬಿಡುವು | ಎಂ.ಪಿ. ಪ್ರಕಾಶ್ | 100/– |
| 135. | ಕೌದಿ ಕಂಬಳಿ | ವೆಂಕಟೇಶ ಮಾಚಕನೂರ | 50/– |
| 136. | ನಾನು ಪಾಟೀಲ ಪುಟ್ಟಪ್ಪ | ಡಾ. ಸರಜೂ ಕಾಟ್ಕರ್ | 200/– |
| 137. | ಬೆಳಗು (ನಾಟಕ) | ಡಾ. ಬಸವಪ್ರಭು ಪಾಟೀಲ ಬೆಟ್ಟದೂರು | 40/– |
| 138. | ಎರಡು ಕಿರು ನಾಟಕಗಳು | ಎಸ್. ಮಾಲತಿ | 25/– |
| 139. | ಹೊಸ ದಿಕ್ಕು | ಎಸ್. ಮಾಲತಿ | 75/– |
| 140. | ನೀಲಗಂಗಯ್ಯ ಪೂಜಾರ್ | ಬಿ. ಪೀರ್‌ಬಾಷ | 60/– |
| 141. | ಲೋಹಿಯಾ : ವ್ಯಕ್ತಿ–ವಿಚಾರ–ವಿಮರ್ಶೆ | ಸಂ. : ಡಿ.ಎಸ್. ನಾಗಭೂಷಣ | 150/– |
| 142. | ನೆನಪುಗಳು : ಚಂಪಾ ಲಿಮಯೆ | ಅನು : ಡಾ. ಸರಜೂ ಕಾಟ್ಕರ್, ಪ್ರೊ. ಎ.ಬಿ. ಘಾಟಗೆ | 60/– |
| 143. | ಆತ್ಮಕಥೆ : ಮಧುಲಿಮಯೆ | ಅನು : ಡಾ. ಸರಜೂ ಕಾಟ್ಕರ್ | 180/– |
| 144. | ಭಾರತದಲ್ಲಿ ಕೋಮುದ್ವೇಷ | ಡಾ. ಕೋ. ಚೆನ್ನಬಸಪ್ಪ | 100/– |
| 145. | ನಡೆ ನುಡಿ ಸಿದ್ಧಾಂತ | ರಂಜಾನ್ ದರ್ಗಾ | 25/– |
| 146. | ಒಲವು ನಮ್ಮ ಬದುಕು | ಸುದೇಶ ದೊಡ್ಡಪಾಳ್ಯ | 50/– |
| 147. | ಸತ್ಯದ ಹುಡುಕಾಟ | ನಿರೂಪಣೆ : ಎಂ.ಕೆ. ವಿರೂಪಾಕ್ಷಪ್ಪ | 180/– |
| 148. | ಹೂ ಮನಸ್ಸಿನ ಹೋರಾಟಗಾರ ಹಾಗೂ ಇತರ ಲೇಖನಗಳು | ಸವಿತಾ ನಾಗಭೂಷಣ | 125/– |

* ಪ್ರತಿಗಳು ಮುಗಿದಿವೆ



... ಸದ್ಯದ ನಮ್ಮ ಸ್ಥಿತಿ ಹೇಗಿದೆಯೆಂದರೆ, ಹುಡುಗರ ಬೆನ್ನಿಗೆ ಬಾಸುಂಡ
ಬರುವ ಹಾಗೆ ಚೆಂಡು ಬೀಸಿ ಲಗೋರಿ ಹಾಡುತ್ತಿದ್ದ ಹುಡುಗಿ 'Time please
ಎಂದು ಕಿರು ಬೆರಳೆತ್ತಿ ಮನೆಗೆ ಧಾವಿಸಿ, ದೊಡ್ಡಕ್ಕನ ಮದುವೆಗೆ ಸಂಬಂಧಪಟ್ಟಂ
ಅಜ್ಜಿ, ಅಮ್ಮ, ಇತರೆ ಹೆಂಗೆಳೆಯರ ಮಾತಿಗೆ ಮನಸೋತು 'ಲಗೋರಿ'ಯನ್ನೂ
ಮರೆತು ಅಲ್ಲೇ ಕುಳಿತುಬಿಟ್ಟ ಹಾಗೆ! ಒಂದೆಡೆ ಮದುವೆ, ಮನೆ, ಮಕ್ಕಳು, ಅಡಿಗೆ ... ಈ
ಚಕ್ರವ್ಯೂಹದೊಳಗೆ ಪ್ರವೇಶಿಸುವ ಹುಮ್ಮಸ್ಸು. ಆದರೆ ಅಭಿಮನ್ಯುವಿನ ಪಾಡು
ಪಡಬಾರದೆಂಬ ಕಟ್ಟೆಚ್ಚರ. ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ ಎಂಬ ಸ್ಥಿತಿ
ದಡದಲ್ಲೊಂದು ಕಾಲು, ದೋಣಿಯಲ್ಲೊಂದು. ಈ ಸಂದಿಗ್ಧದ ಖಾಯಂ ಫಲಗಳಾದ
ದುಃಖ ದುಮ್ಮಾನ, ಜಿಗುಪ್ಸೆ, ಬೇಸರ, ಆತಂಕ, ನಿರೀಕ್ಷೆ ಸದ್ಯ ನಮ್ಮನ್ನು
ಎಡಬಿಡಂಗಿಗಳನ್ನಾಗಿ ಮಾಡಿದೆ. ಒಂದು ಸಮಸ್ಯೆಯ ಪರಿಹಾರದ ಹೊಟ್ಟೆಯಲ್ಲೇ
ಮತ್ತೊಂದು ಸಮಸ್ಯೆಯು ಮಿಸುಕಾಡಲು ಮೊದಲುಗೊಳ್ಳುವುದರಿಂದ ಆ ಸಂದಿಗ್ಧ
ಮುಗಿಯುವುದು ಎಂದು ಎಂಬ ನಿರೀಕ್ಷೆ ಇಟ್ಟುಕೊಳ್ಳುವುದು ಎಷ್ಟು ಸಾಧು? ಸದ
ನಾನು ಪೆನ್ನು ಹಿಡಿದು ನಾಲ್ಕು ಅಕ್ಷರ ಗೀಚುತ್ತಿರುವ ಸದ್ಯದ ಪರಿಸ್ಥಿತಿ ಯಾರ
ಪರಿಶ್ರಮದ್ದು? ಅದೆಷ್ಟೋ ಶತಮಾನಗಳ ಹಿಂದಣ ಹೆಣ್ಣು ಮಕ್ಕಳ ಎಚ್ಚರ, ವಿವೇಕ
ಆಕಾಂಕ್ಷೆ ಮತ್ತು ಪ್ರತಿಭಟನೆಯ ಅಲೆಗಳನ್ನು ಹಿಡಿಯಬೇಕಾಗುತ್ತದೆ. ಸದ್ಯ ನಾವು
ಉತ್ತು ಬಿತ್ತಿದ ಬೀಜ ಚಿಗುರಿ, ಮರವಾಗಿ ಯಾರಿಗೆ ನೆರಳು ನೀಡುತ್ತದೆಯೋ...
ಯಾರು ಬಲ್ಲರು? ಅಲೆಗಳು ಚಲಿಸುತ್ತಲೇ ಇರುತ್ತವೆ. ಅವನ್ನು ಹಿಡಿಯಲು
ಸಾಧ್ಯವೇ?

('ಬೆವರ ಬಸಿದು, ಉಸಿರ ಕುದಿಸಿ...')



ಲೋಹಿಯಾ ಪ್ರಕಾಶನ
ಬಳ್ಳಾರಿ



ISBN 81-87731-25-7
9788187731252

₹ 125/-